
























ಭಾರತೀಯ ಜನಕಲಾ ಸಮಿತಿ (ಇಪ್ಟಾ) ಕರ್ನಾಟಕ ರಾಜ್ಯಮಂಡಲಿಯಿಂದ 'ಸ್ವಾತಂತ್ರ್ಯಯಾನ' ಎಂಬ ವಿಶಿಷ್ಟ ಕಾರ್ಯಕ್ರಮವನ್ನು ದಿನಾಂಕ 15–8–2015ರಂದು ಬೆಂಗಳೂರಿನ ಚಿತ್ರಕಲಾ ಪರಿಷತ್ತಿನಲ್ಲಿ ನಡೆಸಲಾಯಿತು. ಸ್ವಾತಂತ್ರ್ಯದ ಇಂದಿನ ಸ್ಥಿತಿ ಕುರಿತ ಹಾಡು, ನಾಟಕ, ನೃತ್ಯ, ದೊಡ್ಡಾಟ, ತೊಗಲುಗೊಂಬೆಯಾಟ ಮುಂತಾದ ಕಲಾ ಪ್ರಕಾರಗಳ ಪರಿಣಾಮಕಾರಿ ಪ್ರಯೋಗದ ಒಂದು ನೋಟ. ಅತಿಥಿಗಳಾಗಿ ಶ್ರೀ ಎಂ. ಎಸ್. ಸತ್ಯು, ಪ್ರಸನ್ನ, ಪ್ರೊ॥ ಸಂಪಿಗೆ ತೋಂಟದಾರ್ಯ, ಪ್ರೇಮ್, ದು. ಸರಸ್ವತಿ, ಡಾ॥ ಸಿದ್ದನಗೌಡ ಪಾಟೀಲ, ಎಂ. ಸಿ. ನರಸಿಂಹನ್, ಟಿ. ಆರ್. ರೇವಣ್ಣ ಮುಂತಾದ ಗಣ್ಯರು ಭಾಗವಹಿಸಿದ್ದರು.





# ಹೊಸತು

ಒಳಗೇನಿದೆ?

## ನೆಮ್ಮದಿಯ ನಾಳೆ ನಮ್ಮದು




**ಚಿತ್ರಗಳು** : ಕಮಲಂ ಅರಸು, ವಿ. ಗೋಪಾಲ್, ತನು,
ರಾಂಚಂದ್ರ ಕೊಪ್ಪಲು, ಜಿಎಂಬೊ, ಗೋಪಿ
**ಮುಖಪುಟ** : ಅಬ್ದುಲ್ ಕಲಾಂ ಸ್ಮರಣೆ
**ವಿನ್ಯಾಸ** : ನವಕರ್ನಾಟಕ ವಿನ್ಯಾಸ
**ಕಚೇರಿ ಸಹಕಾರ** : ಜಿ. ವಿ. ತೇಜೋವತಿ


## ಈ ತಿಂಗಳು




ದಿನ ರಾಷ್ಟ್ರಾಧ್ಯಕ್ಷ ಅಬ್ದುಲ್ ಕಲಾಂ ಅವರ ನಿಧನಕ್ಕೆ 'ಹೊಸತು' ಸಂತಾಪ ವ್ಯಕ್ತಪಡಿಸಿದೆ. ಅವರನ್ನು ಕುರಿತ ನೂರಾರು ಲೇಖನಗಳು, ನೆನಪುಗಳು, ಮಾಧ್ಯಮಗಳಲ್ಲಿ ಪ್ರಕಟಗೊಂಡಿವೆ. ಅನೇಕ ರೀತಿಯಲ್ಲಿ ಅವರೊಬ್ಬ ಅಸಾಧಾರಣ ವ್ಯಕ್ತಿ ಎಂಬುದರಲ್ಲಿ ಸಂಶಯವಿಲ್ಲ. ಯಾವುದೇ ವ್ಯಕ್ತಿ ಇರಲಿ, ಆತ ಅಥವಾ ಆಕೆ ಎಷ್ಟೇ ಉನ್ನತ ಸ್ಥಾನವನ್ನು ಅಲಂಕರಿಸಿರಲಿ, ಅಂಥವರ ಬಗೆಗೆ ಅಭಿಪ್ರಾಯಗಳನ್ನು ಮಂಡಿಸುವಾಗ ಕಿಂಚಿತ್ತಾದರೂ ವಸ್ತುನಿಷ್ಠತೆಗೆ ಬದ್ಧರಾಗಿರಬೇಕಾದ್ದು ಅವಶ್ಯಕ ಮತ್ತು ಆರೋಗ್ಯಕರ. ಮೃತ್ಯುವು ಎಲ್ಲರಿಗೂ ದೊರಕುವುದು ಖಚಿತ. ಅದು ಆಪತ್ತೋ ಅಥವಾ ಸಂಪತ್ತೋ ಎನ್ನುವುದು ಪ್ರತಿಯೊಬ್ಬರ ಆಯ್ಕೆಗೆ ಬಿಟ್ಟಿದ್ದು. ಕಲಾಂ ಅವರಿಗೆ ಅದು ಆಪತ್ತಾಯಿತು, ಏಕೆಂದರೆ ಅವರು ಹುರುಪಿನಿಂದ ಬಹಳ ಕ್ರಿಯಾಶೀಲರಾಗಿದ್ದರು. ವೈದ್ಯಕೀಯದ ಸೌಲಭ್ಯ ಅವರಿಗೆ ಬೇಕಾದಷ್ಟಿತ್ತು, ಆದರೆ ಅದನ್ನವರು ಸರಿಯಾಗಿ ಬಳಸಿಕೊಳ್ಳಲಿಲ್ಲ. ಹೃದಯದ ಕ್ರಿಯೆಯನ್ನು ಯಥಾರ್ಥವಾಗಿ ತಿಳಿಯುವ ಸಾಧನಗಳು ಇಂದು ಬೇಕಾದಷ್ಟಿವೆ, ಆದರೆ ಕಲಾಂ ಅವರು ತಮ್ಮನ್ನು ತಾವು ಪರೀಕ್ಷೆಗಳಿಗೆ ಒಡ್ಡಿಕೊಳ್ಳಲಿಲ್ಲ. ಒಬ್ಬ ಉನ್ನತ ಮಟ್ಟದ ವಿಜ್ಞಾನಿಯಾಗಿ ಅವರೇಕೆ ಸೂಕ್ತ ತಪಾಸಣೆ ಮಾಡಿಸಿಕೊಳ್ಳುತ್ತಿರಲಿಲ್ಲವೆಂಬುದು ಆಶ್ಚರ್ಯಕರ. ವಿಮಾನದಲ್ಲಿ ಕೂತು ಪದ್ಯಗಳನ್ನು ಬರೆಯುತ್ತಿದ್ದ ಮಾನ್ಯರು ಆಗಾಗ್ಗೆ "ಟ್ರೆಡ್‌ಮಿಲ್ ಟೆಸ್ಟ್" ಮಾಡಿಸಿಕೊಳ್ಳುತ್ತಿದ್ದರೆ ಇಂದು ಅವರಿನ್ನೂ ನಮ್ಮ ನಡುವೆ ಇರುತ್ತಿದ್ದರು. ಸೌಲಭ್ಯ ದಕ್ಕದಿದ್ದಾಗಿನ ಪರಿಸ್ಥಿತಿ ಕಲಾಂ ಅವರಿಗೆ ಉಂಟಾಗಬಾರದಿತ್ತು, ಆದರೆ 'ರತ್ನ'ವನ್ನು ನಾವು ಕಳೆದುಕೊಂಡಿದ್ದೇವೆ. ಅವರ "೨೦೨೦ರ ಮುನ್ನೋಟ"ವನ್ನು ಅವರನ್ನು ಅಧ್ಯಕ್ಷರನ್ನಾಗಿ ಆಯ್ಕೆ ಮಾಡಿದ ಪಕ್ಷವು ಕಾರ್ಯಗತಗೊಳಿಸುವ ಜವಾಬ್ದಾರಿ ಹೊರಬೇಕಾಗಿದೆ. ಪ್ರಧಾನಿ ನರೇಂದ್ರ ಮೋದಿಯವರು ದುಬೈ ಮುಂತಾದೆಡೆಗಳಲ್ಲಿ ಮಾತನಾಡಿದಾಗಿನ ದೈಹಿಕ ಮತ್ತು ವಾಚಿಕ ವೈಖರಿಯನ್ನು ಗಮನಿಸಿದರೆ ಮುನ್ನೋಟದ ಸಿದ್ಧಿಯು ಅನುಮಾನಾಸ್ಪದ ಎನಿಸುತ್ತದೆ. ಆದರೆ ಮುನ್ನೋಟದ ಗುರಿಯನ್ನು ನಾವು ಕಳೆದುಕೊಳ್ಳಬಾರದು. ಮಾನ್ಯ ಕಲಾಂ ಅವರ ಬಗೆಗಿನ ಇನ್ನೊಂದಂಶವನ್ನು ಗುರುತಿಸಲು ನಾವಾರೂ ಮುಜುಗರ ಪಟ್ಟುಕೊಳ್ಳಬಾರದು. ಪ್ರತಿಯೊಬ್ಬರಿಗೂ ಆಯ್ಕೆಯ ಸ್ವಾತಂತ್ರ್ಯ ಇರುವಂತೆ ರಾಷ್ಟ್ರಾಧ್ಯಕ್ಷರಿಗೂ ಇರುತ್ತದೆ. ಗುಜರಾತಿನ ಭೀಕರ ಗಲಭೆಗಳು ದೇಶವನ್ನು ತಲ್ಲಣಗೊಳಿಸುತ್ತಿದ್ದಾಗ ಡಾ॥ ಕಲಾಂ ಅವರು ನಮ್ಮ ಅಧ್ಯಕ್ಷರಾಗಿದ್ದರು. ಸಂವಿಧಾನವು ಅಧ್ಯಕ್ಷರಿಗೆ ಅನೇಕ ಅಧಿಕಾರಗಳನ್ನು ನೀಡಿದೆ. ರಾಜ್ಯಗಳ ಶಾಂತಿ ಮತ್ತು ಸೌಹಾರ್ದತೆಗೆ ಸಂಬಂಧಿಸಿದಂತೆ ಸಹ ಅವರಿಗೆ ಅಧಿಕಾರ ಉಂಟು. ಆದರೆ (ನಮಗೆ ತಿಳಿಯದಿರುವ) ತಮ್ಮದೇ ಕಾರಣಗಳಿಂದಾಗಿ ಅಧ್ಯಕ್ಷ ಕಲಾಂ ಅವರು ಆ ಗಲಭೆಗಳ ಕಾಲದಲ್ಲಾಗಲಿ, ನಂತರವಾಗಲಿ ಆ ವಿಷಯಕ್ಕೆ ಸಂಬಂಧಿಸಿದಂತೆ ಏನೂ ಹೇಳಲಿಲ್ಲ, ಏನೂ ಕೇಳಲಿಲ್ಲ ಮತ್ತು ಏನೂ ಮಾಡಲಿಲ್ಲ. ಅವರ ಕೋಮಲ ಮನಸ್ಸು ಜಾಗೃತವಾಗಿರಲಿಲ್ಲವೆಂದು ಇದರರ್ಥವಲ್ಲ, ಆದರೆ ಅಧ್ಯಕ್ಷರಾಗಿ ಇನ್ನೂ ಹೆಚ್ಚಿನ ದಕ್ಷತೆಯನ್ನವರು ತೋರಿದ್ದರೆ ಅವರ ಘನತೆ ನೂರ್ಮಡಿಯಾಗಿರುತ್ತಿತ್ತು. ದೇಶದ ಬೆಳವಣಿಗೆಗಳ ಬಗೆಗಿನ ಅವರ ಕಾಳಜಿಗಳನ್ನು ನೆನೆಯೋಣ ಮತ್ತು ಸಾರ್ಥಕತೆಯತ್ತ ಮುನ್ನಡೆಯೋಣ. ಅದೇ ಅವರಿಗೆ ಸಲ್ಲಬೇಕಾದ ಗೌರವ.

✴ ✴ ✴

ಈ ವರ್ಷದ ಸ್ವಾತಂತ್ರ್ಯದ ದಿನದಂದು ಪ್ರಧಾನಿ ಮೋದಿಯವರು ದೆಹಲಿಯ ಕೆಂಪುಕೋಟೆಯಿಂದ ಜನತೆಗೆ ಮನಬಿಚ್ಚಿ ಮಾತನಾಡಿದ್ದಾರೆ. ಆ ಬಗ್ಗೆ ಅನೇಕ ವರದಿಗಳು ನಿರಂತರವಾಗಿ ಬರುತ್ತಲೇ ಇವೆ. ಬಹಳ ಸ್ವಾಗತಾರ್ಹವಾದ ಮಾತೊಂದನ್ನು ಅವರ ಎಂದಿನ ಗಟ್ಟಿಧ್ವನಿಯಲ್ಲಿ ಅನನ್ಯವಾದ ದೈಹಿಕ ಹಾವಭಾವಗಳ ಸಮೇತ ಅವರು ಜನತೆ ಮುಂದಿರಿಸಿದ್ದಾರೆ. ಅದಕ್ಕೆ ಅವರಿಗೆ ಅಭಿನಂದನೆ ಸಲ್ಲುತ್ತದೆ. "ನಮ್ಮ ದೇಶದಲ್ಲಿ ಮತೀಯ ಭಾವನೆಗಳಿಗೆ, ಜಾತಿಕಲಹಗಳಿಗೆ, ಆಂತರಿಕ ಸಂಘರ್ಷಗಳಿಗೆ ಎಡೆಯಿಲ್ಲ" ಎಂಬುದು ಅವರ ಧೀಮಂತ


(೬ನೇ ಪುಟಕ್ಕೆ )






ತಿಂಗಳ ಪತ್ರಿಕೆ
**ಹೊಸತು**
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

ಸಂಪುಟ-೧೭ ಸಂಚಿಕೆ-೨ ಸೆಪ್ಟೆಂಬರ್ ೨೦೧೫

**ಗೌರವ ಸಂಪಾದಕ**

ಜಿ. ರಾಮಕೃಷ್ಣ

**ಸಂಪಾದಕ**

ಸಿದ್ದನಗೌಡ ಪಾಟೀಲ

**ಸಹಸಂಪಾದಕರು**

ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ರಾಮಲಿಂಗಪ್ಪ ಟಿ. ಬೇಗೂರು
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು – ೫೬೦ ೦೫೮
ದೂರವಾಣಿ: ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧
ದೂರವಾಣಿ: ೩೦೫೭೮೦೯೪, ೨೨೨೦೩೫೮೦
ಫ್ಯಾಕ್ಸ್: ೩೦೫೭೮೦೨೩
e-mail : navakarnataka@gmail.com
hosathu@gmail.com
hosathu.nkp@gmail.com
URL : www.navakarnataka.com
http : //navakarnataka.blogspot.in
http : //hosathumonthly.blogspot.in


# ಸಂಪಾದಕೀಯ

## ಮಹಾನಗರಗಳಲ್ಲಿ ಮನಸು ಕಟ್ಟುವ ಕೆಲಸವಾಗಬೇಕು

ಕೊನೆಗೂ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಚುನಾವಣೆ ನಡೆದಿದೆ. 'ಹೊಸತು' ಓದುಗರ ಕೈ ಸೇರುವುದರೊಳಗಾಗಿ ಫಲಿತಾಂಶಗಳೂ ಬಂದಿರುತ್ತವೆ, ಈ ಚುನಾವಣೆಯಲ್ಲಿ ಬೆಂಗಳೂರು ಮಹಾನಗರ ಪಾಲಿಕೆಯಲ್ಲಿ ಯಾವ ಪಕ್ಷ ಆಡಳಿತಕ್ಕೆ ಎಂಬುದೂ ನಿರ್ಣಯವಾಗಿರುತ್ತದೆ. ಸದ್ಯಕ್ಕೆ ಕಾಂಗ್ರೆಸ್ ಮತ್ತು ಬಿ.ಜೆ.ಪಿ. ಮಧ್ಯೆ ಬಹುಮತಕ್ಕಾಗಿ ಪೈಪೋಟಿ ನಡೆದಿದೆ. ಯಾವುದೇ ಪಕ್ಷ ಅಧಿಕಾರಕ್ಕೆ ಬಂದರೂ ಪರಿಣಾಮದಲ್ಲಿ ಯಾವುದೇ ವ್ಯತ್ಯಾಸವಿಲ್ಲ. ಈ ಹಿಂದೆ ಆಳಿದ ಈ ಎರಡೂ ಪಕ್ಷಗಳು ಭ್ರಷ್ಟಾಚಾರದಲ್ಲಿ ಪೈಪೋಟಿಯನ್ನೇ ನಡೆಸಿವೆ. ಕಳೆದ ಬಾರಿ ಪಾಲಿಕೆಯಲ್ಲಿ ನಡೆದ ಹಗರಣಗಳು ಧಾರಾವಾಹಿ ರೂಪದಲ್ಲಿ ಬರುತ್ತಿವೆ. ಸಿಲಿಕಾನ್ ವ್ಯಾಲಿ, ಐಟಿ–ಬಿಟಿ ಸಿಟಿ, ಗಾರ್ಡನ್ ಸಿಟಿ ಹೀಗೆ ಹಲವಾರು ವಿಶೇಷಣಗಳನ್ನು ಹೊಂದಿದ ಈ ನಗರ ಇತ್ತೀಚೆಗೆ ಗಾರ್ಬೆಜ್ ಸಿಟಿ, ಭ್ರಷ್ಟರ ನಗರ ಹೀಗೆ ಇನ್ನೂ ಹಲವು ವಿಶೇಷಣಗಳನ್ನು ಪಡೆದು ಪ್ರಸಿದ್ಧಿ ಹೊಂದಿದೆ. ಇಷ್ಟೆಲ್ಲಾ ಆದಮೇಲೂ ಯಥಾರೀತಿಯಲ್ಲಿ ಚುನಾವಣೆ ನಡೆಯುತ್ತಿದೆ.

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಚುನಾವಣೆಯ ಘೋಷಣೆ ವಿಧಾನಸೌಧ ಮತ್ತು ನ್ಯಾಯಾಂಗದ ನಡುವಿನ ಎಳೆದಾಟದಲ್ಲಿಯೇ ವಿಳಂಬವಾಯಿತು. ಪಾಲಿಕೆಯ ವಿಂಗಡನೆಗೆ ಪಟ್ಟು ಹಿಡಿದ ರಾಜ್ಯ ಸರಕಾರ ಕೊನೆಗೂ ಅದಕ್ಕೆ ಕಾನೂನಿನ ರೂಪಕೊಟ್ಟಿತು. ಅದೇ ಸಂದರ್ಭದಲ್ಲಿ ಕೋರ್ಟ್ ಆದೇಶದಂತೆ ಚುನಾವಣಾ ಆಯೋಗ ಚುನಾವಣೆಯನ್ನು ನಡೆಸಿತು. ಈಗ ರಾಜ್ಯದ ವಿಂಗಡಣೆ ಕುರಿತ ತಿದ್ದುಪಡಿಗೆ ಒಪ್ಪಿಗೆ ದೊರೆತರೆ ಈಗ ಅಸ್ತಿತ್ವಕ್ಕೆ ಬರುವ ಪಾಲಿಕೆಯ ಭವಿಷ್ಯವೇನು ಎಂಬುದು ಪ್ರಶ್ನೆಯಾಗಿಯೇ ಉಳಿದಿದೆ. ಅದೇನೇ ಇರಲಿ, ಬೆಂಗಳೂರಿನಂಥ ಮಹಾನಗರದಲ್ಲಿ ತಾವೇನು ಮಾಡುತ್ತೇವೆ ಎಂಬುದನ್ನು ಎಲ್ಲ ಪಕ್ಷಗಳೂ ತಮ್ಮ ಚುನಾವಣಾ ಪ್ರಣಾಳಿಕೆಯಲ್ಲಿ ಘೋಷಿಸಿವೆ. ಆ ಪ್ರಣಾಳಿಕೆಯನ್ನು ಜನರು ಓದುವುದಿಲ್ಲ. ಸ್ವತಃ ಆ ಘೋಷಣೆಗಳನ್ನು ಆ ಪಕ್ಷಗಳ ನಾಯಕರೇ ಓದಿರುವುದಿಲ್ಲ. ಎಲ್ಲ ಪಕ್ಷಗಳ ಪ್ರಣಾಳಿಕೆಗಳಲ್ಲಿ ನಗರದ ಸ್ವಚ್ಛತೆ, ನೀರು ಸರಬರಾಜು, ರಸ್ತೆ, ಕಸ ನಿರ್ವಹಣೆ, ಉದ್ಯಾನವನ ಹೀಗೆ ನಗರದ ಮೂಲಭೂತ ಸೌಕರ್ಯಗಳ ಕುರಿತು ಹೇಳಲಾಗಿದೆ. ಇದನ್ನು ಈ ಹಿಂದೆಯೂ ಹೇಳಿದ್ದವು. ಇಂಥ ಕಾಮಗಾರಿಗೆ ಸಂಬಂಧಪಟ್ಟ ವಿಷಯಗಳ ಕುರಿತು ಮಾತನಾಡಿದರೆ ಮಾತ್ರ ಅವರಿಗೆ ಕಮಿಶನ್ ದಕ್ಕುವುದು, ಯೋಜನೆಗಳ ಪ್ರಯೋಜನ ಜನರಿಗಿಂತ ಹೆಚ್ಚಾಗಿ ಜನಪ್ರತಿನಿಧಿಗಳಿಗೆ ತಲುಪಲು ಸಾಧ್ಯವಾಗುವುದು. ಬೆಂಗಳೂರು ಮತ್ತು ರಾಜ್ಯದ ಬಹುತೇಕ ನಗರಗಳು ಇಂದು ತ್ರಿವಿಧ ರೋಗಗಳಿಂದ ನರಳುತ್ತಿವೆ. ಭ್ರಷ್ಟಾಚಾರ, ಅತ್ಯಾಚಾರ ಮತ್ತು ಅನಾಚಾರ ಎಂಬ ತ್ರಿವಿಧ ರೋಗಗಳು ನಗರ ಜನತೆಯ ಬದುಕನ್ನು ನರಕವಾಗಿಸುತ್ತಿವೆ. ಎಷ್ಟೇ ಅಭಿವೃದ್ಧಿ ಯೋಜನೆಗಳನ್ನು ಪ್ರಣಾಳಿಕೆಯಲ್ಲಿ ಘೋಷಣೆ ಮಾಡಿದರೂ ಭ್ರಷ್ಟಾಚಾರ ತೊಲಗದಿದ್ದರೆ ಆ ಯೋಜನೆಗಳು ಜನತೆಗೆ ತಲುಪುವ ಬದಲಾಗಿ ಭ್ರಷ್ಟ ರಾಜಕೀಯ ಪಕ್ಷಗಳ ಪರವಾಗಿ ಆಯ್ಕೆ ಆದ ಪ್ರತಿನಿಧಿಗಳಿಗೆ, ಅವರ ಹಿಂಬಾಲಕರಾದ ಗುತ್ತಿಗೆದಾರರಿಗೆ ತಲುಪಿಬಿಡುತ್ತವೆ. ಅಲ್ಲಿ ಜನರಿಗೆ ದೊರಕುವುದು ಕಳಪೆ ಕಾಮಗಾರಿಯೇ. ಈಗ ಅಧಿಕಾರದ ಪೈಪೋಟಿಯಲ್ಲಿರುವ ಪಕ್ಷಗಳು ಭ್ರಷ್ಟಾಚಾರದ ಕಳಂಕ ಹೊತ್ತಿರುವುದರಿಂದ ಅವು ಭ್ರಷ್ಟಾಚಾರದ ಕುರಿತು ಮಾತನಾಡುವುದಿಲ್ಲ. ಮಾತನಾಡಿದರೂ ಅದು ಭಾಷಣಕ್ಕಾಗಿ ಮಾತ್ರ ಎಂಬುದು ಎಲ್ಲರಿಗೂ ತಿಳಿದದ್ದೆ. ಇನ್ನು ಎಡಪಕ್ಷಗಳು, ಚಳುವಳಿಯ ಸಂಘಟನೆಗಳು, ನಾಗರಿಕ ರಂಗದ ಹೆಸರಿನಲ್ಲಿ ೪೫ ಸ್ಥಾನಗಳಿಗೆ ಸ್ಪರ್ಧಿಸಿವೆ. ಅವು ಪ್ರಾಮಾಣಿಕವಾಗಿದ್ದರೂ ಬೆಂಗಳೂರಿನಂಥ ಬೃಹತ್ ನಗರದಲ್ಲಿ ಅವರ ಶಕ್ತಿ ಮತ್ತು ಪ್ರಭಾವಕ್ಕೆ ಮಿತಿ ಇದೆ.

ಗುಂಪಿನಲ್ಲಿದ್ದೂ ಏಕಾಂಗಿಯಾಗಿರುವ ಬೆಂಗಳೂರಿನ ನಾಗರಿಕರು ಯಾವತ್ತೂ ಆತಂಕದ ಸ್ಥಿತಿಯಲ್ಲಿದ್ದಾರೆ. ಯಾವ ಸಮಯದಲ್ಲಿ ಯಾರ ಮನೆಯಲ್ಲಿ ಅತ್ಯಾಚಾರವಾಗುತ್ತದೋ, ಎಲ್ಲಿ ಕಳ್ಳತನ ನಡೆಯುತ್ತದೋ, ಎಲ್ಲಿ ಕೊಲೆ, ಅಪಹರಣ ನಡೆಯುತ್ತದೋ ಹೀಗೆ ಪ್ರತಿಕ್ಷಣ ಆತಂಕದಲ್ಲಿ ಕಾಲ ಕಳೆವ ಸ್ಥಿತಿ ನಾಗರಿಕರದು. ಮಕ್ಕಳ ಮೇಲೆ ಅತ್ಯಾಚಾರ, ಸರಗಳ್ಳತನ, ಮುಂತಾದ ದುಷ್ಕೃತ್ಯಗಳು ನಗರದಲ್ಲಿ ಅವ್ಯಾಹತವಾಗಿ ನಡೆದಿವೆ. ಪ್ರತಿದಿನ ವಂಚನೆ, ಮೋಸ, ದ್ರೋಹಗಳಂಥ ಅನಾಚಾರದ ವರದಿಗಳು ಮಾಧ್ಯಮಗಳಿಗೆ ರೋಚಕ ಸರಕಾಗಿ ಬರುತ್ತಿವೆ. ಇವನ್ನೆಲ್ಲ ತಡೆಯಲು, ಒಂದು ನಾಗರಿಕ ಸಮಾಜ ನಿರ್ಮಿಸಲು, ಸಹಬಾಳ್ವೆಯ ಬದುಕು ರೂಪಿಸುವ, ನಿರ್ಭಯವಾದ ವಾತಾವರಣ ಉಂಟುಮಾಡುವ ಕನಸು ಯಾವ ಪಕ್ಷದಲ್ಲಿಯೂ ಕಾಣುವುದಿಲ್ಲ. ಆಡಳಿತಕ್ಕೆ ಪರಿತಪಿಸುವ ಯಾವ ಪಕ್ಷವೂ ಈ ಕುರಿತು

ಭರವಸೆ ನೀಡುವುದಿಲ್ಲ. ಯಾಕೆಂದರೆ ಭ್ರಷ್ಟಚಾರ, ಅನಾಚಾರ, ಅತ್ಯಾಚಾರಮುಕ್ತ ನಗರ ಅವರಿಗೆ ಬೇಕಾಗಿಲ್ಲ. ಇಂಥವುಗಳಿಂದ ನಗರ ಮುಕ್ತವಾದರೆ ಭ್ರಷ್ಟ, ಧನದಾಹಿ ರಾಜಕಾರಣಿಗಳಿಗೇನು ಕೆಲಸ! ರಾಜಕಾರಣಿಗಳೇನೇ ಮಾಡಲಿ, ಸಂವಿಧಾನದ ೭೩ ಮತ್ತು ೭೪ನೇ ತಿದ್ದುಪಡಿ ಪ್ರಕಾರ ಪಂಚಾಯತಿ, ಮತ್ತು ಪೌರಾಡಳಿತ ವ್ಯವಸ್ಥೆಯಲ್ಲಿ ಗ್ರಾಮಸಭಾ ಮತ್ತು ವಾರ್ಡ್ ಸಭಾಗಳಿಗೆ ಹೆಚ್ಚಿನ ಮಹತ್ವವಿದೆ. ಬೆಂಗಳೂರು ಮಾತ್ರವಲ್ಲ, ಎಲ್ಲ ನಗರಗಳ ಜನತೆ ಅಕ್ಕಪಕ್ಕದ ಮನೆಯಲ್ಲಿದ್ದರೂ ಅಪರಿಚಿತರಂತೆ ಬದುಕುತ್ತಿದ್ದಾರೆ. ಬೆಂಗಳೂರು ಮತ್ತು ಇತರ ನಗರಗಳಲ್ಲಿ ಅಪಾರ್ಟ್‌ಮೆಂಟ್‌ಗಳು ತಲೆ ಎತ್ತುತ್ತಿವೆ. ಆಕಾಶದೆತ್ತರಕ್ಕೆ ಬೆಳೆದು ನಿಂತ ಈ ಅಪಾರ್ಟ್‌ಮೆಂಟ್‌ಗಳಲ್ಲಿ ಲಿಫ್ಟ್‌ನಲ್ಲಿ ಹತ್ತುವಾಗಲೋ, ಇಳಿಯುವಾಗಲೋ ಅಥವಾ ಕಾರ್ ಪಾರ್ಕಿಂಗ್ ಸ್ಥಳಗಳಲ್ಲೋ ಮುಖಾಮುಖಿಯಾಗುವ ನಿವಾಸಿಗಳು ಹೆಚ್ಚೆಂದರೆ ಒಂದು ಮುಗುಳ್ನಗೆಗೋ, ಒಂದು ಹಾಯ್‌ಗೋ ಸೀಮಿತರಾಗಿರುತ್ತಾರೆ. ಪಕ್ಕದ ಮನೆಯಲ್ಲಿ ಕೊಲೆಯಾದವರ, ಆತ್ಮಹತ್ಯೆ ಮಾಡಿಕೊಂಡವರ ಹೆಣಗಳು ದುರ್ನಾತ ಬೀರುವವರೆಗೂ ಇನ್ನೊಬ್ಬರಿಗೆ ಗೊತ್ತಾಗುವುದಿಲ್ಲ. ಇನ್ನು ನಗರಗಳೆಂದರೆ ಅಪರಿಚಿತರ ಊರು, ಒಬ್ಬರ ಗೊಡವೆಗೆ ಇನ್ನೊಬ್ಬರು ಹೋಗದಂಥ ಮನಸ್ಥಿತಿ ಇಂದು ಬೆಳೆಯುತ್ತಿರುವುದೇ ಕಳ್ಳರ, ಕೊಲೆಗಡುಕರ, ಅತ್ಯಾಚಾರಿಗಳ ಅಟ್ಟಹಾಸಕ್ಕೆ ಕಾರಣವಾಗಿದೆ. ಪರಿಣಾಮವಾಗಿ ಒಂಟಿ ಮಹಿಳೆ, ವೃದ್ಧದಂಪತಿಗಳು, ಸಭ್ಯಜನ, ವಯಸ್ಸಿಗೆ ಬಂದ ಹೆಣ್ಣು ಮಕ್ಕಳು ನೆಮ್ಮದಿಯಿಂದ ಬದುಕಲಾಗದಂಥ ವಾತಾವರಣ ನಿರ್ಮಾಣವಾಗಿದೆ. ಇನ್ನು ಪೌರಾಡಳಿತ ವ್ಯವಸ್ಥೆಯಿಂದ ನಡೆವ ಸಾರ್ವಜನಿಕ ಸೇವೆಗಳಲ್ಲಿ, ಕಾಮಗಾರಿಗಳಲ್ಲಿ ನಡೆಯುವ ಅವ್ಯವಹಾರಗಳನ್ನು ಜನ ಸಂಘಟಿತವಾಗಿ ಪ್ರತಿಭಟಿಸುವ ಪ್ರವೃತ್ತಿಯೇ ಇಲ್ಲವಾಗಿದೆ. ಸಾಮಾನ್ಯವಾಗಿ ಎಲ್ಲರೂ ರಾಜಕಾರಣಿಗಳ, ಅವರ ಗೂಂಡಾ ಪಡೆಗಳ ವಿರುದ್ಧ ಸೊಲ್ಲೆತ್ತದೆ ಗೊಣಗಿಕೊಂಡು ಬದುಕುತ್ತಿದ್ದಾರೆ. ಇಂದು ಪ್ರಜೆಗಳೇ ನಾಗರಿಕ ರಂಗ ರಚಿಸಿಕೊಂಡು ವಾರ್ಡ್ ಸಭೆಗಳಲ್ಲಿ ಭಾಗವಹಿಸಿ, ಆಡಳಿತ ವ್ಯವಸ್ಥೆ ಹಾಗೂ ಸಾಮಾಜಿಕ ಜೀವನದ ಮೇಲೆ ನಿರಂತರವಾಗಿ ಕಣ್ಣಾವಲಿಟ್ಟು, ಭ್ರಷ್ಟಾಚಾರ, ಅತ್ಯಾಚಾರ, ಅನಾಚಾರಗಳ ವಿರುದ್ಧ ಪ್ರತಿರೋಧ, ಪ್ರತಿಭಟನೆ ವ್ಯಕ್ತಪಡಿಸಿದರೆ ಖಂಡಿತ ಒಂದು ನಾಗರಿಕ ನಗರವನ್ನು ಕಟ್ಟಬಹುದು. ಅಭಿವೃದ್ಧಿಯೆಂದರೆ ಬರೀ ರಸ್ತೆ, ನೀರು, ಸ್ವಚ್ಛತೆ, ವಸತಿ ಮಾತ್ರವಲ್ಲ, ಇದನ್ನೆಲ್ಲ ಬಳಸುವ ಜನತೆಯ ನೆಮ್ಮದಿಯ, ಸುರಕ್ಷಿತ ಬದುಕು ಮುಖ್ಯ. ಅಂಥ ಸುರಕ್ಷಿತ ಬದುಕನ್ನು ನಿರ್ಮಿಸಲು ಈಗ ಸ್ಪರ್ಧೆಯಲ್ಲಿರುವ ಪಕ್ಷಗಳಿಂದ ಸಾಧ್ಯವಿಲ್ಲ. ಅದಕ್ಕಾಗಿ ಜಾಗೃತ ನಾಗರಿಕ ವೇದಿಕೆಗಳು ಬೇಕು. ಅದಕ್ಕಾಗಿ ಜನ ಸಿದ್ಧರಾಗಬೇಕು. ನಗರಗಳಲ್ಲಿ ಮನಸು ಕಟ್ಟುವ ಕೆಲಸಕ್ಕೆ ಆದ್ಯತೆ ಸಿಗಬೇಕು.

ಸಿದ್ದನಗೌಡ ಪಾಟೀಲ

## ಸಂಸತ್ತಿನ ಕಲಾಪದ ಹರಣ, ಪ್ರಧಾನಿ ಮೌನ

ಸಂಸತ್ತಿನ ಮುಂಗಾರು ಅಧಿವೇಶನ ಸಂಪೂರ್ಣವಾಗಿ ಮಳೆಯಲ್ಲಿ ಕೊಚ್ಚಿಹೋಯಿತು. ಕೋಟಿಗಟ್ಟಳೆ ತೆರಿಗೆದಾರರ ಹಣ ಪೋಲಾಯಿತು. ಅಧಿವೇಶನದುದ್ದಕ್ಕೂ ಗದ್ದಲ, ಭಿತ್ತಿ ಫಲಕಗಳ ಪ್ರದರ್ಶನ, ಸಂಸತ್ತಿನ ಬಾವಿಗಿಳಿದು ಕೂಗಾಟ, ಕಲಾಪದ ಮುಂದೂಡಿಕೆಯೇ ಆಯಿತು. ಇದು ಅನಿರೀಕ್ಷಿತವೇನಾಗಿರಲಿಲ್ಲ. ಯುಪಿಎ ಸರಕಾರದ ಆಡಳಿತಾವಧಿಯಲ್ಲಿ ಪ್ರತಿಪಕ್ಷದ ಸ್ಥಾನದಲ್ಲಿದ್ದ ಭಾಜಪ ಅನುಸರಿಸಿದ ಮಾರ್ಗವನ್ನೇ ತಿರುಮಂತ್ರವಾಗಿ ಈ ಸಲ ಕಾಂಗ್ರೆಸ್ ಪ್ರಯೋಗಿಸಿತು. ಮುಯ್ಯಿಗೆ ಮುಯ್ಯಿ ತೀರಿಸಿಕೊಂಡಾಯಿತು. ಇಡೀ ಅಧಿವೇಶನ ನಿರರ್ಥಕವಾದ್ದಕ್ಕೆ ಹೊಣೆ ಯಾರು? ಆಡಳಿತ ಪಕ್ಷವೇ, ಪ್ರತಿಪಕ್ಷಗಳೇ? ಎರಡೂ ಕಡೆ ಬಿಗಿಪಟ್ಟು ಹಿಡಿದಾಗ ಹೀಗಾಗುತ್ತದೆ ಎನ್ನುವುದು ನಿಜ. ಆದರೆ ಇದರಲ್ಲಿ ಆಡಳಿತ ಪಕ್ಷದ ಹೊಣೆಯೇ ಹೆಚ್ಚು. ಬಹುಮತದ ಗತ್ತಿನಿಂದ ಪ್ರತಿಪಕ್ಷಗಳನ್ನು ಮಣಿಸುವ ಭಾಜಪದ ಧೋರಣೆ ಸಲ್ಲ. ಅದು ಸರ್ವಾಧಿಕಾರಕ್ಕೆ, ಅಹಮಿಗೆ ಎಡೆಕೊಡುತ್ತದೆ. ಪ್ರಜಾಪ್ರಭುತ್ವದ ಕಗ್ಗೊಲೆಯಾಗುತ್ತದೆ. ಪ್ರತಿಪಕ್ಷಗಳ ಬೇಡಿಕೆಯನ್ನು ಅರ್ಥಮಾಡಿಕೊಂಡು ವಿವಾದವನ್ನು ಇತ್ಯರ್ಥಗೊಳಿಸಲು ಸೂಕ್ತವಾದ ವಿಧಾನವನ್ನು ಅನುಸರಿಸುವುದು ಆಡಳಿತ ಪಕ್ಷದ ಜವಾಬ್ದಾರಿ. ಹಾಗಿಲ್ಲದೆ ಹಠಮಾರಿತನದ ಧೋರಣೆ ಅನುಸರಿಸಿದರೆ ಎಲ್ಲವೂ ವ್ಯರ್ಥ. ಪ್ರಧಾನಿ ನರೇಂದ್ರ ಮೋದಿಯವರ ಸಂಪೂರ್ಣ ಮೌನ, ಹಾಗೂ ಅವರ ಸಂಪುಟ ಸದಸ್ಯರ ನಿಲುವು ಅದಕ್ಕೆ ಸಾಕ್ಷಿ.

ಪರಿಶುದ್ಧ, ಭ್ರಷ್ಟ ಮುಕ್ತ ಆಡಳಿತದ ಭರವಸೆ ನೀಡಿ ಅಧಿಕಾರಕ್ಕೆ ಬಂದ ಭಾಜಪ ನೇತೃತ್ವದ ಮೋದಿ ಸರಕಾರ ವರ್ಷ ಕಳೆಯುವುದರಲ್ಲೇ ಲಲಿತ್ ಗೇಟ್, ವ್ಯಾಪಂ ಮುಂತಾದ ಹಗರಣಗಳ ಆರೋಪ ಕ್ರೀಡಾಯಿತು. ವಿದೇಶಾಂಗ ಸಚಿವೆ ಸುಷ್ಮಾ ಸ್ವರಾಜ್, ರಾಜಾಸ್ತಾನದ ಮುಖ್ಯಮಂತ್ರಿ ವಸುಂಧರಾ ರಾಜೇ

*(೬ನೇ ಪುಟಕ್ಕೆ...)*







**■ ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ₹ ೧೫/- |
| ವಾರ್ಷಿಕ ಚಂದಾ | ₹ ೨೦೦/- |
| ಮೂರು ವರ್ಷಕ್ಕೆ | ₹ ೪೫೦/- |

**■ ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು – ೫೬೦ ೦೦೯
☎ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
☎ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
☎ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
☎ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
☎ : ೦೮೪೭೨-೨೨೪೩೦೨

*(ಈ ತಿಂಗಳು : ೩ನೇ ಪುಟದಿಂದ)*

ಮಾತು. ಅವೇ ಪದಗಳಲ್ಲಿ ಅವರು ಹಾಗೆ ಹೇಳಿರದಿದ್ದರೂ ಅವರ ಇಂಗಿತವು ಅದೇ ಆಗಿದೆ. ಮರಳುಗಾಡಿನ ಬಿಸಿಲಿನ ಝಳದ ಸಂದರ್ಭದಲ್ಲಿ ತಂಪಾದ ನೀರೆರೆಯುವಂತಹ ಮಾತುಗಳಿವು, ಭಾವನೆಗಳಿವು. ಮೂಲಭೂತ ಪ್ರಶ್ನೆ ಇರುವುದು ಭಾವನೆಗಳ ಪ್ರಕಟಣೆಯ ಬಗೆಗಲ್ಲ, ಆ ಭಾವನೆಗಳನ್ನು ದಿನನಿತ್ಯದ ವ್ಯವಹಾರಗಳಲ್ಲಿ ಅನುಷ್ಠಾನಕ್ಕೆ ತರುವುದರ ಬಗೆಗೆ. ಕೆಂಪುಕೋಟೆಯಿಂದ ಅವರು ಉನ್ನತ ಮೌಲ್ಯಗಳನ್ನಾಧರಿಸಿದ ಆಂತರಿಕ ಸಂಬಂಧಗಳ ಬಗೆಗೆ ಮಾತನಾಡುತ್ತಿರುವಾಗಲೇ ಶೈಕ್ಷಣಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ವಲಯಗಳಲ್ಲಿ ಅಲ್ಪಸಂಖ್ಯಾತರ ಬಗೆಗೆ ಅನಿಷ್ಟವಾದ ಕಾರ್ಯಾಚರಣೆ ನಡೆಯುತ್ತಿದೆ ಮತ್ತು ಮುಕ್ತವಾದ ಚರ್ಚೆಗಳಿಗೆ ಹಾಗೂ ವೈಚಾರಿಕ ಚಿಂತನೆಗೆ ಅಡ್ಡಗಾಲು ಹಾಕಲಾಗುತ್ತಿದೆ. ಪಶ್ಚಿಮ ಏಷ್ಯದ ಅರಬ್ ಎಮಿರೇಟ್ಸ್ ಭೇಟಿಯ ಸಂದರ್ಭದಲ್ಲಿ ಮಾನ್ಯ ಮೋದಿಯವರು ಮಸೀದಿಯೊಂದಕ್ಕೆ ಹೋಗಿದ್ದರಂತೆ; ಆದರೆ ನಮ್ಮ ರಾಜ್ಯದ ಕೆಲ ಭಾಗ ಗಳಲ್ಲಿ ಮುಸಲ್ಮಾನರು ಚಿಕ್ಕ ಮಸೀದಿ ಕಟ್ಟಿಕೊಳ್ಳಲು ಸಾಧ್ಯವಾಗದಂತೆ ಮೋದಿ ಪಂಥದವರು ಅಡ್ಡಿಪಡಿಸು ತ್ತಿದ್ದಾರಂತೆ. ಈ ವಿಷಯವನ್ನು ಒಬ್ಬ ಪ್ರತಿನಿಧಿಯು ದಾವಣಗೆರೆಯಲ್ಲಿ ಆಗಸ್ಟ್ ೧೫ ಮತ್ತು ೧೬ರಂದು 'ಸಮಾನತೆಗಾಗಿ ಜನಾಂದೋಲನ' ನಡೆಸಿದ ಚಿಂತನಾ ಸಮಾವೇಶದಲ್ಲಿ ಸುದೀರ್ಘವಾಗಿ ಚರ್ಚಿಸಿದ್ದರು. ಪ್ರಧಾನಿ ಯವರ ಮಾತು ಮತ್ತು ಆಶಯ ಕಾರ್ಯರೂಪಕ್ಕೆ ಬರಬೇಕಾದರೆ ಅವರು ತಮ್ಮ 'ಸೇನಾಬಲ'ಕ್ಕೆ ಸೂಕ್ತ ತಿಳುವಳಿಕೆ ನೀಡಬೇಕು ಮತ್ತು ಆ ಸೇನಾಬಲದ ಪ್ರಶ್ನಾರ್ಹ ದುಷ್ಟ ಕಾರ್ಯಾಚರಣೆಗಳಿಗೆ ತಡೆ ಯೊಡ್ಡಬೇಕು. ಮುಂದಿನ ದಿನಗಳಲ್ಲಾದರೂ ಅವರು ಅದನ್ನು ಮಾಡಲು ಸಮರ್ಥರಾದರೆ ಏಮಿರೇಟ್ಸ್‌ನಲ್ಲಿ ಬೃಹತ್ ಮಸೀದಿಗೆ ಭೇಟಿ ನೀಡಿದ್ದು ಸಾರ್ಥಕ ವಾಗುತ್ತದೆ. ಇನ್ನೂ ಬಂದಿರದ ಅಂತಹ 'ಒಳ್ಳೆಯ ದಿನಗಳನ್ನು' ನಾವು ನಿರೀಕ್ಷಿಸೋಣ, ದೇಶದ ಸ್ವಾತಂತ್ರ್ಯಕ್ಕೆ ನೈಜತೆಯನ್ನು ತುಂಬೋಣ.

✶ ✶ ✶

ಮಾನ್ಯ ಮೋದಿಯವರನ್ನು ಕುರಿತು ಹೇಳಿದ್ದರಿಂದ ಇನ್ನೊಂದು ವಿಷಯವೂ ನೆನಪಿಗೆ ಬರುತ್ತದೆ. ಅವರು ಜುಲೈ ೨೫ರಂದು ಬಿಹಾರದಲ್ಲಿ ಪ್ರವಾಸ ಕೈಗೊಂಡಿದ್ದರು, ತಮ್ಮ ಪಕ್ಷದ ಪರವಾಗಿ ಚುನಾವಣೆಯ ಸಂದರ್ಭದ ಕಾರ್ಯದಲ್ಲಿ ತೊಡಗಿಕೊಂಡಿದ್ದರು. ಆಕಾಶವಾಣಿಯು ಪ್ರತಿದಿನ ಮಧ್ಯಾಹ್ನ ಎರಡು ಗಂಟೆಗೆ ವಾರ್ತೆಗಳ ಪ್ರಸಾರವನ್ನು ಇಂಗ್ಲಿಷ್‌ನಲ್ಲಿ ಮಾಡುವ ರೂಢಿಯಿದೆ. ಜುಲೈ ೨೫ರ ಇಂಗ್ಲಿಷ್ ವಾರ್ತಾ ಪ್ರಸಾರದಲ್ಲಿ ಒಟ್ಟು ೧೫ ನಿಮಿಷಗಳ ಪೈಕಿ ೧೨ ನಿಮಿಷಗಳನ್ನು ಮೋದಿ ಯವರ ವಿವಿಧ ಭಾಷಣಗಳ ಉದ್ಧೃತ ಭಾಗಗಳೇ ನುಂಗಿಹಾಕಿದವು. ಅದೆಲ್ಲಾ ಹಿಂದಿಯಲ್ಲಿತ್ತೆಂದು ಬೇರೆ ಹೇಳಬೇಕಾಗಿಲ್ಲ. ಪ್ರಧಾನಿಯವರ ಪರವಾಗಿ ಆಕಾಶವಾಣಿಯು ಇಂಗ್ಲಿಷ್ ವಾರ್ತಾ ಸಮಯವನ್ನು ಸಂಪೂರ್ಣವಾಗಿ ದುರುಪಯೋಗಪಡಿಸಿಕೊಂಡಿತು. ಇದು ಯೋಗ್ಯವಲ್ಲ. ಇಂತಹ ಪ್ರಸಂಗ ಆಗಾಗ್ಗೆ ನಡೆಯುತ್ತಲೇ ಇರುವುದು ವಾಡಿಕೆಯಾಗಿದೆ. ತುರ್ತುಪರಿಸ್ಥಿತಿಯಲ್ಲಿ ಮಾಧ್ಯಮಗಳ ದುರ್ಬಳಕೆ ಯಾಗುತ್ತವೆ ಎನ್ನುತ್ತಾರೆ. ಆದರೆ ಈಗ ದೇಶದಲ್ಲಿ ಏಕವ್ಯಕ್ತಿ ಆಡಳಿತವಿದೆಯೋ, ಸರ್ವಾಧಿಕಾರವು ತೂರಿಬರುತ್ತಿದೆಯೋ, ತುರ್ತುಪರಿಸ್ಥಿತಿಯನ್ನು ಘೋಷಿಸಿಲ್ಲದಾಗ ತುರ್ತು ಸನ್ನಿವೇಶ ಅಸ್ತಿತ್ವಕ್ಕೆ ಬಂದಿದೆಯೋ ಎಂಬ ಸಂದೇಹ ಉಂಟಾಗುವಂತಿದೆ. ಇಂದಿರಾ ಗಾಂಧಿಯವರ ಕಾಲದಲ್ಲಿ ಎಂದೂ ಪ್ರಚಾರವನ್ನು ಸರ್ಕಾರಿ ಯಂತ್ರದಿಂದ ಈ ಮಟ್ಟಿಗೆ ಕೊಂಡುಹೋಗಿದ್ದು ನೆನಪಿಗೆ ಬರುವಂತಿಲ್ಲ. ಹಿಂದಿಯ ಹೇರಿಕೆ ಮತ್ತು ಮಾಧ್ಯಮದ ದುರುಪಯೋಗ, ಎರಡನ್ನೂ ಆಕಾಶವಾಣಿಯು ಏಕಕಾಲಕ್ಕೆ ನಡೆಸಿ ಬಿಡುತ್ತಿದೆ. ಇದು ಅಂಗೀಕಾರಕ್ಕೆ ಸರ್ವಥಾ ಅನರ್ಹವಾದ್ದು.

✶ ✶ ✶

ಆಗಸ್ಟ್ ೧೪ರಂದು ಪ್ರಕಟವಾಗಿದ್ದ ವರದಿಯೊಂದು ವಿಚಿತ್ರವಾಗಿದೆ, ಆಘಾತಕಾರಿಯಾಗಿದೆ. ಗುಜರಾತಿನ ಉಚ್ಚ ನ್ಯಾಯಾಲಯವು ಆಗಸ್ಟ್ ೧೦ ಮತ್ತು ೧೧ರಂದು ಮೊಕದ್ದಮೆಯೊಂದನ್ನು ಸುದೀರ್ಘವಾಗಿ ವಿಚಾರಣೆ ನಡೆಸಿತು. ನ್ಯಾಯಮೂರ್ತಿ ವಿ. ಎಂ. ಸಹಾಯ್ ತೀರ್ಪನ್ನು ನೀಡಿ ಒಟ್ಟು ೨೭ ನ್ಯಾಯಮೂರ್ತಿ ಗಳಿಗೆ ನೋಟೀಸ್ ಜಾರಿ ಮಾಡಿದರು. ಎಲ್ಲಾ ಸರ್ವೋಚ್ಚ ನ್ಯಾಯಾಲಯ ಹಾಗೂ ವಿವಿಧ ರಾಜ್ಯಗಳ ಉಚ್ಚ ನ್ಯಾಯಾಲಯಗಳ ನ್ಯಾಯಮೂರ್ತಿಗಳೇ. ಕೆಲವರು ನಿವೃತ್ತರು, ಇತರರು ಈಗಲೂ ಅಧಿಕಾರ ದಲ್ಲಿರುವವರು. ಅವರೆಲ್ಲಾ ಎಸಗಿದ್ದರೆನ್ನಲಾದ ಪಾತಕ ಏನು ಗೊತ್ತೆ? ೨೦೦೮ರಲ್ಲಿ ಅಕ್ರಮವಾಗಿ ಸೈಟುಗಳನ್ನು ತಮಗೆ ಹಂಚಿಕೆ ಮಾಡಿಸಿಕೊಂಡಿದ್ದು! ಭರ್ಜರಿ ನ್ಯಾಯದಾನವೆಂದರೆ ಇದಲ್ಲವೆ? ನ್ಯಾಯಮೂರ್ತಿ ಗಳೆಲ್ಲಾ ಸುಮ್ಮನಿರುತ್ತಾರೆಯೆ? ಆಗಸ್ಟ್ ೧೨ರಂದೇ ದೆಹಲಿಗೆ ದೌಡಾಯಿಸಿ ಸರ್ವೋಚ್ಚ ನ್ಯಾಯಾಲಯದಲ್ಲಿ ಅರ್ಜಿ ದಾಖಲಿಸಿದರು ಮತ್ತು ಅಂದೇ ತಡೆಯಾಜ್ಞೆಯನ್ನು ನೀಡಲಾಯಿತು. ತ್ವರಿತಗತಿಯಲ್ಲಿ ನ್ಯಾಯಾಲಯಗಳು ನಡೆಯಬಲ್ಲವೆಂಬುದಕ್ಕೆ ಇದೊಂದು ಉತ್ತಮ ಉದಾಹರಣೆ. ಮೊಕದ್ದಮೆ ಇನ್ನೊಂದೆರಡು ವರ್ಷ ಸುಪ್ತವಾಗಿರಲು ಇದು ನಾಂದಿ. ತಡೆಯಾಜ್ಞೆ ನೀಡುವಾಗ ಸರ್ವೋಚ್ಚ ನ್ಯಾಯಾಲಯದ ಪ್ರಮುಖ ನ್ಯಾಯಮೂರ್ತಿ ಎಚ್. ಎಲ್. ದತ್ತು ಮೂರು ಮಂದಿ ಪೀಠದ ಮುಖ್ಯಸ್ಥರಾಗಿದ್ದರು. ಅವರು ಉದ್ಗರಿಸಿದರಂತೆ : "ಏನಿದು, ಗುಜರಾತ್ ಉಚ್ಚ ನ್ಯಾಯಾಲಯದ ಶೀಘ್ರಗತಿ? ಪ್ರಾಣ ಹೋಗುವಂತಹ ಸಂದರ್ಭದ ಅವಸರದಂತಿದೆಯಲ್ಲಾ! ಅಂತಹ ಅವಸರ ಏಕೆ ಬೇಕಾಗಿದೆ?" ನ್ಯಾಯಮೂರ್ತಿಗಳ ಅಕ್ರಮ ಸೈಟ್ ಗಳಿಕೆ ಎನ್ನಲಾದ ಸಂಗತಿಯು ಶೀಘ್ರವಾಗಿ ಇತ್ಯರ್ಥವಾಗಬಾರದೆ? ಅವಸರಕ್ಕೂ ಶೀಘ್ರತೆಗೂ ವ್ಯತ್ಯಾಸವಿದೆ. ಅತಿ ದೊಡ್ಡವರ ಪ್ರಮಾದಗಳಿದ್ದರೆ ಅವನ್ನು ಮೊದಲು ಸರಿಪಡಿಸಬೇಕು. ಅಕ್ರಮ ಸೈಟುಗಳಲ್ಲಿ ಬಂಗಲೆಗಳು ತಲೆಯೆತ್ತಿದ ಮೇಲೆ ವಿಚಾರಣೆ ಮಾಡಬೇಕೆನ್ನುತ್ತೀರಾ? ಜನಾರ್ದನ ರೆಡ್ಡಿ, ಯಡಿಯೂರಪ್ಪ, ಮುಂತಾದವರು ಆಶಿಸುವುದು ನ್ಯಾಯಾಲಯದ ಅಂತಹ ಭಾನಸ ನೀತಿ. ನ್ಯಾಯಮೂರ್ತಿಗಳು ಕೂಡ ಅಂಥದನ್ನು ಅಪೇಕ್ಷಿ ಸುವುದು ಅಷ್ಟೇನೂ ತೃಪ್ತಿದಾಯಕವಲ್ಲ. ಮುಂದೆ ಯಾವತ್ತು ಆ ಮೊಕದ್ದಮೆಯ ವಿಚಾರಣೆ ನಡೆಯ ಬೇಕೆಂಬುದನ್ನು ನ್ಯಾಯಮೂರ್ತಿ ಎಚ್. ಎಲ್. ದತ್ತು ನಿಗದಿಪಡಿಸಿದಂತಿಲ್ಲ. ಯಾಕೂಬ್ ಮೆಮನ್ ಮೊಕದ್ದಮೆಯಂತೆ ಎಲ್ಲವೂ ತ್ವರಿತಗತಿಯಲ್ಲಿ ನಡೆದರೆ ನ್ಯಾಯಾಲಯಕ್ಕೆ ಅಶುಭದ ಕಪ್ಪುಚುಕ್ಕೆ ಮೆತ್ತಿ ಕೊಳ್ಳುತ್ತದೆ ಎಂಬ ಭಯ ಅನಗತ್ಯ.

✶ ✶ ✶

"ಸಮಾನತೆಗಾಗಿ ಜನಾಂದೋಲನ" ಎಂಬ ಹೊಸ ವೇದಿಕೆಯು ಅಸ್ತಿತ್ವಕ್ಕೆ ಬಂದಿದ್ದು, ದಾವಣಗೆರೆಯಲ್ಲಿ ಆಗಸ್ಟ್ ೧೫–೧೬ರಂದು ಚಿಂತನಾ ಸಮಾವೇಶವನ್ನು ನಡೆಸಲಾಯಿತು. ದುಡಿಯುವ ಜನರ ಹೋರಾಟದ ಪರಂಪರೆ ಇರುವ ಈ ನಗರದಲ್ಲಿ ಏಳುನೂರು ಪ್ರತಿನಿಧಿಗಳು ಸಮಾವೇಶದಲ್ಲಿ ಭಾಗಿಗಳಾಗಿದ್ದರೆಂದು ವರದಿಯಾಗಿದೆ. ಬಹುತೇಕ ಎಲ್ಲ ಎಡಪಕ್ಷಗಳು, ಹಲವು ದಲಿತ ಸಂಘರ್ಷ ಸಮಿತಿಯ ಘಟಕಗಳು, ಎರಡು–ಮೂರು ರೈತ ಚಳುವಳಿಯ ಶಾಖೆಗಳು, ಸಾಕಷ್ಟು ಸಾಂಸ್ಕೃತಿಕ ಸಂಘಟನೆಗಳು ಹಾಗೂ ಹತ್ತಾರು ಪ್ರಮುಖ ಮುಂದಾಳುಗಳು ಭಾಗವಹಿಸಿದ್ದುದಾಗಿ ತಿಳಿದು ಬಂದಿದೆ. ಸಹಭಾಗಿಗಳಾಗಿದ್ದವರಲ್ಲಿ ಶ್ರೀಯುತರಾದ ಎಚ್. ಎಸ್. ದೊರೆಸ್ವಾಮಿ, ಎ. ಕೆ. ಸುಬ್ಬಯ್ಯ, ದೇವನೂರು ಮಹಾದೇವ, ದಿನೇಶ ಅಮೀನಮಟ್ಟು, ಗೌರಿ ಲಂಕೇಶ್, ಎಚ್. ಎಲ್. ಕೇಶವಮೂರ್ತಿ, ವಿ. ಎಸ್. ಶ್ರೀಧರ, ನಗರಗೆರೆ ರಮೇಶ್, ಡಾ॥ ಕೆ. ಸುಂದರರಾಜ್, ಡಾ॥ ರಹಮತ್ ತರೀಕೆರೆ, ಮುಂತದವರೆಲ್ಲಾ ಇದ್ದಾರೆ. ಸಮಾಜದ ಗುಣಾತ್ಮಕ ಬದಲಾವಣೆಗಾಗಿ ಮತ್ತು ನೈಜ ಸ್ವಾತಂತ್ರ್ಯದ ಆವಿಷ್ಕಾರಕ್ಕಾಗಿ ಐಕ್ಯ ಹೋರಾಟ ನಡೆಸಲು ಸಮಾವೇಶವು ತೀರ್ಮಾನಿಸಿದೆ. ಆಂದೋಲನದಲ್ಲಿ ಭಾಗವಹಿಸುವ ಪಕ್ಷಗಳು ಮತ್ತು ಚಳುವಳಿಗಳು ತಮ್ಮ ಪ್ರತ್ಯೇಕತೆಯನ್ನು ಉಳಿಸಿಕೊಂಡು, ಇಡೀ ಜನಸಮುದಾಯದ ಬಿಕ್ಕಟ್ಟುಗಳಿಗೆ ಪರಿಹಾರ ಕಂಡುಕೊಳ್ಳಲು ಆದ್ಯತೆಯ ಮೇಲೆ ಸಮಸ್ಯೆಗಳನ್ನು ಗುರುತಿಸಿ ಜಂಟಿಯಾಗಿ ಕಾರ್ಯಾಚರಣೆ, ಪ್ರತಿಭಟನೆ, ಹೋರಾಟ, ಇತ್ಯಾದಿ ಕ್ರಮಗಳನ್ನು ಅನುಸರಿಸುವ ಆಕಾಂಕ್ಷೆಯನ್ನು ಆಂದೋಲನವು ಹೊಂದಿದೆ. ಶೇಕಡ ೩೧ ಮತಗಳನ್ನು ಮಾತ್ರವೇ ಪಡೆದಿರುವ ಕೇಂದ್ರದ ಮೋದಿ ಸರ್ಕಾರವಾಗಲಿ, ರಾಜ್ಯದ ಕಾಂಗ್ರೆಸ್ ಸರ್ಕಾರವಾಗಲಿ, ಜನವಿರೋಧಿ ನೀತಿಗಳನ್ನು ಮತ್ತು ಕಾಯಿದೆಗಳನ್ನು ಜಾರಿಗೊಳಿಸಕೂಡದೆಂದು ಆಂದೋಲನವು ಆಗ್ರಹಿಸಲಿದೆಯೆಂಬ ನಿರ್ಣಯ ಗಳನ್ನು ಸಮಾವೇಶವು ಅಂಗೀಕರಿಸಿದೆ. ಇಡೀ ಆಂದೋಲನವನ್ನು ಒಂದು ರೂಪಕದ ಮುಖೇನ ಸಮಾವೇಶವು ಅರ್ಥೈಸಿಕೊಂಡಿದೆ : "ಕೈಗಳನ್ನು ಕಡಿಯುವವರ ಕೈಗಳನ್ನು ಕಟ್ಟಿಹಾಕಬೇಕು ಮತ್ತು ಕಟ್ಟಿಹಾಕುತ್ತೇವೆ" ಎಂಬುದು ಆ ರೂಪಕದ ಸಾರಾಂಶ. ದಕ್ಷಿಣ ಕನ್ನಡದಲ್ಲಿ ಮಲೆಕುಡಿಯರ

ಒಬ್ಬ ನಾಗರಿಕನ ಕೈಗಳನ್ನು ಕತ್ತರಿಸಿದ ಘೋರ ಕುಕೃತ್ಯದ ಹಿನ್ನೆಲೆಯಲ್ಲಿ ಎಲ್ಲ ಅಕೃತ್ಯಗಳನ್ನೂ ನೀಗಿಸುವ ಉದ್ದೇಶವು ಮಾನವತೆಯ ಪರವಾಗಿದೆ. ಐಕ್ಯ ಹೋರಾಟಗಳು ಸಹ ಅಷ್ಟೇ ಸ್ವಾಗತಾರ್ಹ.

* * *

ರೈತ ಆತ್ಮಹತ್ಯೆ ನಮ್ಮ ಕರ್ನಾಟಕ ರಾಜ್ಯದಲ್ಲಿ ನಿಲ್ಲದೆ ಮುಂದುವರಿಯುತ್ತಿದೆ. ಸರಕಾರ ಮಾತ್ರ ಅದಕ್ಕೆ ಸಮರ್ಪಕವಾದ ಕ್ರಮಗಳನ್ನೇನೂ ಕೈಗೊಳ್ಳದೆ ಸಂವೇದನಾರಹಿತವಾಗಿ ಕೈಕಟ್ಟಿ ಕುಳಿತಿದೆ. ಕಬ್ಬಿನ ಬೆಳೆಗಾರರ ಸಮಸ್ಯೆ ಹಾಗೇ ಇದೆ. ಅನೇಕ ಶಾಸಕರು, ಸಚಿವರುಗಳು ಸಕ್ಕರೆ ಕಾರ್ಖಾನೆಗಳ ಒಡೆತನದಲ್ಲಿ ಭಾಗಿಗಳಾಗಿರುವುದೇ ಪರಿಸ್ಥಿತಿಗೆ ಕಾರಣ. ಬೆಳೆಗಾರನಿಂದ ಕೊಳ್ಳುವುದರಲ್ಲೂ ಮೋಸಮಾಡಿ ಕಡಿಮೆ ಬೆಲೆ ನೀಡುವ ಕಾರ್ಖಾನೆ ಮಾಲಿಕರು ನೂರಾರು ಕೋಟಿ ಬಾಕಿ ಉಳಿಸಿಕೊಂಡು ರೈತರನ್ನು ಗೋಳಿಗೀಡುಮಾಡುತ್ತಿದ್ದಾರೆ. ರೈತರನ್ನು ಆತ್ಮಹತ್ಯೆಗೆ ದೂಡುತ್ತಿದೆ. ರೈತರ ಆತ್ಮಹತ್ಯೆ ಹೆಚ್ಚು ಕಡಿಮೆ ಎರಡು ದಶಕದಿಂದ ನಡೆದುಕೊಂಡು ಬಂದಿದೆ. ಆದರೆ ಕಟಾವಿಗೆ ಬಂದ ಕಬ್ಬಿನ ಬೆಳೆಗೆ ಬೆಂಕಿ, ಬೆಳೆದ ರೈತಕೂಡ ಅದರಲ್ಲಿ ಆಹುತಿಯಾಗುವುದು ನಮ್ಮ ರಾಜ್ಯದಲ್ಲೇ. ಇದುವರೆಗೆ ರೈತರ ಆತ್ಮಹತ್ಯೆಯಲ್ಲಿ ಮಹಾರಾಷ್ಟ್ರ ಮೊದಲ ಸ್ಥಾನದಲ್ಲಿತ್ತು, ಕರ್ನಾಟಕ ಎರಡನೇ ಸ್ಥಾನದಲ್ಲಿತ್ತು. ಈಗ ಕರ್ನಾಟಕ ಅಗ್ರಸ್ಥಾನ ಪಡೆದುಕೊಂಡರೆ ಆಶ್ಚರ್ಯವೇನಿಲ್ಲ. ನಾನಾ ಕಾರಣಗಳಿಗೆ ಜನ ಪ್ರಾಣ ಕಳೆದುಕೊಳ್ಳುತ್ತಾರೆ. ಅನುತ್ತೀರ್ಣರಾದ ವಿದ್ಯಾರ್ಥಿಗಳು, ಭಗ್ನಪ್ರೇಮಿಗಳು, ದಿವಾಳಿಯಾದವರು, ಸಾಲಬಾಧೆ ಸಹಿಸಲಾರದವರು ಹೀಗೆ ಬೇರೆ ಬೇರೆ ಜನವಿಭಾಗಗಳವರು ಆತ್ಮಾಹುತಿ ಗೀಡಾಗುವುದು ಹೊಸದೇನಲ್ಲ. ಆದರೆ ಜಾಗತೀಕರಣ, ಉದಾರೀಕರಣ ಮುಂತಾದವುಗಳ ನಂತರ ರೈತರು ಆತ್ಮಹತ್ಯೆಗೆ ಶರಣಾಗುತ್ತಿರುವುದು ಅಧಿಕ ಗೊಂಡಿರುವುದೀಗ ಆತಂಕಕಾರಿ.

ನ್ಯಾಷನಲ್ ಕ್ರೈಮ್ ರಿಕಾರ್ಡ್ಸ್ ಬ್ಯೂರೋ (ಎನ್‌ಸಿಆರ್‌ಬಿ) ಒದಗಿಸಿರುವ ಅಂಕಿ-ಅಂಶಗಳ ಪ್ರಕಾರ ೧೯೯೫ರಿಂದ ೨೦೧೪ರವರೆಗೆ ಹತ್ತೊಂಬತ್ತು ವರ್ಷಗಳಲ್ಲಿ ದೇಶದಲ್ಲಿ ರೈತರ ಆತ್ಮಹತ್ಯೆ ಪ್ರಕರಣಗಳ ಸಂಖ್ಯೆ ಮೂರು ಲಕ್ಷ ದಾಟಿದೆ. ಕರಾರುವಾಕ್ಕಾಗಿ ಹೇಳಬೇಕೆಂದರೆ ಅದು ೩೦೨,೧೧೬ ಆಗಿದೆ. ಮಹಾರಾಷ್ಟ್ರ, ಆಂಧ್ರಪ್ರದೇಶ (ತೆಲಂಗಾಣ ಒಳಗೊಂಡಂತೆ), ಕರ್ನಾಟಕ, ಮಧ್ಯಪ್ರದೇಶ ಮತ್ತು ಚತ್ತೀಸ್‌ಗಢ ಈ ಐದು ರಾಜ್ಯಗಳಲ್ಲಿ ಪ್ರಧಾನವಾಗಿ ರೈತರ ಆತ್ಮಹತ್ಯೆಗಳು ಜರುಗಿವೆ. ಕರ್ನಾಟಕದಲ್ಲಿ ೨೦೧೪ರಲ್ಲಿ ೩೨೧ ರೈತರು ಜೀವಕಳೆದು ಕೊಂಡಿದ್ದರು. ೨೦೧೩ರಲ್ಲಿ ಅದು ೧೪೦೩ ಆಗಿತ್ತು. ಆದರೆ ೨೦೧೫ರಲ್ಲಿ ಈ ಸಂಖ್ಯೆ ಅತ್ಯಧಿಕವಾಗುವ ಸೂಚನೆಗಳಿವೆ. ೨೦೧೪ರಿಂದ ಎನ್‌ಸಿಆರ್‌ಬಿ ಸಂಸ್ಥೆ ಆತ್ಮಹತ್ಯೆ ಪ್ರಕರಣಗಳ ವಿಂಗಡಣೆಯಲ್ಲಿ ಸಾಕಷ್ಟು ಬದಲಾವಣೆಗಳನ್ನು ತಂದಿದೆ. ಅದರಿಂದಾಗಿ ರೈತರ ಆತ್ಮಹತ್ಯೆ ಪ್ರಕರಣಗಳ ಸಂಖ್ಯೆ ಸ್ವಲ್ಪಮಟ್ಟಿಗೆ ಇಳಿದಿರುವಂತೆ ತೋರುತ್ತದೆ. ಅಂಕಿ-ಅಂಶಗಳನ್ನು ಕಲೆ ಹಾಕುವ ಪದ್ಧತಿಯಲ್ಲಿ ಏನೇ ಗೋಲ್‌ಮಾಲ್ ಮಾಡಿದರೂ ಕೂಡ ದೇಶದಲ್ಲಿ ರೈತರ ಆತ್ಮಹತ್ಯೆ ಪ್ರಕರಣಗಳು ಅಧಿಕಗೊಳ್ಳುತ್ತಿರುವುದು ನಿಜ.

* * *

ನಮ್ಮ ದೇಶದಲ್ಲಿ ಸಕ್ರಿಯವಾಗಿ ನಾನಾ ಕ್ಷೇತ್ರಗಳಲ್ಲಿ ಕೆಲಸ ಮಾಡುತ್ತಿರುವ ಎಲ್ಲ ಸರಕಾರೇತರ ಸಂಘಸಂಸ್ಥೆಗಳು, ಅಂದರೆ ಎನ್‌ಜಿಓ ಸಂಘಟನೆಗಳು ಪ್ರಾಮಾಣಿಕವಾಗಿ ಕೆಲಸ ಮಾಡುತ್ತಿವೆ ಎಂದೇನಲ್ಲ. ಇದರಲ್ಲಿ ಹಲವು ಎನ್‌ಜಿಓ ಸಂಸ್ಥೆಗಳು ವಿದೇಶೀ ಹಣಕಾಸಿನ ನೆರವು ಪಡೆದುಕೊಂಡು ಆಯಾ ದೇಶಗಳ ಹಿತಾಸಕ್ತಿಗಳಿಗಾಗಿ ಲಾಬಿ ಮಾಡಿದ್ದೂ ಇದೆ. ಸ್ವಾತಂತ್ರ್ಯಾನಂತರದಲ್ಲಿ ಅಮೆರಿಕದ ಸಿಐಎ ಮತ್ತು ಇತರ ಸಂಸ್ಥೆಗಳು ಕೆಲವು ಸಂಸ್ಥೆಗಳಿಗೆ ಹಣಕಾಸು ಒದಗಿಸುತ್ತಿದ್ದುದು ಬಯಲಾಗಿದೆ. ಮೋದಿ ಸರಕಾರ ಅಧಿಕಾರಕ್ಕೆ ಬಂದಮೇಲೆ ಆಯ್ದ ಕೆಲವು ಎನ್‌ಜಿಓ ಸಂಸ್ಥೆಗಳ ಮೇಲೆ, ಹಾಗೂ ವ್ಯಕ್ತಿಗಳ ಮೇಲೆ ನಿಗಾ ಇರಿಸಿ, ಕಿರುಕುಳ ನೀಡುತ್ತಿದೆ. ಭಾಜಪಗೆ ವಿರೋಧ ಇರುವವರ ಮೇಲೆ ಸೇಡು ತೀರಿಸಿಕೊಳ್ಳುವ ಕ್ರಮ ವಹಿಸಿದೆ. ಆ ರೀತಿ ತೊಂದರೆಗೊಳಗಾಗಿರುವವರು ತೀಸ್ತಾ ಸೆಟಲ್‌ವಾಡ್ ಮತ್ತು ಪತಿ ಜಾವೇದ್ ಆನಂದ್. ಸಿಟಿಜನ್ಸ್ ಫಾರ್ ಜಸ್ಟಿಸ್ ಅಂಡ್ ಪೀಸ್ ಎಂಬ ಸಂಸ್ಥೆ ಸ್ಥಾಪಿಸಿಕೊಂಡು ಇವರು ನಡೆಸುತ್ತಿರುವ ಸಂಸ್ಥೆ ಕೋಮುಸೌಹಾರ್ದಕ್ಕಾಗಿ ಶ್ರಮಿಸುತ್ತಿದೆ. ವಕೀಲರೂ ಆಗಿರುವ ಈ ದಂಪತಿಗಳು ೨೦೦೨ರ ಗುಜರಾತ್ ಕೋಮುಹಿಂಸಾಚಾರದಲ್ಲಿ ಬಲಿಯಾಗಿರುವವರಿಗೆ ನ್ಯಾಯ ಒದಗಿಸಲು ಪ್ರಯತ್ನಿಸುತ್ತಿದ್ದಾರೆ. ಅವರ ಪ್ರಯತ್ನದಿಂದ ಇದುವರೆಗೆ ಗುಜರಾತ್ ಹಿಂಸಾಚಾರ ದಲ್ಲಿ ತೊಡಗಿದ್ದ ೧೨೦ ಮಂದಿಗೆ ಶಿಕ್ಷೆಯಾಗಿದೆ. ಗುಜರಾತ್ ಹೈಕೋರ್ಟಿನಲ್ಲಿ ನಡೆಯುತ್ತಿರುವ ಜಾಕಿಯಾ ಜಾಫ್ರಿ ಪ್ರಕರಣದಲ್ಲಿ ಪ್ರಧಾನಿ ನರೇಂದ್ರ ಮೋದಿಯವರನ್ನು ಪ್ರಮುಖ ಆರೋಪಿ ಎಂದು ಹೆಸರಿಸಲಾಗಿದೆ. ಮೊಕದ್ದಮೆ ಅಂತಿಮ ಹಂತದಲ್ಲಿ ಇರುವುದರಿಂದ ತೀಸ್ತಾ ಸೆಟಲ್‌ವಾಡ್ ಸರಕಾರದ ಆಕ್ರೋಶಕ್ಕೆ ಬಲಿಯಾಗಿದ್ದಾರೆ. ಅವರ ಮೇಲೆ ವಿದೇಶೀ ನೆರವಿನ ದುರುಪಯೋಗದ ಆಪಾದನೆ ಮಾಡಲಾಗಿದೆ. ಸಿಬಿಐ ಅವರ ಕಚೇರಿ ಮತ್ತು ಮನೆಯ ಮೇಲೆ ದಾಳಿ ನಡೆಸಿದೆ. ಪೊಲೀಸರು ಅವರನ್ನು ಬಂಧಿಸಲು ನೋಡುತ್ತಿದ್ದರು. ಆದರೆ ಮುಂಬಯಿ ಹೈಕೋರ್ಟ್ ಅವರಿಗೆ ನಿರೀಕ್ಷಣಾ ಜಾಮೀನು ನೀಡಿದೆ. ಅಂತೂ ೨೦೦೨ರ ಗುಜರಾತ್ ಹಿಂಸಾಚಾರದ ಪ್ರಕರಣಗಳನ್ನು ಮುಚ್ಚಿಹಾಕಲು ಸಕಲ ಪ್ರಯತ್ನಗಳನ್ನು ಮಾಡುತ್ತಿದೆ. ಅವುಗಳಲ್ಲಿ ಇದು ಒಂದು.

* * *

ಪತ್ರಿಕೆ ಕೈಸೇರುವ ಹೊತ್ತಿಗೆ ಬೆಂಗಳೂರು ಮಹಾನಗರ ಪಾಲಿಕೆ ಚುನಾವಣೆಗಳು ಮುಗಿದು ಪಕ್ಷಗಳ ಹಣೆಬರಹ ಗೊತ್ತಾಗಿರುತ್ತದೆ. ಯಾವ ಅಡ್ಡಿಯೂ ಇಲ್ಲದೆ ಹೋದರೆ ಹೊಸ ಮೇಯರ್ ಅಧಿಕಾರವಹಿಸಿಕೊಂಡಿರುತ್ತಾರೆ. ಆದರೆ ಬೆಂಗಳೂರು ನಗರದ ನಾಗರಿಕರ ಬವಣೆ ಮಾತ್ರ ಹಾಗೇ ಮುಂದು ವರಿಯುತ್ತದೆ. ಎಲ್ಲೆಲ್ಲೂ ಕಸದ ರಾಶಿ, ಹಳ್ಳಕೊಳ್ಳಗಳ ಹಾದಿ, ಸಂಚಾರ ದಟ್ಟಣೆ ಮೊದಲಾದವೆಲ್ಲ ಯಥಾಪ್ರಕಾರ ಸಾಗುತ್ತದೆ. ಕೊನೆಗೂ ಕೊಸರಾಡಿ ಮುಖ್ಯಮಂತ್ರಿ ಸಿದ್ದರಾಮಯ್ಯ ರಾಜಧಾನಿಯಲ್ಲಿ ಚುನಾವಣೆ ನಡೆಸಲು ನಿರ್ಧರಿಸಿದರು. ಕಾಂಗ್ರೆಸ್ ಪಕ್ಷ ಮತ್ತೆ ಕಾರ್ಪೊರೇಷನ್ ಅಧಿಕಾರ ದಕ್ಕಿಸಿಕೊಳ್ಳುತ್ತದೆಯೇ ಎನ್ನುವುದು ಕುತೂಹಲದ ಸಂಗತಿ. ಭಾಜಪ ಮತ್ತು ಜೆಡಿಎಸ್ ಅದಕ್ಕೆ ಬಲವಾದ ಪೈಪೋಟಿ ನೀಡಿವೆ. ಯಾವತ್ತಿನಂತೆ ಈ ಸಲವೂ ಮೂರೂ ಪ್ರಮುಖ ಪಕ್ಷಗಳಲ್ಲಿ ಟಿಕೇಟು ದೊರಕದ ಅತೃಪ್ತರ ತಕರಾರು ಇತ್ತು. ಅದೇನೇ ಇರಲಿ ಈ ಸಲದ ಚುನಾವಣೆಗಳಲ್ಲಿ ಪ್ರಚಾರದ ಅಬ್ಬರ ಸ್ವಲ್ಪ ಕಡಿಮೆಯೇ ಎನ್ನಬೇಕು. ಈಗ ಆಯ್ಕೆಯಾಗುವವರು ಎಷ್ಟು ದಿನ ಅಧಿಕಾರದಲ್ಲಿ ಇರುತ್ತಾರೆ ಎನ್ನುವುದೇ ಸಂದೇಹ. ಏಕೆಂದರೆ ಮುಖ್ಯಮಂತ್ರಿಗಳು ಬೆಂಗಳೂರು ನಗರ ಕಾರ್ಪೊರೇಷನ್ ಅನ್ನು ತುಂಡರಿಸಿ ಮೂರು ಹೋಳು ಮಾಡಲು ಪಣ ತೊಟ್ಟಿದ್ದಾರೆ. ಅದಕ್ಕಾಗಿ ಕಾನೂನನ್ನೂ ಸಿದ್ಧಪಡಿಸಿ ಶಾಸನಸಭೆಯ ಅಂಗೀಕಾರ ಪಡೆದುಕೊಂಡಿದ್ದಾರೆ. ಈಗ ಅದು ರಾಜ್ಯಪಾಲರ ಅನುಮತಿಗಾಗಿ ಕಾಯುತ್ತಿದೆ. ದೇಶದಲ್ಲಿ ಯಾವ ಮಹಾನಗರವೂ ಈ ಬಗೆಯಲ್ಲಿ ಛಿದ್ರಗೊಂಡಿರುವುದು ಗಮನಕ್ಕೆ ಬಂದಿಲ್ಲ. ಬೆಂಗಳೂರಿ ಗಿಂತಲೂ ಹೆಚ್ಚು ಜನಸಂಖ್ಯೆ ಇರುವ ಕೊಲ್ಕತ್ತ, ಮುಂಬಯಿ, ಚೆನ್ನೈ ಕಾರ್ಪೊರೇಷನ್ನುಗಳು ಹಾಗೇ ಇವೆ. ಮುಖ್ಯಮಂತ್ರಿಗಳ ಕನಸು ನನಸಾದರೆ ಬೆಂಗಳೂರಿನ ಮೂವರು ಮೇಯರುಗಳು, ಉಪಮೇಯರುಗಳು, ಕಮೀಷನರುಗಳು, ಮತ್ತೆ ಅದಕ್ಕೆ ತಕ್ಕಹಾಗೆ ಸಿಬ್ಬಂದಿಯನ್ನು ಹೊಂದಿರುತ್ತದೆ. ಇದಕ್ಕೆ ತಗಲುವ ವೆಚ್ಚವೆಷ್ಟು ಎಂಬುದನ್ನು ಇದುವರೆಗೆ ಬಹಿರಂಗ ಪಡಿಸಿಲ್ಲ. ಆಡಳಿತ ಇದರಿಂದ ಚುರುಕಾಗುತ್ತದೆ ಎನ್ನುವುದು ಅರ್ಥವಿಲ್ಲದ್ದು. ಅಗತ್ಯವಾದ ಕ್ರಮಗಳನ್ನು ಕೈಗೊಂಡರೆ ಆಡಳಿತವನ್ನು ಸರಿಪಡಿಸಬಹುದು. ಅದಕ್ಕೆ ರಾಜಕೀಯ ಇಚ್ಛಾಶಕ್ತಿ ಬೇಕು ಅಷ್ಟೆ. ಸಮಸ್ಯೆಗೆ ಪರಿಹಾರ ಕಂಡುಕೊಳ್ಳುವ ಬದಲು, ಚಿಕ್ಕದು ಚೊಕ್ಕ ಎನ್ನುವ ವಾದ ಸರಿಯಲ್ಲ. ಅಂತೂ ಕರ್ನಾಟಕದ ರಾಜಧಾನಿಯಲ್ಲಿ ಇನ್ನೇನೇನು ಆಗುವುದೋ ಕಾದು ನೋಡಬೇಕಿದೆ.

* * *

ಇನ್ನೊಂದು ಸ್ವಾತಂತ್ರ್ಯೋತ್ಸವ ದಿನ ಬಂತು, ಹೋಯಿತು. ಈ ದೇಶದ ಕಡುಬಡಜನರ ಮಟ್ಟಿಗೆ ಇದಾವುದರ ಪರಿವೆ ಇಲ್ಲ. ಅವರ ಜೀವನದಲ್ಲಿ ಯಾವ ಬದಲಾವಣೆಯೂ ಆಗಿಲ್ಲ, ಆಗುವ ಸೂಚನೆಯೂ ಇಲ್ಲ. ಸ್ವಾತಂತ್ರ್ಯ ಬಂದು ಏಳನೇ ದಶಕಕ್ಕೆ ಕಾಲಿರಿಸು ತ್ತಿದ್ದರೂ ಜನಸಾಮಾನ್ಯರ ಸ್ಥಿತಿಯಲ್ಲಿ ಮಾತ್ರ ಹೇಳಿಕೊಳ್ಳುವಂಥ ಬದಲಾವಣೆ ಏನಿಲ್ಲ. ಕಳೆದ ವರ್ಷ ಮೋದಿಯವರು ಅಬ್ಬರದ ಭಾಷಣ ಮಾಡಿದರು. 'ಮೇಕ್ ಇನ್ ಇಂಡಿಯಾ' ಎಂದು ಘೋಷಿಸಿ ವಿದೇಶೀ ಕಂಪೆನಿಗಳಿಗೆ ಬಾಗಿಲು ತೆರೆದಿದೆ ಎಂದರು. ಆದರೆ ಅದರೊಳಗೆ ದೊಡ್ಡ ಪ್ರಮಾಣದಲ್ಲಿ ಅದು ಸುಳಿದಂತೆ ಕಾಣುವುದಿಲ್ಲ. ಅವರ ಸ್ವಚ್ಛ ಭಾರತ, ಕಪ್ಪು ಹಣ ವಾಪಸು ತರುವುದು, ಶುದ್ಧ ಆಡಳಿತ, ಲಂಚ ಮುಕ್ತ ವ್ಯವಹಾರ ಮುಂತಾದುವೆಲ್ಲ ಗಾಳಿ ಮಾತಾಗಿ

ಕಾಗದದ ಮೇಲೆ ಉಳಿದಿವೆ. ಹೋದಸಲದ ಅಬ್ಬರ ಈ ಸಲ ಇರಲಿಲ್ಲ. ಆದರೆ ಮೋದಿಯವರು ಮಾತ್ರ ಭರ್ಜರಿಯಾಗಿ ರುಮಾಲು ಸುತ್ತಿಕೊಡು ಸಾಲಂಕೃತವಾಗಿ ಹೊಸ ದಿರಸು ಧರಿಸಿ ಕೆಂಪು ಕೋಟೆಯ ಮೆಟ್ಟಿಲೇರಿದರು. ಅವರ ಭಾಷಣ ಆಲಿಸಲು ಕಡ್ಡಾಯವಾಗಿ ಅಧಿಕಾರಿಗಳು ಹಾಜರಿದ್ದರು. ಮಾಮೂಲಿಯಾಗಿ ಪಾರ್ಲಿಮೆಂಟ್ ಸದಸ್ಯರುಗಳು, ಸಚಿವರುಗಳು, ಮಾಜಿಗಳು, ರಾಯಭಾರಿ ವರ್ಗದವರು, ಮುಖಂಡರು ಹಾಜರಿದ್ದರು ಶಿಷ್ಟಾಚಾರಕ್ಕೆ ಅನುಸಾರವಾಗಿ. ಅಧಿಕಾರಿಗಳಿಗೆ ಕಡ್ಡಾಯ ಹಾಜರಿಗೆ ಸುತ್ತೋಲೆ ಕಳಿಸಲಾಗಿತ್ತು. ನರೇಂದ್ರ ಮೋದಿ ಏನೇ ಹಾವಭಾವಗಳನ್ನು ಪ್ರದರ್ಶಿಸಿ ಭಾಷಣ ಬಿಗಿದರೂ ಹೋದ ವರ್ಷದ ಹರಿತವಿರಲಿಲ್ಲ ಅವರ ಮಾತುಗಳಲ್ಲಿ. ಮೋದಿ ಮಾತಿಗೂ ಕೃತಿಗೂ ಸಂಬಂಧವಿಲ್ಲದಿರುವುದು ಈಗಾಗಲೇ ಎಲ್ಲರಿಗೂ ಗೊತ್ತಾಗಿದೆ, ಅವರಿಗೂ ಮನವರಿಕೆಯಾಗಿದೆ. ತಮ್ಮ ಆಡಳಿತದ ಸಾಧನೆಗಳನ್ನು ಉತ್ಪ್ರೇಕ್ಷೆ ಮಾಡಿಕೊಂಡಿದ್ದರೂ ಕೇಳುಗರಿಗೆ ಅದು ಚರ್ವಿತ-ಚರ್ವಣ. ಸಾರ್ವಜನಿಕ ಸಭೆಗಳಲ್ಲಿ ಬೇಕಾದಷ್ಟು ಅಬ್ಬರಿಸುವ ಮೋದಿಯವರು ಪಾರ್ಲಿಮೆಂಟಿನಲ್ಲಿ ಮಾತ್ರ ಮೌನಿ. ಅದರಲ್ಲೂ ವಿವಾದಾತ್ಮಕ ಪ್ರಶ್ನೆಗಳು ಎದುರಾದಾಗ, ಹುಳುಕು ಮುಚ್ಚಿಕೊಳ್ಳಬೇಕಾದಾಗ ಮಾತೇ ಹೊರಡು ವುದಿಲ್ಲ. ಪ್ರತಿಪಕ್ಷಗಳು ಗಂಭೀರ ಆರೋಪ ಮಾಡಿದರೂ ಅದನ್ನೆಲ್ಲ ನೋಡಿಕೊಳ್ಳುವವರು ಬೇರೇ ಲೆಫ್ಟಿನೆಂಟ್‌ಗಳಿದ್ದಾರೆ. ಪಾರ್ಲಿಮೆಂಟ್ ಬಗ್ಗೆ ಮೋದಿಗೆ ಅನಾದರಣೆಯೇ ಹೆಚ್ಚು ಎನ್ನುವುದು ಈಗ ಸ್ಪಷ್ಟವಾಗಿದೆ. ಈಗತಾನೆ ಮುಗಿದ ಮುಂಗಾರು ಅಧಿವೇಶನದಲ್ಲಿ ಅವರು ತಳೆದ ಮೌನ ಅಕ್ಷಮ್ಯ. ಕೆಂಪುಕೋಟೆಯ ವೇದಿಕೆಯಿಂದ 'ಸ್ಟಾರ್ಟ್ ಅಪ್ ಇಂಡಿಯಾ', 'ಸ್ಟಾಂಡ್ ಅಪ್ ಇಂಡಿಯಾ' ಎಂದು ಮೋದಿ ಹೊರಡಿಸಿರುವ ಘೋಷಣೆ ಯಾರಿಗಾಗಿ ? ಅವರ ಮಂತ್ರಿಗಳಿಗೆ, ಅನುಯಾಯಿಗಳಿಗೆ ಇರಬೇಕು ಪ್ರಾಯಶಃ. ಆಚರಣೆ, ಆಡಂಬರ, ಭಾಷಣ ಎಲ್ಲ ಒಂದು ಬಗೆಯ ರಿಚುಯಲ್ ಆಗುತ್ತಿದೆ. ಅಂತೂ ಮೋದಿ ಅದನ್ನು ಮುಗಿಸಿ ವಿಮಾನ ಏರಿ ವಿದೇಶ ಪ್ರವಾಸ ಹೊರಟೇಬಿಟ್ಟರು ತಮ್ಮ ಸಾಧನೆ ಹೇಳಿಕೊಳ್ಳುವುದಕ್ಕೆ.

* * *

ಅಂದಹಾಗೆ ಹಿರೋಷಿಮಾ, ನಾಗಸಾಕಿಗಳ ಮೇಲೆ ಅಮೆರಿಕ ಪರಮಾಣು ಬಾಂಬು ಹಾಕಿ ಬರೋಬರಿ ಎಪ್ಪತ್ತು ವರ್ಷ ಆಗಸ್ಟ್ ತಿಂಗಳಿಗೆ. ಹೆಚ್ಚು ಕಡಿಮೆ ಒಂದೂವರೆ ಲಕ್ಷ ಜಪಾನೀಯರನ್ನು ಬಲಿ ತೆಗೆದುಕೊಂಡ ಕರಾಳ ದಿನದ ನೆನಪು ಎಂದಿಗೂ ಮಾಸಿಹೋಗದು. ಜಪಾನ್ ಯುದ್ಧದಲ್ಲಿ ಶರಣಾಗುವ ಸ್ಥಿತಿಯನ್ನು ತಲುಪಿದ್ದಾಗ, ತನ್ನ ಪ್ರತಿಷ್ಠೆಗೆ, ಮಾರಕಾಸ್ತ್ರದ ಪ್ರಾಬಲ್ಯ ತೋರಿಸಲು ಪ್ರಯೋಗಾರ್ಥವಾಗಿ ೧೯೪೫ರ ಆಗಸ್ಟ್ ೬ರಂದು ಅಮೆರಿಕ ನಡೆಸಿದ ಪರಮಾಣು ಬಾಂಬು ದಾಳಿ ಅಮಾನುಷ. ಈ ದಾಳಿಗೆ ಬಲಿಯಾದವರಿಗೆ 'ಹೊಸತು' ನಮನ ಸಲ್ಲಿಸುತ್ತದೆ. ಎಂದೆಂದಿಗೂ ಪರಮಾಣು ಅಸ್ತ್ರಗಳು ಬಳಕೆಯಾಗದಿರಲಿ ಎಂದು ಅಪೇಕ್ಷಿಸುತ್ತದೆ. ಈ ಕರಾಳ ದಿನದಂದು ನಮ್ಮ ಲೋಕಸಭೆ ಒಂದು ನಿಮಿಷ ಮೌನ ಆಚರಿಸಿ, ಮೃತರಿಗೆ ಗೌರವ ಸಲ್ಲಿಸಿದ್ದು ಸ್ವಾಗತಾರ್ಹ. ಜಪಾನೀಯರ ಆ ದುರಂತದ ದಿನವನ್ನು ಎಂದಿಗೂ ಮರೆಯದಿರೋಣ.

*೫ನೇ ಪುಟದಿಂದ... (ಸಂಪಾದಕೀಯ)*

ಹಾಗೂ ಮಧ್ಯಪ್ರದೇಶದ ಮುಖ್ಯಮಂತ್ರಿ ಶಿವರಾಜ್ ಸಿಂಗ್ ಚೌಹಾನ್ ಇವರುಗಳೇ ಈ ಹಗರಣಗಳ ಪ್ರಮುಖ ಆರೋಪಿಗಳು. ಇವರ ರಾಜೀನಾಮೆಗೆ ಪ್ರತಿಪಕ್ಷಗಳು ಆಗ್ರಹಿಸಿದ್ದೇ ಸಂಸತ್ತಿನ ಇಡೀ ಕಲಾಪಗಳಿಗೆ ಮುಳುವಾಯಿತು. ಅಧಿವೇಶನದಲ್ಲಿ ಎಲ್ಲ ಪ್ರತಿಪಕ್ಷಗಳೂ ಈ ವಿಷಯದಲ್ಲಿ ಒಗ್ಗೂಡಿದ್ದುದು ಗಮನಿಸಬೇಕಾದ ಸಂಗತಿ. ಕಾಂಗ್ರೆಸ್ ಈ ಸಂದರ್ಭದಲ್ಲಿ ಮುಖ್ಯವಾದ ಪಾತ್ರವಹಿಸಿದ್ದುದು ಅಚ್ಚರಿಯೇನಲ್ಲ. ಎಡಪಕ್ಷಗಳು ಕೊನೆಯವರೆಗೆ ಸಚಿವರುಗಳ ರಾಜೀನಾಮೆಗೆ ಒತ್ತಾಯ ತಂದವು. ಲೋಕಸಭೆಯಲ್ಲಿ ಸಂಖ್ಯಾಬಲ ಹೊಂದಿರುವ ಭಾಜಪ ಪ್ರತಿಪಕ್ಷಗಳಿಗೆ ಯಾವುದೇ ರಿಯಾಯಿತಿ ತೋರದಿರಲು ನಿರ್ಧರಿಸಿದ್ದುದು ಕಲಾಪಗಳ ಮುಂದೂಡಿಕೆಗೆ ಕಾರಣ. ಪಾರ್ಲಿಮೆಂಟರಿ ಸಚಿವ ವೆಂಕಯ್ಯ ನಾಯ್ಡು, ಹಣಕಾಸಿನ ಸಚಿವ ಅರುಣ್ ಜೇಟ್ಲಿ, ಗೃಹಸಚಿವ ರಾಜನಾಥ ಸಿಂಗ್ ಇವರನ್ನು ಮುಂದಿಟ್ಟು ಪ್ರಧಾನಿ ನರೇಂದ್ರ ಮೋದಿ ಸಂಸತ್ತಿನಲ್ಲಿ ಮಾತನಾಡದೇ ಇದ್ದದ್ದು ಉದ್ಧಟತನ. ಪ್ರಾಯಶಃ ಪ್ರಧಾನಿ ಮಧ್ಯೆ ಪ್ರವೇಶಿಸಿ ಸಮಜಾಯಿಷಿ ನೀಡಿದ್ದರೆ ಪರಿಸ್ಥಿತಿ ಸುಧಾರಿಸುತ್ತಿತ್ತೊ ಏನೊ. ಕನಿಷ್ಠ ಎಂದರೆ ಆರೋಪ ಕುರಿತು ತನಿಖೆ ಆದೇಶಿಸುವ ಔದಾರ್ಯವನ್ನಾದರೂ ಆಡಳಿತ ಪಕ್ಷ ತೋರಬಹುದಿತ್ತು. ಅದಕ್ಕೆ ಪ್ರತಿಯಾಗಿ ಸಂಸತ್ತಿನ ಕಲಾಪವನ್ನೇ ಬಲಿಯಾಗಿಸಿದ್ದು ಅಕ್ಷಮ್ಯ. ಹಾಗೆಂದ ಮಾತ್ರಕ್ಕೇ ಪ್ರತಿಪಕ್ಷಗಳು ಅನುಸರಿಸಿದ ತಂತ್ರ ಸಮರ್ಥನೀಯ ಎಂದೇನಲ್ಲ. ಬೇರಾವ ವಿಧಾನವೂ ಇಲ್ಲದ್ದರಿಂದ ಅವು ಪ್ರತಿಭಟನೆ ಮಾರ್ಗ ತಳೆದವು ಎನ್ನಬಹುದು. ಈ ಪ್ರತಿಭಟನೆಗಳ ಒಂದು ಹಂತದಲ್ಲಿ ಲೋಕಸಭೆಯ ಇಪ್ಪತ್ತೈದು ಮಂದಿ ಕಾಂಗ್ರೆಸ್ ಸದಸ್ಯರನ್ನು ಐದು ದಿನಗಳು ಕಲಾಪದಲ್ಲಿ ಭಾಗವಹಿಸದಂತೆ ಅಮಾನತುಗೊಳಿಸಿದ ಸಭಾಧ್ಯಕ್ಷರ ನಡವಳಿಕೆ ಪ್ರಶ್ನಾರ್ಹವಾದ್ದು. ಇಷ್ಟು ದೊಡ್ಡ ಸಂಖ್ಯೆಯಲ್ಲಿ ಸದಸ್ಯರನ್ನು ಅಮಾನತುಗೊಳಿಸಿದ್ದು ಇದೇ ಮೊದಲ ಸಲ. ಇದು ಕೂಡ ಭಾಜಪದಿಂದ ಬಹುಮತದ ದುರುಪಯೋಗವೆ.

ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಎಂಥದೇ ವಿವಾದಾತ್ಮಕ ವಿಷಯ ಇದ್ದರೂ ಚರ್ಚೆಯಿಂದ ಬಗೆಹರಿಸುವುದು ಮುಖ್ಯ. ನಮ್ಮ ಪಾರ್ಲಿಮೆಂಟರಿ ವ್ಯವಸ್ಥೆಯಲ್ಲಿ ಇದಕ್ಕಾಗಿ ಹಲವು ವಿಧಾನಗಳನ್ನು ಅಳವಡಿಸಲಾಗಿದೆ. ಅದಕ್ಕಿಂತ ಹೆಚ್ಚಾಗಿ ಹಲವು ವರ್ಷಗಳಲ್ಲಿ ಉತ್ತಮವಾದ ಶಿಷ್ಟಾಚಾರದ ಪರಂಪರೆಗಳೂ ಇವೆ. ಲೋಕಸಭೆಯ ನಾಯಕರಾಗಿ ಪ್ರಧಾನಿಯವರ ಪಾತ್ರ ಇದರಲ್ಲಿ ಮುಖ್ಯ. ಮೋದಿಯವರು ಅಧಿಕಾರ ವಹಿಸಿಕೊಂಡಾಗಿನಿಂದ ಅವರು ಒಂದು ರೀತಿಯಲ್ಲಿ ಸಂಸತ್ತನ್ನು ಕಡೆಗಣಿಸಿದ್ದಾರೆಂದೇ ಹೇಳಬಹುದು. ಯಾವುದೇ ಪ್ರಮುಖ ವಿಷಯಗಳ ಕುರಿತು ಅವರು ಚರ್ಚೆಯಲ್ಲಿ ಮಧ್ಯ ಪ್ರವೇಶಿಸಿದ್ದು ಕಾಣಬರುವುದಿಲ್ಲ. ಇದುವರೆಗೆ ಸಂಸತ್ತಿನಲ್ಲಾಗಲೀ, ಹೊರಗಾಗಲಿ ಅವರು ಲಲಿತ್ ಗೇಟ್, ವ್ಯಾಪಂ ಹಗರಣಗಳ ಕುರಿತು ಚಕಾರವೆತ್ತಿಲ್ಲ. ಹಾಗೆಯೇ ಭೂಸ್ವಾಧೀನ ಮಸೂದೆ, ಸರಕು-ಸೇವಾ ತೆರಿಗೆ ತಿದ್ದುಪಡಿ ಮಸೂದೆಯಾಗಲಿ ಅವರು ವಹಿಸಿರುವುದು ಮೌನ ಸಂಪತ್ತಿನಲ್ಲಿ. ಪ್ರತಿಪಕ್ಷಗಳು ತಮ್ಮ ಅಭಿವೃದ್ಧಿ ಕಾರ್ಯಕ್ರಮಗಳನ್ನು ಅಡ್ಡಿಪಡಿಸುತ್ತಿವೆ ಎನ್ನುವ ಆರೋಪವನ್ನು ಮಾತ್ರ ಮಾಡುತ್ತಾರೆ.

ಸಂಸತ್ತಿನ ಕೊನೆಯ ಎರಡು ದಿನಗಳು ಲಲಿತ್ ಗೇಟ್, ವ್ಯಾಪಂ ಹಗರಣಗಳ ಕುರಿತು ಚರ್ಚೆ ನಡೆಯಿತಾದರೂ ಅದರಿಂದೇನೂ ಪ್ರಯೋಜನವಾಗಲಿಲ್ಲ. ಚರ್ಚೆ ರಚನಾತ್ಮಕವಾಗಿದ್ದು ವಿವಾದಕ್ಕೆ ತೆರೆ ಎಳೆಯುವಂಥ ಸೂಚನೆ ಏನೂ ಇಲ್ಲದೆ ಹೋದದ್ದು ಮುಂದೆ ಚಳಿಗಾಲದ ಅಧಿವೇಶನದಲ್ಲೂ ಅದು ಮತ್ತೆ ಮರುಕಳಿಸುವ ಸಾಧ್ಯತೆ ತಳ್ಳಿಹಾಕುವಂತಿಲ್ಲ. ಚರ್ಚೆ ಬಹುತೇಕವಾಗಿ ಆರೋಪ ಪ್ರತ್ಯಾರೋಪಗಳಿಂದ ಕೂಡಿದ್ದು, ಹಳೆಯ ಪ್ರಕರಣಗಳನ್ನು ಕೆದಕುವ ಕೆಸರೆರಚಾಟದಲ್ಲೇ ಮುಗಿಯಿತು. ಅಭಿವೃದ್ಧಿ ಕಾರ್ಯಗಳನ್ನು ಅಡ್ಡಿಪಡಿಸುತ್ತಿವೆ ಪ್ರತಿಪಕ್ಷಗಳು ಎಂಬ ಗಂಭೀರ ಆರೋಪ ಪ್ರತಿಪಕ್ಷಗಳ ಮೇಲೆ. ಇದಕ್ಕೆ ಉದಾಹರಣೆಯಾಗಿ 'ಜಿಎಸ್‌ಟಿ' ಅಥವಾ ಸರಕು-ಸೇವಾ ತೆರಿಗೆ ತಿದ್ದುಪಡಿ ಮಸೂದೆ ಅಂಗೀಕಾರವಾಗದೆ ಮುಂದೆ ಹೋಗಿರುವುದನ್ನು ನೀಡಲಾಗಿದೆ. ಇದು ಸಂವಿಧಾನ ತಿದ್ದುಪಡಿಗೆ ಸಂಬಂಧಿಸಿದ ಮಸೂದೆ. ಹಲವು ರಾಜ್ಯ ಸರಕಾರಗಳ ವಿರೋಧವೂ ಇದೆ ಅದಕ್ಕೆ. ಯಾವ ಬಗೆಯಲ್ಲೂ ಇದು ಅಭಿವೃದ್ಧಿ ಕಾರ್ಯಗಳಿಗೆ ಅಡ್ಡಿಯಾಗಿಲ್ಲ. ಭಾಜಪ ನೇತೃತ್ವದ ಸರಕಾರಕ್ಕೆ ಜನಪರ ಅಭಿವೃದ್ಧಿ ಕಾರ್ಯಗಳಿಗೆ ನಿಜವಾಗಿ ಆಸ್ಥೆ ಇದ್ದರೆ, ಅದು ಪ್ರತಿಪಕ್ಷಗಳ ಸಹಕಾರ ಪಡೆದುಕೊಳ್ಳಬೇಕು. ಅದಕ್ಕೆ ಅಗತ್ಯ ವಿಧಾನಗಳನ್ನು ಅರಸಬೇಕು. ಬಹುಮತದ ಗರ್ವ ಪ್ರಕಟಿಸುವುದರಿಂದ ಏನೂ ಪ್ರಯೋಜನ ವಾಗದು. ಮುಖ್ಯವಾಗಿ ಪ್ರಧಾನಿಯವರ ಮೌನ ಅಸಹನೀಯ. ಅದು ಸಂಸತ್ತಿಗೆ ಅಗೌರವದ ಸೂಚನೆಯೂ ಆಗುತ್ತದೆ.




### ಚುನಾವಣಾ ಸುಧಾರಣೆ

ರಾಷ್ಟ್ರೀಯ ಕಾನೂನು ಆಯೋಗ ನೀಡಿರುವ ಚುನಾವಣಾ ಸುಧಾರಣೆಯ ವರದಿಯನ್ನು ಶ್ರೀಯುತ ಮುರಳೀಧರ ಅವರು ಪರಿಚಯಿಸಿಕೊಟ್ಟಿದ್ದಾರೆ (ಹೊ. ಆಗಸ್ಟ್ ೨೦೧೫). ವರದಿಯ ಒಟ್ಟು ಯಶಸ್ಸು ಬೆಟ್ಟವನ್ನು ಕಡಿದು ಇಲಿ ಹಿಡಿಯುವುದಕ್ಕಿಂತ ಬೇರೆಯಲ್ಲ. ಅತಿ ಪ್ರಮುಖವಾಗಿ ಅಗತ್ಯವಾದ ಸುಧಾರಣೆಯ ಬಗ್ಗೆ ಒಂದಕ್ಷರವನ್ನೂ ಬರೆಯದ ಈ ವರದಿಯಿಂದ ಆಗುವ ಪ್ರಯೋಜನ ಕನಿಷ್ಠ ಮಟ್ಟದ್ದು. ಪ್ರಧಾನಿ ನರೇಂದ್ರ ಮೋದಿಯವರದು "ಶೇಕಡ ೩೧ರ ಸರ್ಕಾರ." ಆದರೂ ಅದನ್ನು ಪ್ರಜಾಪ್ರಭುತ್ವ ಕ್ರಮದಲ್ಲಿ ಚುನಾಯಿಸಲಾಗಿದೆ ಎನ್ನುವುದು ಕ್ರೂರ ಕುಹಕ. ಅದನ್ನು ಸರಿಪಡಿಸಲು ಆಯೋಗವು ಮುಂದಾಗದೆ ದಂಡದ ಕೆಲಸ ಮಾಡಿದೆ. ತೇಪೆದಾರಿ ಕೆಲಸದಿಂದ ಎಷ್ಟು ಪ್ರಯೋಜನವಾದೀತು ! ೩೧ ಮಂದಿ ೬೯ ಮಂದಿಯ ಮೇಲೆ ದಬ್ಬಾಳಿಕೆ ನಡೆಸುವ ವ್ಯವಸ್ಥೆ ಇದು.

ನಮಗೆ ಅತ್ಯಗತ್ಯವಾದ ಸುಧಾರಣೆಯೆಂದರೆ ಚುನಾವಣೆಯಲ್ಲಿ ಪಕ್ಷಗಳು ಗಳಿಸುವ ಒಟ್ಟು ಮತಗಳ ಶೇಕಡಾವಾರು ಪ್ರಮಾಣದಲ್ಲಿ ಸದಸ್ಯರ ಆಯ್ಕೆ ಆಗಬೇಕಾದ್ದು. ಆಗ ಶೇ. ೩೧ರ ಸರ್ಕಾರ ಇರುವುದಿಲ್ಲ ಮತ್ತು ಇಡೀ ದೇಶದ ಬೆಂಬಲ ಇದೆ ಎಂದು ಕೊಚ್ಚಿಕೊಳ್ಳುತ್ತಾ ಮನಸ್ವೀ ಸರ್ವಾಧಿಕಾರ ನಡೆಸುವ ಸಾಧ್ಯತೆ ಯಾರಿಗೂ ಇರುವುದಿಲ್ಲ. ಯಾವುದೇ ಕ್ಷೇತ್ರದಲ್ಲಿ ಬಹಳ ಕಡಿಮೆ ಮತಗಳು ದೊರೆತರೂ ಅವಕ್ಕೂ ಬೆಲೆ ಬಂದು ಎಲ್ಲ ಪಕ್ಷಗಳಿಗೂ ರಾಷ್ಟ್ರಮಟ್ಟದ ಗಣನೆಯಲ್ಲಿ ಸರಿಯಾದ ಪ್ರಾತಿನಿಧ್ಯ ದೊರೆಯುವಂತಾಗುತ್ತದೆ. ಐದಾರು ಅಭ್ಯರ್ಥಿಗಳ ಪೈಕಿ ಅತಿಹೆಚ್ಚು ಎನ್ನುವ ಶೇಕಡ ೨೫ ಅಥವಾ ೨೬ ಮತಗಳಿಂದ ಯಾರೂ ಪಾರ್ಲಿಮೆಂಟ್ ಮತ್ತು ಅಸೆಂಬ್ಲಿಗಳಿಗೆ ಚುನಾಯಿತರಾಗಕೂಡದು. ಈಗಿನ ಕೆಟ್ಟ ಪದ್ಧತಿಯಲ್ಲಿ ಅಂತಹ ಮತಿಹೀನ ಸನ್ನಿವೇಶವಿದೆ. ಅದು ಪ್ರಜೆಗಳ ಅಭಿಪ್ರಾಯಕ್ಕೆ ಮಾನ್ಯತೆ ಕೊಟ್ಟಂತೆ ಆಗುವುದಿಲ್ಲ. ವಿಶ್ವದ ಅನೇಕ ದೇಶಗಳಲ್ಲಿ ಈ ಪದ್ಧತಿಯಂತೆ ಚಲಾಯಿಸಲ್ಪಟ್ಟ ಎಲ್ಲ ಮತಗಳ ಪೈಕಿ ಶೇಕಡಾವಾರು ಪ್ರಮಾಣದಲ್ಲಿ ಸದಸ್ಯರು ಆಯ್ಕೆಯಾಗುತ್ತಾರೆ. ಈ ಪದ್ಧತಿಯು ನೈಜ ಪ್ರಜಾಪ್ರಭುತ್ವ. ಅದನ್ನು ಬಿಟ್ಟು ಶೇಕಡ ೩೧ರ ಸರ್ಕಾರವು ದೇಶದ ಪ್ರತಿನಿಧಿ ಎಂಬ ಮೂರ್ಖ ಪದ್ಧತಿಯಲ್ಲಿ ನಾವಿದ್ದೇವೆ. ಕಾನೂನು ಆಯೋಗವು ಇದರ ಕಡೆ ಗಮನ ಹರಿಸಿಲ್ಲದಿರುವುದು ಸೂಚಿತ ಸುಧಾರಣೆಯನ್ನು ಹಾಸ್ಯಾಸ್ಪದಗೊಳಿಸಿದೆ.

*ಬೆಂಗಳೂರು* **ಆರ್. ಕೆ. ಶ್ರೀಧರ**

### ರೈತರ ಸಮಸ್ಯೆಗಳಿಗೆ ಪರಿಹಾರವಿಲ್ಲವೆ ?

ಹಲವಾರು ವರ್ಷಗಳಿಂದ ರೈತರು ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದರೂ ರಾಜ್ಯ ಸರಕಾರ ಮತ್ತು ಕೇಂದ್ರ ಸರಕಾರ ಈ ಬಗ್ಗೆ ಚಿಂತಿಸಿ ಕ್ರಮ ಕೈಗೊಳ್ಳುತ್ತಿಲ್ಲ. ಪ್ರತಿ ಸಮಸ್ಯೆಗೂ ಪರಿಹಾರ ಇದ್ದೇ ಇರುತ್ತದೆ. ಆ ಬಗ್ಗೆ ತಜ್ಞರು ಚಿಂತಿಸಿ ಕ್ರಮ ಕೈಗೊಳ್ಳುವಂತೆ ಸರಕಾರಕ್ಕೆ ಒತ್ತಾಯಿಸಬೇಕು.

ರೈತರು ಬೆಳೆದ ಉತ್ಪನ್ನಗಳಿಗೆ ವೈಜ್ಞಾನಿಕ ಬೆಲೆ ನಿಗದಿ ಮಾಡುವ ಕ್ರಮವನ್ನು ಕೇಂದ್ರ ಸರಕಾರ ಮಾಡಬೇಕು. ರಾಷ್ಟ್ರೀಕೃತ ಬ್ಯಾಂಕುಗಳಲ್ಲಿ ರೈತರಿಗೆ ನೀಡುವ ಸಾಲಕ್ಕೆ ಕಡಿಮೆ ಬಡ್ಡಿ ಹಾಕುವಂತಹ ವ್ಯವಸ್ಥೆಯನ್ನು ಕೇಂದ್ರ ಸರಕಾರ ಮಾಡಬೇಕು.




ರಾಜ್ಯ ಸರಕಾರಗಳು ತನ್ನ ವ್ಯಾಪ್ತಿಯ ಸಹಕಾರಿ ಸಂಘ ಹಾಗೂ ಚಿಕ್ಕ ಬ್ಯಾಂಕುಗಳಿಗೆ ನಿರ್ದೇಶನ ನೀಡಿ ರೈತರಿಗೆ ನೀಡುವ ಸಾಲಕ್ಕೆ ಕಡಿಮೆ ಬಡ್ಡಿ ಹಾಕುವಂತೆ ವ್ಯವಸ್ಥೆ ಮಾಡಬೇಕು. ರಾಜ್ಯ ಸರಕಾರ ಹಾಗೂ ಕೇಂದ್ರ ಸರಕಾರಗಳು ಸೇರಿ ರೈತರಿಗೆ ಬೀಜ, ರಸಗೊಬ್ಬರ, ಔಷಧ, ಒಕ್ಕುಲುತನಕ್ಕೆ ಬಳಕೆಯಾಗುವ ಎಲ್ಲ ವಸ್ತುಗಳನ್ನು ರಿಯಾಯ್ತಿ ದರದಲ್ಲಿ ಪೂರೈಸಬೇಕು. ಪಹಣಿ ನಕಲು, ಹೊಲದ ರಿಜಿಸ್ಟರ್ ಕಾಪಿಯನ್ನು ಒದಗಿಸಿದರೆ ಸರಳವಾಗಿ ಸಾಲ ಸಿಗುವಂತಹ ವ್ಯವಸ್ಥೆಯಾಗಬೇಕು. ಇಂಥ ಸರಳ ವ್ಯವಸ್ಥೆ ಇಲ್ಲದ್ದರಿಂದ ಸಾಹುಕಾರರಿಂದ, ಅಡತಿ ಅಂಗಡಿ (ಮಂಡಿ) ಮಾಲೀಕರಿಂದ ಸಾಲ ಪಡೆಯುತ್ತಿರುವುದರಿಂದ ರೈತರು ಸಮಸ್ಯೆಗೊಳಗಾಗಿದ್ದಾರೆ.

೧೦೦ಕ್ಕೆ ೬೦%ರಷ್ಟು ರೈತರಿರುವ, ಅಂದರೆ ಬಹುಸಂಖ್ಯಾತರ ಸಮಸ್ಯೆಯನ್ನು ಹಾಗೇ ಉಳಿಸಿದರೆ ರಾಷ್ಟ್ರ ಉದ್ಧಾರವಾಗದು. ಉದ್ಯಮ – ಇಲ್ಲವೆ ನಾಶ ಎಂದು ಹೇಳುವ ಕಾಲವಿತ್ತು. ಈಗ ಒಕ್ಕಲುತನಕ್ಕೆ ಅಗ್ರಪ್ರಾಶಸ್ತ್ಯ – ಇಲ್ಲವೇ ಸರ್ವನಾಶ ಎಂಬ ಪರಿಸ್ಥಿತಿ ಉದ್ಭವಿಸಿದೆ. ಒಂದು ಕಾಲದಲ್ಲಿ ನಮ್ಮ ರಾಷ್ಟ್ರ ಆಹಾರ ಧಾನ್ಯಗಳನ್ನು ಹೊರದೇಶಗಳಿಂದ ತರಿಸಿಕೊಳ್ಳುತ್ತಿತ್ತು. ರೈತರು ನಮ್ಮ ದೇಶಕ್ಕಾಗುವಷ್ಟು ಆಹಾರ ಧಾನ್ಯವನ್ನು ಉತ್ಪಾದಿಸಿ ನಮ್ಮ ದೇಶದ ಮರ್ಯಾದೆ ಕಾಪಾಡಿದ್ದಾರೆ. ಅವರ ಬದುಕನ್ನು ಕಾಪಾಡುವ ಹೊಣೆಗಾರಿಕೆ ರಾಜ್ಯ ಹಾಗೂ ಕೇಂದ್ರ ಸರಕಾರಗಳ ಮೇಲಿದೆ.

*ಕೊಪ್ಪಳ* **ಅಲ್ಲಮಪ್ರಭು ಬೆಟ್ಟದೂರು**

### ರೈತರ ಸಾವಿನ ಸುತ್ತ

ಉಳುವ ಒಕ್ಕಲ ಮಗನ ಸಾವಿನ ಸರಣಿ ಮುಂದುವರಿದಿದೆ. ಅನ್ನದಾತನ ಆತ್ಮಹತ್ಯೆಯ ಬಗ್ಗೆ ಕಾರಣ ಹುಡುಕುವ, ಪರಿಹಾರ ಕಂಡುಹಿಡಿಯುವ ಕೆಲಸ ನಡೆಯುತ್ತಿದೆ. ಜೂನ್ ಮತ್ತು ಜುಲೈ ತಿಂಗಳಿನಲ್ಲೇ ಅತಿ ಹೆಚ್ಚು ರೈತರ ಆತ್ಮಹತ್ಯೆ ಪ್ರಕರಣಗಳು ನಡೆಯುತ್ತಿರುವುದು ಸರ್ಕಾರವನ್ನು ಚಿಂತೆಗೀಡುಮಾಡಿದೆ. ಕುಸಿಯುತ್ತಿರುವ ಅಂತರ್ಜಲ, ಕಾಲಕ್ಕೆ ಸರಿಯಾಗಿ ಬಾರದ ಮಳೆ, ಸೂಕ್ತ ಮಾರುಕಟ್ಟೆ ವ್ಯವಸ್ಥೆ ಕೊರತೆ, ಮಧ್ಯವರ್ತಿಗಳ ಹಾವಳಿ, ಬೆಂಬಲ ಬೆಲೆ ಇಲ್ಲದಿರುವುದು, ಎಲ್ಲ ಸೇರಿ ರೈತರನ್ನು ಉಸಿರು ಗಟ್ಟಿಸುತ್ತಿವೆ. ವ್ಯವಸಾಯ ಪ್ರಧಾನವಾದ ದೇಶದಲ್ಲಿ ಕೃಷಿಯನ್ನು ನಿರ್ಲಕ್ಷಿಸಿ, ಕೈಗಾರಿಕೀಕರಣಕ್ಕೆ ಹೆಚ್ಚು ಪ್ರಾಧಾನ್ಯ ನೀಡಿದ್ದು ಮತ್ತು ಬದಲಾದ ಹವಾಮಾನಕ್ಕೆ ತಕ್ಕಂತೆ ರೈತರಲ್ಲಿ ಬೆಳೆ ಪದ್ಧತಿಯ ಬಗ್ಗೆ ಅರಿವು ಮೂಡಿಸದೆ ಹೋದದ್ದರ ಪರಿಣಾಮವಾಗಿ ಅನ್ನದಾತ ಇಂದು ಆತ್ಮಹತ್ಯೆಯ ಹಾದಿ ಹಿಡಿದಿದ್ದಾನೆ.

ಅನ್ನದಾತನ ಆತ್ಮಹತ್ಯೆಯನ್ನು ತಡೆಯಲು ಸರ್ಕಾರ, ರೈತಪರ ಸಂಘಟನೆಗಳು ಹಲವು ರೀತಿಯ ಕಾರ್ಯಕ್ರಮಗಳನ್ನು ರೂಪಿಸುತ್ತಿವೆ. ಸಂಕಷ್ಟದಲ್ಲಿರುವ ರೈತರ ಮನೆ ಬಾಗಿಲಿಗೆ ಹೋಗಿ ಧೈರ್ಯ ತುಂಬುವ, ಸಾವನ್ನಪ್ಪಿದ ರೈತ ಕುಟುಂಬಗಳಿಗೆ ಸಾಂತ್ವನ ಹೇಳುವ, ಜಿಲ್ಲೆ, ತಾಲೂಕು, ಹೋಬಳಿ ಮಟ್ಟದಲ್ಲಿ ರೈತ ಸಂಪರ್ಕ ಸಭೆ ನಡೆಸಿ ಆತ್ಮಸ್ಥೈರ್ಯ ತುಂಬುವ ಕೆಲಸ ನಡೆಯುತ್ತಿದೆ. ಇದೇ ಸಂದರ್ಭದಲ್ಲಿ ಈಗ ನಮ್ಮನ್ನಾಳುವ ಜನಪ್ರತಿನಿಧಿಗಳು ರೈತರ ಸಾವಿಗೆ ನೈಜ ಕಾರಣಗಳನ್ನು ಹುಡುಕುವ ಭರದಲ್ಲಿ ಬೇಜವಾಬ್ದಾರಿ ಹೇಳಿಕೆಗಳನ್ನು ನೀಡುತ್ತಿದ್ದಾರೆ. ರೈತರ ಸಾವಿಗೆ ಕೃಷಿ ಕ್ಷೇತ್ರದ ಕಷ್ಟಗಳಿಗಿಂತ ಹೆಚ್ಚಾಗಿ ವೈಯಕ್ತಿಕ ಸಮಸ್ಯೆಗಳೇ ಕಾರಣವಾಗುತ್ತಿವೆ ಎಂದು ಹಗುರವಾಗಿ ಮಾತನಾಡುತ್ತಿದ್ದಾರೆ. ರೈತನ ಸಾವಿಗೆ ವೈಯಕ್ತಿಕ ಕಾರಣಗಳೂ ಇರಬಹುದು, ನಿಜ. ಹಾಗಂತ ಆ ಸಮಸ್ಯೆಗಳು ಬೆಳೆದು ಬೃಹದಾಕಾರವಾಗಿ ನಿಲ್ಲಲು

ಕಾರಣವಾದದ್ದು ತಾನು ನಂಬಿದ ಕೃಷಿ ಕ್ಷೇತ್ರವೇ ಎನ್ನುವುದನ್ನು ಮಾತ್ರ ರೈತರ ಸಾವಿನ ಬಗ್ಗೆ ಹಗುರವಾಗಿ ಮಾತನಾಡುವವರು ಮರೆಯಬಾರದು. ಮದುವೆಗೆ, ಮುಂಜಿಗೆ, ಹಬ್ಬಹರಿದಿನಕ್ಕೆ ಖರ್ಚುವೆಚ್ಚ ಮಾಡಲು ರೈತ ಸಾಲಮಾಡಿಕೊಂಡು ಸಂಕಷ್ಟ ಎದುರಿಸುತ್ತಿದ್ದಾನೆ ಎನ್ನುವ ರಾಜಕಾರಣಿಗಳು, ಅಧಿಕಾರಿಗಳು ತಾವು ಈ ವಿಷಯದಲ್ಲಿ ಮಾತನಾಡಲು ಎಷ್ಟು ಪ್ರಾಮಾಣಿಕರು ಎನ್ನುವುದನ್ನು ಅರಿತುಕೊಂಡರೆ ಒಳ್ಳೆಯದು. ನಡೆನುಡಿಯಲ್ಲಿ ಅಜಗಜಾಂತರ ವ್ಯತ್ಯಾಸವಿರುವ ನಮ್ಮನ್ನಾಳುವ ವರ್ಗ ಕಾಯಕ ಜೀವಿಗೆ ನೈತಿಕ ಪಾಠ ಹೇಳಲು ಹೊರಟಿರುವುದು ನವನಾಗರಿಕತೆಯ ವ್ಯಂಗ್ಯವಲ್ಲದೆ ಮತ್ತೇನು ?

ಮೈಸೂರು **ಚಿನ್ನಸ್ವಾಮಿ ವಡ್ಡಗೆರೆ**

✉ ಆಗಸ್ಟ್ ತಿಂಗಳ 'ಹೊಸತು' ಶ್ರೀ ಕೋ. ಚೆ. ಅವರ "ಮೈಸೂರು ಸಂಸ್ಥಾನ ಎಲ್ಲಿದೆ ?" ಕರ್ನಾಟಕದ ಪ್ರಜೆಗಳ ಕಣ್ತೆರೆಸುವ ಲೇಖನ. ಭಾರತೀಯ ಸಂವಿಧಾನದ ಪ್ರಕಾರ ಶಾಸನಬದ್ಧ ಆಡಳಿತ ಸ್ಥಾಪನೆಯಾದ ಮೇಲೂ 'ಮೈಸೂರು ಸಂಸ್ಥಾನದ ನೂತನ ಅರಸು' ಎಂಬ ಘೋಷಣೆ, ದತ್ತುಪುತ್ರನಿಗೆ ಪಟ್ಟಾಭಿಷೇಕ ಮುಂತಾದುವು ಮಕ್ಕಳಾಟದಂತೆ ಕಾಣಿಸುತ್ತವೆ. ಲೇಖಕರು ಹೇಳಿದಂತೆ ಇದೊಂದು ಹಾಸ್ಯಾಸ್ಪದ ವಿಷಯ.

ಶ್ರೀ ಸಿ. ಆರ್. ಕೃಷ್ಣರಾವ್ ಅವರ 'ಸ್ವಾತಂತ್ರ್ಯಾನಂತರದ ಭಾರತ' ಲೇಖನ ಮಾಲೆ ಬಹಳ ಚೆನ್ನಾಗಿ ವಸ್ತುನಿಷ್ಠವಾಗಿ ಮೂಡಿಬರುತ್ತಿದೆ. ಶ್ರೀ ಅರ್ಯಮನ್ ಅವರ 'ದೇವರು, ಕೆಲವು ಟಿಪ್ಪಣಿಗಳು' ಚಿಂತನ ಯೋಗ್ಯ ಅಂಶಗಳನ್ನೊಳಗೊಂಡಿರುವ ಲೇಖನ. ಮನುಷ್ಯ ತನ್ನ ಅನುಕೂಲಕ್ಕೆ ಸೃಷ್ಟಿಸಿ ಕೊಂಡಿರುವ 'ದೇವರು' ನಿಜಕ್ಕೂ ಸರ್ವಶಕ್ತನೆಂಬಂತೆ ತೋರುವುದಿಲ್ಲ. ಮನುಷ್ಯನ ಮಿದುಳಿನ ಗ್ರಹಣ ಶಕ್ತಿಗೆ ನಿಲುಕದ, ತರ್ಕಕ್ಕೆ ಸಿಗದ ವಿಷಯಗಳ ಬಗೆಗೆ ಮೌನವಾಗಿರುವುದೇ ಲೇಸು.

ಶ್ರೀಮತಿ ಭಾರತೀ ಕಾಸರಗೋಡು ಅವರ 'ಯಾನದ ಬಾಧೆಗಳು' ವಿಮರ್ಶಾತ್ಮಕ ಲೇಖನ ಚೆನ್ನಾಗಿ ಮೂಡಿಬಂದಿದೆ. ಶ್ರೀ ಎಸ್. ಎಲ್. ಭೈರಪ್ಪನವರ ಅಭಿಮಾನಿಯಾಗಿಯೂ ಈ ಕಾದಂಬರಿ ನನ್ನಲ್ಲೂ ಇದೇ ರೀತಿಯ ಅಭಿಪ್ರಾಯ ಮೂಡಿಸಿತು.

ಬೆಂಗಳೂರು **ಸರೋಜ ಕೃಷ್ಣಮೂರ್ತಿ**

✉ ಆಗಸ್ಟ್ ಸಂಚಿಕೆಯಲ್ಲಿ ಪ್ರಕಟವಾದ ಶ್ರೀಮತಿ ಭಾರತೀ ಕಾಸರಗೋಡು ಅವರ 'ಯಾನದ ಬಾಧೆಗಳು' ಲೇಖನವನ್ನೋದಿದಾಗ 'ಯಾನ'ದಿಂದ ನಿರಾಸೆಗೊಂಡವನು ನಾನೊಬ್ಬನೇ ಅಲ್ಲವೆಂದು ತಿಳಿದು ಸ್ವಲ್ಪ ಸಮಾಧಾನವೆನಿಸಿತು. ಲೇಖನದ ಕೊನೆಯಲ್ಲಿ ಭೈರಪ್ಪನವರ ಹಿಂದಿನ ಕೃತಿಗಳನ್ನು ಬಹು ಮೆಚ್ಚುಗೆಯಿಂದ ನೆನೆದಿರುವುದು ಶ್ರೀಮತಿ ಭಾರತಿಯವರ ವಿಮರ್ಶೆಯ ನಿಷ್ಪಕ್ಷಪಾತಿ ಮನೋಭಾವಕ್ಕೆ ಸಾಕ್ಷಿಯಾಗಿದೆ. ಅಂತರಾಳ ಪಾತ್ರ ಚಿತ್ರಣದಲ್ಲಿರುವ ನ್ಯೂನತೆ ಮತ್ತು ಮಹಿಳಾ ವಿರೋಧಿ ಚಿಂತನೆಗಳು ಶ್ರೀಮತಿ ಭಾರತಿಯವರ ಆಕ್ಷೇಪಣೆಗಳಾದರೆ, ನನ್ನ ದೃಷ್ಟಿಯಲ್ಲಿ 'ಯಾನ' ಒಂದು ಬಹಳ ಬಾಲಿಶ ಕಲ್ಪನೆಯಾಗಿದೆ. ಈ ಕೃತಿಯನ್ನು ರಚಿಸುವ ಮುನ್ನ ವಿಜ್ಞಾನಿಗಳ ಸಲಹೆ ಪಡೆದಿರುವುದನ್ನು ಅವರು ಹೇಳಿದ್ದರೂ ಇಂತಹ ದೋಷಗಳು ಹೇಗೆ ನುಸುಳಿವೆ ಎಂಬುದು ತಿಳಿಯಲಿಲ್ಲ.

ಈ ಕಾದಂಬರಿಯ ಮುಖ್ಯಪಾತ್ರಗಳಾದ ಉತ್ತರಾ, ಸುದರ್ಶನ್ ಮತ್ತು ಯಾದವ್ ಅವರ ಸ್ವಗತಗಳೇ ಕಾದಂಬರಿಯ ತಿರುಳು. ಇವರೆಲ್ಲರ ಸ್ವಗತದ ಜೊತೆ ಆಕಾಶ್ ಮತ್ತು ಮೇದಿನಿ ಅವರ ಚಿಂತನೆಗಳೂ ಇರಬೇಕಾಗಿತ್ತಲ್ಲವೇ ? ಮೇದಿನಿಯನ್ನು ದೈಹಿಕವಾಗಿ ಕೂಡುವುದನ್ನು ಬಿಟ್ಟು ಬೇರೆ ಯಾವುದರ ಬಗ್ಗೆಯೂ ಆಕಾಶ್ ಚಿಂತಿಸುವುದಂತೆಯೇ ಕಾಣುವುದಿಲ್ಲ. ಅಂತೆಯೇ, ಮೇದಿನಿ ಕೂಡ ಈ ಪರಿಧಿಯಿಂದ ಹೊರಬಂದು ಯೋಚಿಸುವುದಿಲ್ಲ. ಹಾಗೆ ನೋಡಿದರೆ ಇವರಿಬ್ಬರ ಚಿಂತನೆ ಹೆಚ್ಚು ಪ್ರಾಮುಖ್ಯತೆಯನ್ನು ಪಡೆಯಬೇಕಿತ್ತು. ಒಂದು ವೇಳೆ ಬಾಹ್ಯಾಕಾಶ ನೌಕೆಯಲ್ಲಿ ಭೂಮಿಯಲ್ಲಿನ ವಿದ್ಯಮಾನಗಳನ್ನು ವೀಕ್ಷಿಸುವ, ಇಲ್ಲವೇ ಅದರ ಕುರಿತಾದ ವೀಡಿಯೋ ಚಿತ್ರಗಳನ್ನು ವೀಕ್ಷಿಸುವ ಅವಕಾಶವಿದ್ದಿರದಿದ್ದರೆ, ಆಕಾಶ್ ಮತ್ತು ಮೇದಿನಿಯವರಿಗೆ ತಾವು ಏನನ್ನು ಕಳೆದುಕೊಂಡಿದ್ದೇವೆಂಬ ಕಲ್ಪನೆ ಬರುತ್ತಿರಲಿಲ್ಲವೇನೋ ?

ಇಸ್ರೋದ ಮೇಲಧಿಕಾರಿಯೊಬ್ಬರು, ತಿರುಪತಿ ತಿಮ್ಮಪ್ಪನಿಗೆ ಸೇವೆ ಸಲ್ಲಿಸಿದ ಪ್ರಕರಣದಿಂದ ಪ್ರೇರಿತರಾಗಿ, ಡಾ॥ ವೆಂಕಟ್ ಅವರ ತಿರುಪತಿ ಸೇವೆಯನ್ನು ಪ್ರಸ್ತಾಪಿಸಿದಂತಿದೆ. ಅವರು ತಮ್ಮ ತಾಯಿಯ ಸೂಚನೆಯನ್ನನುಸರಿಸಿ ಆ ಸೇವೆಯನ್ನು ಮಾಡಿಸಿದ್ದಾದರೆ, ಅದು ಖಂಡಿತವಾಗಿಯೂ ಒಂದು ಖಾಸಗಿ ಕ್ರಿಯೆ. ಅದಕ್ಕಾಗಿ ಸರಕಾರದ ಧನಸಹಾಯದ ಮಂಜೂರಾತಿಗಾಗಿ ಡಾ॥ ವೆಂಕಟ್ ಸರಕಾರದೊಡನೆ ಸಂವಾದಕ್ಕಿಳಿಯುವುದು ಅರ್ಥಹೀನ.

ನನಗಂತೂ ಈ ಕೃತಿಯಲ್ಲಿ ಯಾವ ವಿಶೇಷವೂ ಕಾಣಲಿಲ್ಲ.

ಹುಬ್ಬಳ್ಳಿ **ಡಾ॥ ಕ. ರಮೇಶ ಬಾಬು**

## ನನ್ನ ನೆಮ್ಮದಿ 'ಹೊಸತು'ವಿನಲ್ಲಿದೆ

✉ 'ನೆಮ್ಮದಿಯ ನಾಳೆ ನಮ್ಮದು' – ಇದು 'ಹೊಸತು' ಶೀರ್ಷಿಕೆ ಮೇಲಿರುವ ಪುಟ್ಟ ಬರಹ. ನಿಜಕ್ಕೂ ಅರ್ಥಪೂರ್ಣ. ಇಂದಿನ ಎಲ್ಲ ಪತ್ರಿಕೆಗಳಿಗಿಂತ 'ಹೊಸತು' ಪ್ರತಿ ತಿಂಗಳು ತುಂಬ ಹೊಸತಾಗಿಯೇ ನಮ್ಮ ಕೈ ಸೇರುತ್ತಿದೆ. ಕಳೆದೊಂದು ದಶಕದಿಂದ ಇದರೊಂದಿಗೆ ನನ್ನ ನಂಟಿದೆ. ನಾನಂತೂ ಮೊದಲು ಪತ್ರಿಕೆಯ ಮುಖಪುಟವನ್ನು ಚೆನ್ನಾಗಿ ನೋಡಿ, ತದನಂತರ ಕೊನೆಯ ಪುಟದಲ್ಲಿರುವ ಕಲಾವಿದರ ಪುಟ್ಟ ಪರಿಚಯ ಮತ್ತು ಅವರ ಅದ್ಭುತ ಕಲಾಕೃತಿಗಳನ್ನು ಕಣ್ತುಂಬಿಕೊಂಡು ನೆಮ್ಮದಿಯನ್ನು ಕಾಣುವೆ.

'ಹೊಸತು' ತುಳಿತಕ್ಕೊಳಗಾದ ಎಲ್ಲ ಜನಸಮುದಾಯವನ್ನು ದೃಷ್ಟಿಯಲ್ಲಿಟ್ಟುಕೊಂಡು ಸಂಬಂಧಪಟ್ಟವರ ಕಣ್ತೆರೆಸುವುದರೊಡನೆ ಕಣ್ಣೀರಲ್ಲಿ ಕೈ ತೊಳೆಯುತ್ತಿರುವವರನ್ನು ಸಂತೈಸುವ ಕೆಲಸ ಮಾಡುತ್ತಿದೆ. ಇದರ ಜೊತೆ ಜೊತೆಗೆ ಕಲೆ, ಸಾಹಿತ್ಯ, ಸಂಸ್ಕೃತಿಯ ಬಗ್ಗೆ ಅಪಾರವಾದ ಕಾಳಜಿಯನ್ನು ಹೊಂದಿರುವುದು ನಿಜಕ್ಕೂ ಶ್ಲಾಘನೀಯ. 'ಹೊಸತು' ಬಳಗಕ್ಕೆ ನನ್ನದೊಂದು ವಿನಂತಿ. ಇಲ್ಲಿಯವರೆಗೆ ಕೊನೆಯ ಪುಟದಲ್ಲಿ ಪ್ರಕಟವಾಗಿರುವ ಕಲಾವಿದರ ಮತ್ತು ಕಲಾಕೃತಿಗಳನ್ನು ಒಂದೆಡೆ ಸೇರಿಸಿ ಪುಸ್ತಕರೂಪದಲ್ಲಿ ಕಟ್ಟಿಕೊಟ್ಟರೆ ಇನ್ನೂ ಹೆಚ್ಚು ಉಪಯುಕ್ತವಾದೀತು.

ರಾಜ್ಯದ ನಾನಾ ಚಿತ್ರಕಲಾ ಶಾಲೆಗಳಲ್ಲಿ ಓದುತ್ತಿರುವ ಸಾವಿರಾರು ವಿದ್ಯಾರ್ಥಿಗಳು ಇಂತಹ ಪುಸ್ತಕದ ಮೇಲೆ ತಪ್ಪದೆ ಕಣ್ಣಾಡಿಸಿದರೆ ನಮ್ಮ ನಾಡಿನ ಅಪರೂಪದ ಕಲಾವಿದರು ಹಾಗೂ ಅವರೊಳಗಿರುವ ಕ್ರಿಯಾಶೀಲತೆ ಗೊತ್ತಾಗುತ್ತದೆ.

ಬಾಗಲಕೋಟ **ಕೆ. ಬಿ. ವೀರಲಿಂಗನಗೌಡ್ರ**

'ಹೊಸತು' ಆಗಸ್ಟ್ ಸಂಚಿಕೆಯಲ್ಲಿ ಪ್ರಕಟವಾಗಿರುವ ಕೋಚೆಯವರ 'ಮೈಸೂರು ಸಂಸ್ಥಾನ ಎಲ್ಲಿದೆ ?' ಎಂಬ ಲೇಖನವನ್ನು ಆಸಕ್ತಿಯಿಂದ ಓದಿದೆ. ಮಾಜಿ ಸಂಸ್ಥಾನಗಳನ್ನು ಭಾರತ ದೇಶದಲ್ಲಿ ವಿಲೀನಮಾಡಿದ ಮೇಲೆ, ಮಾಜಿ ಅರಸು ಮನೆತನದವರಿಗೆ ಜೀವನೋಪಾಯಕ್ಕಾಗಿ ಕೊಡುತ್ತಿದ್ದ 'ಪ್ರೀವಿಪರ್ಸ್'ಅನ್ನು ರದ್ದುಪಡಿಸಲಾಯಿತು ಎಂದು ಲೇಖಕರು ಹೇಳಿದ್ದಾರೆ. ಪ್ರೀವಿಪರ್ಸ್‌ಅನ್ನು ಯಾವ ಆಧಾರದ ಮೇಲೆ ಅಥವಾ ಯಾವ ಶಾಸನದ ಹಿನ್ನೆಲೆಯಲ್ಲಿ ರದ್ದುಪಡಿಸಿದರು ಎಂದು ಹೇಳಿದ್ದರೆ ಸೂಕ್ತವಾಗಿರುತ್ತಿತ್ತು.

ಬೆಂಗಳೂರು **ಮೀನಾಕ್ಷಿ**

ಆಗಸ್ಟ್ ಸಂಚಿಕೆಯಲ್ಲಿ ಪ್ರಕಟವಾಗಿರುವ 'ಮೈಸೂರು ಸಂಸ್ಥಾನ ಎಲ್ಲಿದೆ ?' ಎಂಬ ನನ್ನ ಲೇಖನ ಕುರಿತು ಶ್ರೀಮತಿ ಮೀನಾಕ್ಷಿ ಅವರು ವಿವರಣೆ ನೀಡಬೇಕೆಂದು ಕೇಳಿ ಬರೆದಿರುವ ಪತ್ರವನ್ನು 'ಹೊಸತು' ಕಚೇರಿಯಲ್ಲಿ ಓದಿದೆ.

ಅದಕ್ಕೆ ನನ್ನ ಪ್ರತಿಕ್ರಿಯೆ :

ಭಾರತ ಸಂವಿಧಾನದ ಅನುಚ್ಛೇದ ೩೬೩ಎಗೆ ತಂದ ತಿದ್ದುಪಡಿಯಂತೆ (೨೬ನೆಯ ತಿದ್ದುಪಡಿ, ೧೯೭೧) ರಾಷ್ಟ್ರದ ವಿವಿಧ ರಾಜ್ಯಗಳಲ್ಲಿದ್ದ ರಾಜಮಹಾರಾಜರುಗಳ, ಅರಸು ಮನೆತನಗಳ ಆಡಳಿತ ವ್ಯವಸ್ಥೆ (ಸಂಸ್ಥಾನ) ಮತ್ತು ಅವರ ಸ್ಥಾನಮಾನಗಳೇ ಅಲ್ಲದೆ ಅವರಿಗೆ ಹಾಗೂ ಅವರ ಉತ್ತರಾಧಿಕಾರಿಗಳಿಗೆ ನೀಡಲಾಗುತ್ತಿದ್ದ ಪರಿಹಾರ ದ್ರವ್ಯ, ಪ್ರೀವಿಪರ್ಸ್ (ರಾಜಧನ) ಮತ್ತಿತರ ವಿಶೇಷ ಸೌಲಭ್ಯಗಳನ್ನು ರದ್ದುಗೊಳಿಸಲಾಯಿತು.

ಬೆಂಗಳೂರು **ಕೋ. ಚೆ.**

✉ 'ಯಾನ'ದ ಕುರಿತು ಬಾಧೆಗಳು, ಭಾರತೀ ಕಾಸರಗೋಡು – ಅವರು ಹೊಸತುವಿನ ಆಗಸ್ಟ್ ೨೦೧೫ರ ಸಂಚಿಕೆಯಲ್ಲಿ ಬರೆದ ಲೇಖನ ಕುರಿತು ಈ ಪತ್ರ.

ಕಾದಂಬರಿಯನ್ನು ಓದುವಾಗ ಪ್ರಜ್ಞಾವಂತರೂ, ಸಂವೇದನಾಶೀಲರೂ ಆದವರು ಅನುಭವಿಸುವ ಯಾತನೆಯನ್ನು ಲೇಖನದ ಶೀರ್ಷಿಕೆಯು ಯಥಾರ್ಥವಾಗಿ ಪ್ರತಿಬಿಂಬಿಸುತ್ತದೆ. ಸದರಿ ಲೇಖಕರನ್ನು ಅಭಿನಂದಿಸುತ್ತ, ಕಾದಂಬರಿಕಾರರ 'ಸೈದ್ಧಾಂತಿಕ ಬದ್ಧತೆ'ಯ ಬಗೆಗೆ ಒಂದೆರಡು ಮಾತುಗಳನ್ನು ಹೇಳುವುದು ಈ ಪತ್ರದ ಉದ್ದೇಶ.

ಡಾ॥ ಎಸ್. ಎಲ್. ಭೈರಪ್ಪನವರು ಸಭೆಗಳಲ್ಲಿ ಭಾಷಣ ಮಾಡುವಾಗ, ಸೃಷ್ಟಿಶೀಲನಾದ ಲೇಖಕನು ಯಾವುದೇ ಸಿದ್ಧಾಂತಕ್ಕೆ ಬದ್ಧನಾಗಿರುವುದು ಸರಿಯಲ್ಲ ಇತ್ಯಾದಿಯಾಗಿ ಏರುದನಿಯಲ್ಲಿ ಸಾರಿ ಹೇಳುತ್ತಾರೆ. ಆದರೆ, ಸ್ವತಃ ಭೈರಪ್ಪನವರ ಹಲವು ಕಾದಂಬರಿಗಳಲ್ಲಿ ಅವರ ಬದ್ಧತೆಯನ್ನು ಗುರುತಿಸಬಹುದು 'ಯಾನ'ದಲ್ಲಂತೂ ಇದು ಸಾಕಷ್ಟು ಸ್ಪಷ್ಟವಾಗಿದೆ. ಒಂದು ಉದಾಹರಣೆ :

ಭೂಮಿಯಲ್ಲಿದ್ದುಕೊಂಡೇ ಮಹಾಯಾನವನ್ನು ನಿಯಂತ್ರಿಸುವ ಡಾ॥ ವೆಂಕಟ್ ಅವರಿಗೆ ಒಂದು ಹಂತದಲ್ಲಿ, 'ನಮಗೆ ತಿಳಿಯದ ಯಾವುದೋ ಒಂದು ಅಂಶವು ಕೈಕೊಟ್ಟರೆ, ಉಡಾವಣೆಯು ವ್ಯರ್ಥವಾಗಬಹುದು' – ಎಂದು ಕಳವಳ ಉಂಟಾಗುತ್ತದೆ. ಆಗ ಅವರು ತಮ್ಮ ತಾಯಿಯ ಸಲಹೆಯಂತೆ "ನೌಕೆಯ ಒಂದು ಬೆಳ್ಳಿಯ ಪ್ರತಿಮೆಯನ್ನು ಮಾಡಿಸಿಕೊಂಡು, ತಿರುಪತಿಗೆ ಹೋಗಿ ದೇವರ ಮುಂದಿಟ್ಟು ಪೂಜೆ ಮಾಡಿಸಿ, ಹುಂಡಿಗೆ ಹಾಕಿ ಬರುತ್ತಾರೆ – ಒಂಬತ್ತು ವರ್ಷದ ನಂತರ ಸಂಸ್ಥೆಗೆ ಕೇಂದ್ರ ಲೆಕ್ಕ ಪರಿಶೋಧನ ಇಲಾಖೆಯಿಂದ ಒಂದು ತಗಾದೆ ಬಂತು." ಸಂಸ್ಥೆಯು ಜಾತ್ಯತೀತ ಸರ್ಕಾರದಿಂದ ಅನುದಾನಿತವಾಗಿರುವುದರಿಂದ ಅದು ಯಾವ ಮತಧರ್ಮ ಕೆಲಸಗಳಿಗೂ ಹಣವನ್ನು ವಿನಿಯೋಗಿಸಬಾರದೆಂದೂ, ಯಾವ ಮತ ಧಾರ್ಮಿಕ ಕೆಲಸವನ್ನೂ ಮಾಡಬಾರದೆಂದೂ, ಇದೊಂದು ವೈಜ್ಞಾನಿಕ ಸಂಸ್ಥೆಯಾಗಿರುವುದರಿಂದ ಮತಧಾರ್ಮಿಕ ನಂಬಿಕೆಗಳಿಂದ ದೂರವಿರಬೇಕೆಂದೂ ಷರಾ ಬರೆದು, ತಿರುಪತಿ ಯಾತ್ರೆಗೆ ಮಾಡಿರುವ ಬೆಳ್ಳಿ, ಲೋಹಕಾರನ ಮಜೂರಿ – ಇತ್ಯಾದಿ... ಜುಂಮ್ಲಾ ಇಪ್ಪತ್ತೇಳು ಸಾವಿರದ ಮುನ್ನೂರ ಅರವತ್ತೆರಡು ರೂಪಾಯಿ ಹದಿನೇಳು ಪೈಸೆಗಳನ್ನು ಇದುವರೆಗಿನ ಶೇಕಡ ಹನ್ನೆರಡರ ಬಡ್ಡಿ ಸಮೇತ ಕಟ್ಟಬೇಕೆಂಬ ಹುಕುಂ. ಏನಂತೀರ ? (ಯಾನ – ಪು. ೧೭೩. ಓದುಗರು ಉತ್ತರ ಕೊಡಬೇಕು ! ಏಕೆಂದರೆ ಆಗ ಇದ್ದುದು ಯು.ಪಿ.ಎ. (UPA) ಸರ್ಕಾರ. ಯಾನ – ಈ ಯಾತ್ರೆ ಮಾಡಿದವರು ಬೆಳ್ಳಿ ಪ್ರತಿಮೆ ಮಾಡಿಸಿಕೊಂಡು ಹೋಗಿದ್ದವರು, ಇಸ್ರೋ ನಿರ್ದೇಶಕರಾಗಿದ್ದ ಡಾ॥ ರಾಧಾಕೃಷ್ಣನ್ ಎಂದು ಪತ್ರಿಕೆಗಳಲ್ಲಿ ವರದಿಯಾಗಿತ್ತು). 'ಮಂಗಳ ಯಾನ ನೌಕೆ' (ಮಾರ್ಸ್ ಆರ್ಬಿಟರ್ ಮಿಷನ್) ಮಂಗಳನ ಕಕ್ಷೆ ಸೇರಿದ್ದು ೨೪.೧೧.೨೦೧೪ರಂದು ; ಆಗಲೂ ಡಾ॥ ರಾಧಾಕೃಷ್ಣನ್ ಅವರು ತಿರುಪತಿಯಲ್ಲಿ ಪ್ರತಿಮೆ ಪೂಜೆ ಮಾಡಿಸಿಕೊಂಡಿದ್ದರೆಂದು ಪತ್ರಿಕೆಗಳಲ್ಲಿ ಓದಿದ ನೆನಪು. ಆದರೆ ಆಗ ಇದ್ದುದು ಎನ್.ಡಿ.ಎ. ಸರ್ಕಾರ. ಆದ್ದರಿಂದ ನಿರ್ದೇಶಕರಿಂದ ಖರ್ಚನ್ನು ವಸೂಲಿ ಮಾಡುವ ಪ್ರಶ್ನೆಯೇ ಇಲ್ಲ.

ನಮಗೆ ತಿಳಿದಂತೆ ಈವರೆಗಿನ ಯಾವುದೇ ಸರ್ಕಾರ ಇಸ್ರೋ ನಿರ್ದೇಶಕರಿಗೆ ಇಂತಹ 'ಹುಕುಂ' ಜಾರಿಮಾಡಿದುದಾಗಲಿ, ದಂಡ ವಸೂಲಿ ಮಾಡಿದುದಾಗಲಿ ನೆನಪಿಲ್ಲ. ಇದೆಲ್ಲ, ತಮ್ಮ ಕಲ್ಪನೆಗಳೇ ನಿಜವೆನ್ನುವಂತೆ ಖಚಿತವಾಗಿ ಹೇಳಿ, ಒಂದು ಸರ್ಕಾರದ (ಯು.ಪಿ.ಎ.) ವಿರುದ್ಧ ಜನರನ್ನು ಕೆರಳಿಸುವ ಕಾದಂಬರಿಕಾರರ ಹುನ್ನಾರವಲ್ಲವೆ ? ಡಾ॥ ಭೈರಪ್ಪನವರ ರಾಜಕೀಯ, ಸಾಂಸ್ಕೃತಿಕ ಸೈದ್ಧಾಂತಿಕ ನಿಲುವು – ಎಂಬುದನ್ನು ಕುರಿತು ಪ್ರಜ್ಞಾವಂತರಾದ ಓದುಗರು ಪರ್ಯಾಲೋಚಿಸಬೇಕಷ್ಟೆ.

ಚಿಕ್ಕಮಗಳೂರು **ದೇವಕೀತನಯ**

# ವೃದ್ಧ ಕಡಲು

ಹುಚ್ಚು ಹರಯದ ನದಿಗಳೆಲ್ಲ
ಒಳಗೆ ಕರಗಿ
ಬರಸೆಳೆದು ಭಾವಗಳ
ಮೈಚಾಚಿಕೊಂಡು ಮಲಗಿಬಿಟ್ಟ ಮೌನ
ದಣಿದ ಕನಸುಗಳೆಲ್ಲವೂ
ದಡದಂಗಳದಲಿ ಬೀಡುಬಿಟ್ಟು ನಿಟ್ಟುಸಿರು
ಅರೆಬರೆ ಅರಳಿ ಮಾಗಿ
ಕೈಬೀಸಿ ಕರೆದ ಕರೆಗಳಿಗೆಲ್ಲ ಕೈ ಅಲ್ಲಾಡಿಸಿ
ಮುನಿದು ಮಾತುಬಿಟ್ಟ ಘಳಿಗೆಗಳ ನೆನಪು
ಹೆಣೆದಿಟ್ಟಿದ್ದ ಹೂ ಇರುಳುಗಳೆಲ್ಲ
ಹಗಲಿನಲ್ಲಿ ಬಾಡಿದ ಕಮಟು

ಎಂತೆಂಥ ಅಲೆಗಳನ್ನು ತಲೆಗೆ ಸುತ್ತಿಕೊಂಡ
ಕಡುಸಾಹಸ
ಉತ್ಸಾಹದ ಗಾಳಿ ಬಳುಕಿಗೆ ಬಾಗಿ
ದಡಕಪ್ಪಳಿಸುವಾಗೆಲ್ಲ
ಎಡವಿ ಮತ್ತೆ ಕನಸ ಮೆತ್ತಿಕೊಂಡೇ
ತೀರದ ಈಚೆ ಯಾನ
ಮೌನಿ ಮಾಗಿದ ದೇಹ
ಕಂಬಕ್ಕೊರಗಿಕೊಂಡ ಭಂಗಿ
ವೃದ್ಧ ಮನಸುಗಳಲಿ ಧಾಂಗುಡಿಯಿಡುವ
ಕಟುಕ ಒರಟು ಒಂಟಿತನದ ಒಂಟಿ ಹೆಜ್ಜೆಗಳು
ನದಿಗಳನ್ನು ಬರಸೆಳೆದುಕೊಂಡು
ಮರಳಿನಲಿ ಗೂಡುಗಟ್ಟುವ
ಮರುಳಗಿರಿ

ಮುಳುಗಿಸಿಕೊಂಡದ್ದು ತಳದಲಿ ಉಳಿದು
ತೇಲಿಸಿಕೊಂಡದ್ದು ಬರೀ ನೆನಪಾಗಿ
ನಡುನಡುವೆ ನಡೆದ ನಡೆಗಳೆಲ್ಲಾ
ಲೆಕ್ಕಕ್ಕೆ ಸಿಕ್ಕದೇ
ಆಕಾಶಕೆ ಮುಖ ಮಾಡಿದ್ದು
ಅದೇ ಕಕ್ಕಾಬಿಕ್ಕಿ ನಗು
ವೃದ್ಧ ಕಡಲಿನ ತುಂಬ
ಹರಿದುಹೋದವು ಹಡಗು
ಅದಾವುದೋ ಬಂದರ ಹುಡುಕಿ
ಬಳಿಗೆ ಬಂದವರನು ಹಿಂದಿಕ್ಕಿ
ಸಣ್ಣಪುಟ್ಟ ತೆಪ್ಪಗಳೂ ಏರಿಳಿತಕೆ
ಹೆದರಿ
ಕಾಲ ಪಾತ್ರದ ತುಂಬ ಬರೀ ನೆನಪುಗಳ ನಿಲಿಸಿ !

**ವಾಸುದೇವ ನಾಡಿಗ್**

ಕೇರಾಫ್ : ಶುಭಾ ಎ. ಆರ್. ಶಿಕ್ಷಕಿ
ಬಾಲಕರ ಸರಕಾರಿ ಪ್ರೌಢಶಾಲೆ
ಚಿಂತಾಮಣಿ – ೫೬೩ ೧೨೫, ಕೋಲಾರ ಜಿಲ್ಲೆ






# ಕ್ಷ - ಕಿರಣ

- ಸಾನ್ವಿ ಪಿ.

**ಕರುಣಾನಿಧಿ**
**ಕಲಾನಿಧಿ**
**ದಯಾನಿಧಿ**
**ದೇಶ ಮಾರನ್**




## ಬಿಹಾರ್ ಹರಾಜ್

**50,000 ಕೋಟಿ**
**60,000 ಕೋಟಿ**
**1,25,000 ಕೋಟಿ**






## ‘ಧರ್ಮಾಂತರಂಗ’ ಸುಂದರ ಸಾಮಾಜಿಕ ನಾಟಕ



ನಿತ್ಯ ರಾಘವ ರಾಜಾರಾಮ್
ಪತೀತೆ ಪಾವನೆ ರಾಧೆ ಮಾಮ್



# ಆದರ್ಶ ಶಿಕ್ಷಕ ರಾಷ್ಟ್ರಪತಿ

# ಎ.ಪಿ.ಜೆ. ಅಬ್ದುಲ್ ಕಲಾಂ

ರಾಷ್ಟ್ರಪತಿ ಎ. ಪಿ. ಜೆ. ಅಬ್ದುಲ್ ಕಲಾಂ ನಿಧನರಾದ ಸುದ್ದಿಯನ್ನು ಕೇಳಿದ ಭಾರತೀಯರು ದುಃಖತಪ್ತರಾದರು. ಅವರಿಗೆ ೮೩ ವರ್ಷ ವಯಸ್ಸಾಗಿತ್ತು. ಕೊನೆಯ ಉಸಿರೆಳೆಯುವತನಕ ಅದಕ್ಕಿಂತ ಹಿಂದೆ ಒಂದು ದಿನವಾದರೂ, ಒಂದು ಘಳಿಗೆಯಾದರೂ ಅನಾರೋಗ್ಯದಿಂದ ನರಳಿಲ್ಲ. ಭಾರತೀಯರು ಅಪೇಕ್ಷಿಸುವ ಅನಾಯಾಸ ಮರಣದಿಂದ ಕೊನೆಯುಸಿರೆಳೆದರು.

ಅವರ ಈ ಅನಿರೀಕ್ಷಿತ ನಿಧನದಿಂದ ನಮ್ಮ ದೇಶ, ನಮ್ಮ ಸರ್ವಸಾಧಾರಣ ಜನ ಅಪಾರ ನಷ್ಟಕ್ಕೀಡಾಗಿದ್ದಾರೆ. ಅವರ ನಿಧನವಾರ್ತೆಯನ್ನು ಮೂರು ದಿನಗಳವರೆಗೆ ಸುದ್ದಿ ಮಾಧ್ಯಮಗಳೆಲ್ಲ ಬಿತ್ತರಿಸುವಾಗ ಅವರು ಮಿಸ್ಸೈಲ್ ಮ್ಯಾನ್, ಕ್ಷಿಪಣಿ ವಿಜ್ಞಾನಿ, ಪೊಕ್ರಾನ್ ಅಣುಬಾಂಬ್ ಸ್ಫೋಟಿಸಿದ ಮಹಾವಿಜ್ಞಾನಿ ಎಂಬುದಾಗಿ ಮತ್ತೆ ಮತ್ತೆ ಮೂರೂ ದಿನಗಳು ಸುದ್ದಿ ಬಿತ್ತರಿಸಿದವು. ಆದರೆ ರಾಷ್ಟ್ರದ ಪ್ರಥಮ ಪ್ರಜೆಗೆ ನಮ್ಮ ದೇಶದ ಮಕ್ಕಳ ಬಗ್ಗೆ ಇದ್ದ ಅಗಾಧವಾದ ಪ್ರೇಮ ಹಾಗೂ ನಮ್ಮ ದೇಶ ತಂತ್ರಜ್ಞಾನ ಮತ್ತು ದೇಶರಕ್ಷಣೆಯ ಶಸ್ತ್ರಸಾಮಗ್ರಿಗಳ ಸ್ವಾವಲಂಬನೆ ಮುಂತಾದವುಗಳನ್ನು ಹೆಚ್ಚಾಗಿ ಸುದ್ದಿ ಮಾಧ್ಯಮಗಳು ಪ್ರಕಟಿಸಲಿಲ್ಲ. ಆದರೆ ಪೊಕ್ರಾನ್ ಅಣುಬಾಂಬ್ ಸ್ಫೋಟದ ಬಗ್ಗೆ ಅಬ್ಬರವಾಗಿ ಬಿತ್ತರಿಸಲಾಯಿತು. ಅಗಲಿದ ರಾಷ್ಟ್ರಪತಿಯವರ ಬಗ್ಗೆ ನಮ್ಮ ದೇಶದ ಪ್ರಜೆಗಳು ಅದರಲ್ಲೂ ಯುವಕರು, ವಿದ್ಯಾರ್ಥಿಗಳು ಏನನ್ನು ತಿಳಿಯಬೇಕು, ಅವರ ಜೀವನದಿಂದ ಏನನ್ನು ಕಲಿಯಬೇಕು ಎಂಬ ವಿಚಾರದಲ್ಲಿ ಅಷ್ಟೊಂದು ಗಮನಕೊಡಲಿಲ್ಲ. ಆ ವಿಚಾರವಾಗಿ ನಾಲ್ಕು ಮಾತು ಜನಗಳಿಗೆ ತಿಳಿಸಬೇಕಾದುದು ಅತ್ಯಗತ್ಯ.

ರಾಷ್ಟ್ರಪತಿ ಅಬ್ದುಲ್ ಕಲಾಂ ಅವರ ಹೆಸರು ನಮ್ಮ ದೇಶದಲ್ಲಿ ಶಾಶ್ವತವಾಗಿ ಉಳಿಯುವುದಾದರೆ, ಅದು ಅವರಿಗೆ ಮಕ್ಕಳ ಮೇಲಿದ್ದ ಅಪಾರವಾದ ಪ್ರೀತಿಯಿಂದಾಗಿ. ಯಾವ ವಿದ್ಯಾರ್ಥಿಯೇ ಪತ್ರ ಬರೆದರೂ ಅವರು ತಪ್ಪದೇ ಉತ್ತರ ಬರೆಯುತ್ತಿದ್ದರು. ಅವರು ಬರೆದ ಪತ್ರಗಳನ್ನು ಪಡೆದ ವಿದ್ಯಾರ್ಥಿಗಳು ಆ ಪತ್ರಗಳನ್ನು ಅಮೂಲ್ಯ ನಿಧಿಯಂತೆ ಇಟ್ಟುಕೊಂಡಿದ್ದಾರೆ. ಇಷ್ಟೇ ಅಲ್ಲದೆ, ರಾಷ್ಟ್ರಪತಿ ಭವನದ ಇತಿಹಾಸದಲ್ಲಿಯೇ ಮೊಟ್ಟ ಮೊದಲನೆಯ ಬಾರಿ ವಿದ್ಯಾರ್ಥಿಗಳಿಗೆ ರಾಷ್ಟ್ರಪತಿ ಭವನದ ಹೆಬ್ಬಾಗಿಲು ತೆರೆದು ಮಕ್ಕಳಿಗೆ ಪ್ರೀತಿ ತೋರಿಸಿದ ಹಿರಿಮೆ ಕಲಾಂ ಅವರಿಗೆ ಸಲ್ಲುತ್ತದೆ. ಮೈಸೂರಿನಿಂದ ಪ್ರವಾಸ ಹೋಗಿದ್ದ ನಲವತ್ತು ವಿದ್ಯಾರ್ಥಿ/ವಿದ್ಯಾರ್ಥಿನಿಯರೊಡನೆ ರಾಷ್ಟ್ರಪತಿ ಭವನದಲ್ಲಿ ಕುಳಿತು ಭಾವಚಿತ್ರ ತೆಗೆಸಿಕೊಂಡರು.

ರಾಷ್ಟ್ರಪತಿ ಅಬ್ದುಲ್ ಕಲಾಂ ಅವರು ತಮ್ಮ ತಂದೆ–ತಾಯಿಗಳ ವಿಚಾರದಲ್ಲಿ ಬರೆಯುತ್ತಾ, ತಮ್ಮ ತಾಯಿ ಹೆಚ್ಚು ಓದು ಕಲಿಯದಿದ್ದ ಸಾಧಾರಣ ಹೆಣ್ಣುಮಗಳು, ಆ ತಾಯಿ ತಮ್ಮ ಮನೆಯಲ್ಲಿ ಉಣಬಡಿಸಿದ ಜನರು ತಮ್ಮ ಕುಟುಂಬದಲ್ಲಿದ್ದ ಜನರಿಗಿಂತ ಹೆಚ್ಚಾಗಿರುತ್ತಿದ್ದರು ಎಂಬುದನ್ನು ಸ್ಮರಿಸಿ ತಮ್ಮ ತಾಯಿಯ ಬಗ್ಗೆ ಇದ್ದ ಅಪಾರ ಭಕ್ತಿಯನ್ನು ವ್ಯಕ್ತಪಡಿಸುತ್ತಾರೆ. ಅವರ ತಂದೆ ನಿಷ್ಠಾವಂತ ಮುಸ್ಲಿಮರು. ಅವರು ಪ್ರತಿದಿನ ಸೂರ್ಯೋದಯಕ್ಕಿಂತ ಮುಂಚೆ, ತಮ್ಮ ಊರಿನಲ್ಲಿದ್ದ ಮಸೀದಿಗೆ ಹೋಗಿ ತಪ್ಪದೆ ಪ್ರಾರ್ಥನೆ ಸಲ್ಲಿಸುತ್ತಿದ್ದರು. ಅವರ ಈ ನಿತ್ಯ ಪ್ರಾರ್ಥನೆ ಕಲಾಂ ಅವರ ಜೀವನದ ಮೇಲೆ ದೊಡ್ಡ ಪರಿಣಾಮವನ್ನುಂಟುಮಾಡಿತ್ತು. ಅವರ ಹುಟ್ಟೂರಿನಲ್ಲಿ ಕಡುಮಡಿಯ ಬ್ರಾಹ್ಮಣರೇ ಹೆಚ್ಚಾಗಿದ್ದರೂ, ಆ ಗ್ರಾಮದಲ್ಲಿ ಎಂದೆಂದೂ ಈ ಭಿನ್ನ–ಭೇದವೆಂಬುದು ಇರಲಿಲ್ಲ. ಕಲಾಂ ಅವರು ಅದಕ್ಕೊಂದು ನಿದರ್ಶನವನ್ನು ಕೊಡುತ್ತಾರೆ. ಆ ಊರಿನಲ್ಲಿ ಶಿವಸುಬ್ರಹ್ಮಣ್ಯ ಶಾಸ್ತ್ರಿ ಎಂಬ ಕಡುಮಡಿಯ ಬ್ರಾಹ್ಮಣರಿದ್ದರು. ಒಮ್ಮೆ ಶಾಸ್ತ್ರಿ ಅವರು ಇನ್ನೂ ಬಾಲಕನಾಗಿದ್ದ ಕಲಾಂ ಅವರನ್ನು ಊಟಕ್ಕೆ ಕರೆದುಕೊಂಡುಹೋದರು. ಶಾಸ್ತ್ರಿಗಳ ಮಡದಿ

ರಾಷ್ಟ್ರಪತಿ ಅಬ್ದುಲ್ ಕಲಾಂ ಅವರ ಹೆಸರು ನಮ್ಮ ದೇಶದಲ್ಲಿ ಶಾಶ್ವತವಾಗಿ ಉಳಿಯುವುದಾದರೆ, ಅದು ಅವರಿಗೆ ಮಕ್ಕಳ ಮೇಲಿದ್ದ ಅಪಾರವಾದ ಪ್ರೀತಿಯಿಂದಾಗಿ. ಯಾವ ವಿದ್ಯಾರ್ಥಿಯೇ ಪತ್ರ ಬರೆದರೂ ಅವರು ತಪ್ಪದೇ ಉತ್ತರ ಬರೆಯುತ್ತಿದ್ದರು. ಅವರು ಬರೆದ ಪತ್ರಗಳನ್ನು ಪಡೆದ ವಿದ್ಯಾರ್ಥಿಗಳು ಆ ಪತ್ರಗಳನ್ನು ಅಮೂಲ್ಯ ನಿಧಿಯಂತೆ ಇಟ್ಟುಕೊಂಡಿದ್ದಾರೆ. ಇಷ್ಟೇ ಅಲ್ಲದೆ, ರಾಷ್ಟ್ರಪತಿ ಭವನದ ಇತಿಹಾಸದಲ್ಲಿಯೇ ಮೊಟ್ಟಮೊದಲನೆಯ ಬಾರಿ ವಿದ್ಯಾರ್ಥಿಗಳಿಗೆ ರಾಷ್ಟ್ರಪತಿ ಭವನದ ಹೆಬ್ಬಾಗಿಲು ತೆರೆದು ಮಕ್ಕಳಿಗೆ ಪ್ರೀತಿ ತೋರಿಸಿದ ಹಿರಿಮೆ ಕಲಾಂ ಅವರಿಗೆ ಸಲ್ಲುತ್ತದೆ. ಮೈಸೂರಿನಿಂದ ಪ್ರವಾಸ ಹೋಗಿದ್ದ ನಲವತ್ತು ವಿದ್ಯಾರ್ಥಿ/ವಿದ್ಯಾರ್ಥಿನಿಯರೊಡನೆ ರಾಷ್ಟ್ರಪತಿ ಭವನದಲ್ಲಿ ಕುಳಿತು ಭಾವಚಿತ್ರ ತೆಗೆಸಿಕೊಂಡರು.

ಕೋ. ಚೆನ್ನಬಸಪ್ಪ





ಕಡುಮಡಿಯ ಮಹಿಳೆ. ಶಾಸ್ತ್ರಿಗಳು ಕಲಾಂರೊಂದಿಗೆ ಒಟ್ಟಿಗೆ ಊಟಕ್ಕೆ ಕುಳಿತಾಗ ಒಳಮನೆಗೆ ಕರೆದರು. ಆಗ ಅವರ ಮಡದಿ ತಾವು ಬಡಿಸುವುದಿಲ್ಲವೆಂದು ಹೇಳಿ ಒಳಗೆ ಹೋದರು. ಆಗ ಶಾಸ್ತ್ರಿಗಳೇ ಕಲಾಂ ಅವರನ್ನು ಪಕ್ಕದಲ್ಲಿ ಕೂರಿಸಿಕೊಂಡು ಕಲಾಂ ಅವರಿಗೆ ತಾವೇ ಕೈಯ್ಯಾರೆ ಊಣಬಡಿಸಿ, ಪಕ್ಕದಲ್ಲಿ ಕುಳಿತು ತಾವೂ ಊಟ ಮಾಡಿದರು. ಇಂಥ ಎಷ್ಟೋ ನಿದರ್ಶನಗಳನ್ನು ಸ್ಮರಿಸುತ್ತಾ ನಮ್ಮ ದೇಶದಲ್ಲಿ ಹಿಂದು–ಮುಸ್ಲಿಂ ಶತಶತಮಾನಗಳಿಂದ ಐಕ್ಯಮತದಿಂದ ಬಾಳುವ ಆದರ್ಶ ಜೀವನವನ್ನು ಕಲಾಂ ಸ್ಮರಿಸುತ್ತಾರೆ. ನೂರು ವರ್ಷಗಳ ಹಿಂದೆ ಇದ್ದ ಇಂಥ ಪರಿಸ್ಥಿತಿ ಈಗ ಮಾಯವಾಗುತ್ತಿರುವುದು ವಿಷಾದದ ಸಂಗತಿ.

ಡಾ॥ ಕಲಾಂ ಅವರು ತಮ್ಮೂರಿನ ಪ್ರಾಥಮಿಕ ಶಾಲೆಯಲ್ಲಿ ಓದುತ್ತಿದ್ದಾಗ ಅವರು ತಮ್ಮ ವಿದ್ಯಾಗುರುಗಳಾಗಿದ್ದ ಶ್ರೀ ಪಕ್ಷಿ ಲಕ್ಷ್ಮಣಶಾಸ್ತ್ರಿಯವರ ಮಗನೊಡನೆ ತರಗತಿಯ ಮುಂದಿನ ಬೆಂಚಿನ ಮೇಲೆ ಒಬ್ಬರ ಪಕ್ಕದಲ್ಲೊಬ್ಬರು ಕುಳಿತುಕೊಳ್ಳುತ್ತಿದ್ದರು. ಆದರೆ ಆ ಶಾಲೆಗೆ ಹೊಸದಾಗಿ ವರ್ಗವಾಗಿ ಬಂದಿದ್ದ ಒಬ್ಬ ಬ್ರಾಹ್ಮಣ ಅಧ್ಯಾಪಕರು ಕಲಾಂ ಧರಿಸಿದ್ದ ಟೋಪಿಯನ್ನು ನೋಡಿ ಹುಡುಗ ಮುಸ್ಲಿಂ ಜಾತಿಯವನೆಂಬುದನ್ನು ಗುರುತಿಸಿ ಅವರನ್ನು ಬ್ರಾಹ್ಮಣ ವಿದ್ಯಾರ್ಥಿಯೊಡನೆ ಕೂರಬಾರದೆಂದು ತರಗತಿಯ ಕೊನೆಯಲ್ಲಿದ್ದ ಹಿಂದಿನ ಬೆಂಚಿಗೆ ಕಳಿಸಿದರು. ಬಾಲಕ ಕಲಾಂ ಕಣ್ಣಲ್ಲಿ ನೀರು ತಂದು ಹಿಂದಕ್ಕೆ ಹೋಗಿ ಕುಳಿತರು. ಗೆಳೆಯ ಎದ್ದು ಹಿಂದಕ್ಕೆ ಹೋದದ್ದನ್ನು ಕಂಡ ಪಕ್ಕದಲ್ಲಿ ಕುಳಿತಿದ್ದ ಬ್ರಾಹ್ಮಣ ವಿದ್ಯಾರ್ಥಿ ಕಣ್ತುಂಬ ನೀರು ತಂದ. ಮನೆಗೆ ಹೋಗಿ ತನ್ನ ತಂದೆ ಲಕ್ಷ್ಮಣಶಾಸ್ತ್ರಿಗಳಿಗೆ ನಡೆದ ಸಂಗತಿಯನ್ನು ತಿಳಿಸಿದ. ಮರುದಿನ ರಾಮೇಶ್ವರದ ಪ್ರತಿಷ್ಠಿತ ಶ್ರೀ ಶಿವಸುಬ್ರಹ್ಮಣ್ಯಶಾಸ್ತ್ರಿ ಎನ್ನುವವರು ಮತ್ತು ಲಕ್ಷ್ಮಣಶಾಸ್ತ್ರಿಯವರು ಆ ಅಧ್ಯಾಪಕರನ್ನು ಕರೆಸಿ ಚೆನ್ನಾಗಿ ಛೀಮಾರಿ ಹಾಕಿ, ವಿದ್ಯಾರ್ಥಿ ಕಲಾಂ ಅವರ ಕ್ಷಮಾಪಣೆ ಕೇಳಬೇಕೆಂದು ತಾಕೀತು ಮಾಡಿದಾಗ, ಆ ಅಧ್ಯಾಪಕರು ಬಾಲಕ ಕಲಾಂ ಅವರಿಗೆ ಕ್ಷಮಾಪಣೆಯನ್ನು ಕೋರಿದರು ಹಾಗೂ ಮೊದಲಿನಂತೆ ಆ ಬ್ರಾಹ್ಮಣ ವಿದ್ಯಾರ್ಥಿ, ಈ ಮುಸ್ಲಿಂ ಗೆಳೆಯರಿಬ್ಬರೂ ಒಂದೆಡೆ ಕೂತರು. ಆಗಿನ ಕಾಲದಲ್ಲಿ ಈ ದೇಶದ ಜನ ಜಾತೀಯತೆಯ ವಿಚಾರದಲ್ಲಿ ಇಂತಹ ಉದಾರಿಗಳಾಗಿದ್ದರು.

ಡಾ॥ ಕಲಾಂ ಅವರು ಕ್ಷಿಪಣಿ ತಂತ್ರಜ್ಞಾನದ ಜನಕ ಎಂಬುದಾಗಿ ಪ್ರಚಾರದಲ್ಲಿದೆ. ಈ ವಿಚಾರವಾಗಿ ಕಲಾಂ ಅವರೆ ತಮ್ಮ ಆತ್ಮಕಥೆಯಲ್ಲಿ ಕ್ಷಿಪಣಿಯ ತಂತ್ರಜ್ಞಾನವನ್ನು ಟೀಪೂ ಸುಲ್ತಾನರೇ ಯಶಸ್ವಿಯಾಗಿ ಪ್ರಯೋಗಿಸಿದ್ದರು ಎಂದು ಪ್ರಸ್ತಾಪಿಸುತ್ತಾರೆ. ಅವರು ಅಮೇರಿಕಾಗೆ ಹೋಗಿದ್ದಾಗ ವ್ಯಾಲಪ್ಸ್ ದ್ವೀಪದಲ್ಲಿ ಈಸ್ಟ್ ಕೋಸ್ಟ್‌ಗೆ ಹೋಗುತ್ತಾರೆ. ಆ ಸ್ಥಳದಲ್ಲಿ ನ್ಯಾಸಾ ರಾಕೆಟ್ ತಯಾರಿಕೆಯ ಕೇಂದ್ರಕ್ಕೆ ಭೇಟಿ ಕೊಟ್ಟಾಗ ಆ ಕಟ್ಟಡದ ಗೋಡೆಯ ಮೇಲೊಂದು ಚಿತ್ರವಿತ್ತು. ಆ ಚಿತ್ರದಲ್ಲಿ ರಾಕೆಟ್‌ನ ಪ್ರತಿಕೃತಿ ಕಂಡಿತು. ಆ ರಾಕೆಟ್ ಸುತ್ತಮುತ್ತ ಪೌರಸ್ತ್ಯರೆಂಬಂತೆ ಕಪ್ಪುವರ್ಣದ ಯೋಧರು ಇದ್ದರು. ಡಾ॥ ಕಲಾಂ ಆ ಯೋಧರು ಯಾರಿರಬಹುದು ? ಎಂದು ನೋಡಿದಾಗ, ಅವರು ಟೀಪೂ ಸುಲ್ತಾನರ ಸೈನಿಕರೆಂಬುದಾಗಿ ಗುರುತಿಸುತ್ತಾರೆ. ಈ ಮಾಹಿತಿಯು ಅಮೇರಿಕಾದ ನ್ಯಾಸಾ ಉತ್ಪಾದನಾ ಕೇಂದ್ರದಲ್ಲಿದೆ. ಆಗ ಡಾ॥ ಕಲಾಂ, 'ವಿದೇಶದಲ್ಲಿ ಮನ್ನಣೆ ಪಡೆದ ಟೀಪೂ ನೈಪುಣ್ಯತೆಯನ್ನು ನಮ್ಮ ದೇಶದ ಜನ ಗಮನಿಸದಿರುವುದು ವಿಷಾದನೀಯ' ಎನ್ನುತ್ತಾರೆ.

ಕಲಾಂ ಅವರಿಗೆ ನಮ್ಮ ದೇಶದ ರಕ್ಷಣೆಗೆ ಬೇಕಾದ ಶಸ್ತ್ರಾಸ್ತ್ರಗಳನ್ನು ಸ್ವದೇಶದಲ್ಲಿಯೇ ನಿರ್ಮಾಣಮಾಡಬೇಕೆಂಬ ಮಹತ್ವಾಕಾಂಕ್ಷೆ ಇದ್ದಿತು. ಆ ಆಕಾಂಕ್ಷೆಯನ್ನು ಅವರು ಈಡೇರಿಸಿದರು. ಯುದ್ಧ ಶಸ್ತ್ರಾಸ್ತ್ರಗಳನ್ನು ವಿದೇಶದಿಂದ ತರಿಸಿಕೊಳ್ಳುವುದರಿಂದ ಆಗುವ ವೆಚ್ಚ, ವಿಳಂಬ ಮತ್ತು ಅಪಾಯವನ್ನು ಮನಗಂಡು ಹಗಲಿರುಳು ಶ್ರಮಿಸಿದರು. ಆಗ ಅವರಿಗಿದ್ದ ಆಕಾಂಕ್ಷೆ ಭಾರತದ ಭದ್ರತೆ ಮತ್ತು ಪರದೇಶಗಳ ಹಂಗು–ಅಂಜಿಕೆ ಇಲ್ಲದೆ ತನ್ನ ರಕ್ಷಣೆ ಮಾಡಿಕೊಳ್ಳಬೇಕಾದ ಅವಶ್ಯಕತೆ. ಆದ್ದರಿಂದಲೇ ಅವರು ಅಂದಿನ ಪ್ರಧಾನಿಯಾಗಿದ್ದ ಅಟಲ್ ಬಿಹಾರಿ ವಾಜಪೇಯಿ ಅವರಿಗೆ ಧೈರ್ಯ ತುಂಬಿ ಪೋಕ್ರಾನ್‌ನಲ್ಲಿ ಅಣುಬಾಂಬ್ ಸ್ಫೋಟಿಸಲು, ಬಹುಶಃ ಅಣುಬಾಂಬ್‌ಅನ್ನು ನಾವು ತಯಾರಿಸಿ ನಮ್ಮ ಶಕ್ತಿಸಾಮರ್ಥ್ಯವನ್ನು ನಮ್ಮ ವೈರಿಗಳಿಗೂ ಮತ್ತು ಪರದೇಶಿಯರಿಗೂ ಎತ್ತಿ ತೋರಿಸಲು ಅಣುಬಾಂಬ್ ಸ್ಫೋಟಿಸಿರಬಹುದು. ಆದರೆ ಅಣುಬಾಂಬ್ ತಯಾರಿಸುವುದು ಮತ್ತು ಅದನ್ನು ಅವಶ್ಯಕವೆನಿಸಿದರೆ ಸ್ಫೋಟಿಸುವುದು ತುಂಬ ಅಪಾಯಕಾರಿ ಎಂಬುದು ಅವರಿಗೆ ಗೊತ್ತಿದ್ದಿರಬೇಕು. ಹಿಂದೆ ಅಣುವಿಜ್ಞಾನ ಜನಕ ಆಲ್ಬರ್ಟ್ ಐನ್‌ಸ್ಟೈನ್ ಅವರೆ ಅದನ್ನು ಪ್ರಯೋಗಿಸಿದ ವಿಚಾರವಾಗಿ ವಿಷಾದ ವ್ಯಕ್ತಪಡಿಸಿದ್ದರು. ಡಾ॥ ಕಲಾಂ ಅವರಿಗೆ ಇದು ಗೊತ್ತಿದ್ದಿರಬೇಕು. ಅವರ ಇಡೀ ಜೀವಮಾನವನ್ನು ಗಮನಿಸಿದರೆ, ಅವರು ದೈವಭಕ್ತರು, ಶಾಂತಿಪ್ರಿಯರು, ಲೋಕ ಕಲ್ಯಾಣದಲ್ಲಿ ಆಸಕ್ತಿಯುಳ್ಳವರು ಎಂದು ಕಂಡುಬರುತ್ತದೆ. ಈ ಗುಣಗಳು ನಮ್ಮ ದೇಶದ ಪ್ರಜೆಗಳಿಗೂ, ರಾಜಕಾರಣಿಗಳಿಗೂ ತಿಳಿಯಬೇಕು.

ಕಲಾಂ ಅವರದು ನಮ್ಮ ದೇಶದ ಮಕ್ಕಳ ಬುದ್ಧಿಯ ಬೆಳವಣಿಗೆಗೆ, ಆತ್ಮದ ಉದ್ಧಾರ, ಪ್ರೀತಿ, ವಿಶ್ವಾಸ, ನಮ್ಮ ದೇಶದ ಪ್ರಜೆಗಳೆಲ್ಲರೂ ಅನುಸರಿಸಬೇಕಾದ ಆದರ್ಶ ಜೀವನ. ಈ ನಿಟ್ಟಿನಲ್ಲಿ ನಮ್ಮ ರಾಜ್ಯದ ವಿಜಯಪುರ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಶ್ರೀಮತಿ ಹೆಪ್ಸಿಬಾ ರಾಣಿ ಕೊರಲಪಟ್ಟಿ ಅವರು ಪ್ರತಿ ಸರ್ಕಾರಿ ವಿದ್ಯಾರ್ಥಿನಿಲಯಗಳಲ್ಲಿ "ಕಲಾಂ ಕೊಠಡಿ"ಯೊಂದನ್ನು ಸ್ಥಾಪಿಸಬೇಕು ಎಂಬ ಸೂಚನೆಯನ್ನು ಕಾರ್ಯಗತಗೊಳಿಸಲು ಕಾರ್ಯತತ್ಪರರಾಗಿದ್ದಾರೆ. ಅವರ ಈ ಪ್ರಯತ್ನ ಯಶಸ್ವಿಯಾದರೆ ಕರ್ನಾಟಕವೇ ಮೊಟ್ಟ ಮೊದಲನೆಯದಾಗಿ ತೀರಿಹೋದ ನಮ್ಮ ರಾಷ್ಟ್ರಪತಿಗಳಿಗೆ ಉಚಿತ ಗೌರವವನ್ನು ಕೊಟ್ಟಂತಾಗುತ್ತದೆ. ಅವರ ಈ ಪ್ರಯತ್ನಕ್ಕೆ ನಮ್ಮ ಸರ್ಕಾರ, ಸಾರ್ವಜನಿಕ ಸಂಸ್ಥೆಗಳು, ಶಿಕ್ಷಣ ಕಾರ್ಯಕರ್ತರು, ಸಾಹಿತಿಗಳು, ಉದ್ಯಮಶೀಲರು ಉದಾರವಾಗಿ ಸಹಾಯ ಮಾಡುವುದು ಡಾ॥ ಕಲಾಂ ಅವರಿಗೆ ಸಲ್ಲಿಸುವ ಗೌರವ.

'ರಾಜ್ಯದೊಡೆಯ (ರಾಜ)ನು ಜಗದೊಡೆಯ (ಖುದಾ)ನ ಗುಲಾಮನಂತೆ ಇರಬೇಕು' ಎಂಬ ಪ್ರವಾದಿ ಮಹಮ್ಮದ್ ಪೈಗಂಬರರ ಕಟ್ಟಪ್ಪಣೆಯಂತೆ ರಾಷ್ಟ್ರಪತಿ ಅಬ್ದುಲ್ ಕಲಾಂ ಈ ರಾಷ್ಟ್ರದ ಪತಿಯಾಗಿ, ಪ್ರಜಾ ಸೇವಕರಾಗಿ, ಖುದಾನ ಸೇವೆ ಮಾಡಿದರು. ಅಂಥವರನ್ನೆ ಸಂತರು, ಶರಣರು ಎಂದು ಕರೆಯುತ್ತಾರೆ. 'ಶರಣರ ಮಹಿಮೆಯನ್ನು ಮರಣದಲ್ಲಿ ನೋಡು' ಎಂಬ ಶರಣವಾಕ್ಯಕ್ಕೆ ನಿದರ್ಶನವಾಗಿದ್ದಾರೆ ದಿವಂಗತ ಅಬ್ದುಲ್ ಕಲಾಂ.



**ಕೋ. ಚೆನ್ನಬಸಪ್ಪ**
ನಂ. ೧೨೭
ವೆಸ್ಟ್ ಆಫ್
ಕಾರ್ಡ್ ರೋಡ್
ರಾಜಾಜಿನಗರ
ಬೆಂಗಳೂರು –
೫೬೦ ೦೮೬

# ಅಥರ್ವವೇದದ ಒಂದು ಕಿರುನೋಟ

ಪ್ರಕೃತಿಯ ಸೌಮ್ಯತೆ ಮತ್ತು ವಿಸ್ಮಯಗಳಿಗಿಂತಲೂ ಅದರೊಳಗಿನ ಕೆಡುಕಿನ ಹಾಗೂ ಉಪದ್ರವಗಳ ಪ್ರಸ್ತಾಪವು ಅಥರ್ವವೇದದಲ್ಲಿ ಹೆಚ್ಚಾಗಿದೆ. ಋಗ್ವೇದದಿಂದ ಭಿನ್ನವಾಗಿ ನಿಲ್ಲಲು ಅದು ಪ್ರಮುಖ ಕಾರಣವಿದ್ದಿರಬೇಕು. ಮಾಂತ್ರಿಕತೆಯಿಂದ ಎಲ್ಲ ಉಪದ್ರವಗಳನ್ನೂ ನಿವಾರಿಸಿಕೊಳ್ಳಬಹುದೆಂಬ ಆದಿಮ ಪ್ರಜ್ಞೆ ಅದರಲ್ಲಿ ಗಾಢವಾಗಿದೆ. ಆದರೆ ಸಾಮಾಜಿಕ ಜೀವನದ ಪ್ರತಿಫಲನವು ಇಲ್ಲಿಯೂ ಸಾಂದ್ರವಾಗಿದೆ. ಅಂತೆಯೇ ಕೆಲವು ಕಾವ್ಯಮಯ ಭಾಗಗಳೂ ಇಲ್ಲಿವೆ. ವೈದಿಕ ಸಾಹಿತ್ಯದ ಪರಿಚಯಾತ್ಮಕ ಲೇಖನಮಾಲೆಯಲ್ಲಿ ಇದು ಇಪ್ಪತ್ತೇಳನೆಯ ಕಂತು.

**ಜಿ. ರಾಮಕೃಷ್ಣ**

ವೇದಗಳನ್ನು 'ತ್ರಯೀ' ಎಂದು ಕರೆದು ಅಥರ್ವವೇದವನ್ನು ಕೆಳದರ್ಜೆಗಿಳಿಸಿದ ಪ್ರಾಚೀನ ಭಾರತದ ಸಂಪ್ರದಾಯವನ್ನು ವ್ಯಾಖ್ಯಾನಿಸಿಕೊಳ್ಳುವುದು ಒಂದು ದ್ವಂದ್ವವನ್ನು ಪರಿಹರಿಸಿಕೊಳ್ಳುವ ವಿಧಾನಕ್ಕೆ ಉದಾಹರಣೆಯಾಗುತ್ತದೆ. ಯಜ್ಞದ ಸಂದರ್ಭದಲ್ಲಿ ಅಥರ್ವವೇದಕ್ಕೆ ನೀಡಲಾಗಿರುವ ಔಪಚಾರಿಕ ಸ್ಥಾನವನ್ನು ಗಮನಿಸಿದರೆ ಅದು ಸ್ಪಷ್ಟವಾಗುತ್ತದೆ. ಯಜ್ಞದ ನಿರ್ವಹಣೆಗೆ ಪುರೋಹಿತರನ್ನು ನೇಮಿಸಿಕೊಳ್ಳುವುದು ಯಜ್ಞವನ್ನು ಆಯೋಜಿಸುವ ಯಜಮಾನನಿಗೆ ಅನಿವಾರ್ಯ. ಆಚರಣೆಯ ಪ್ರಮಾಣಕ್ಕೆ ಅನುಗುಣವಾಗಿ ಅವನು (ಖಂಡಿತ ಅವಳಲ್ಲ!) ಪುರೋಹಿತರ ಸಂಖ್ಯೆಯನ್ನು ನಿಗದಿಗೊಳಿಸಿಕೊಳ್ಳಬಹುದು. ಆದರೆ ಅವರೆಲ್ಲಾ ಮೂರು ವಿಭಾಗಗಳಿಗೆ ಸೇರಿರುತ್ತಾರೆ. ಹೋತೃ, ಅಧ್ವರ್ಯು ಮತ್ತು ಉದ್ಗಾತೃ ಎಂಬುವು ಆ ವಿಭಾಗಗಳು. ಹೋತೃವು ಋಗ್ವೇದದ ಮಂತ್ರಗಳನ್ನು ಸ್ವರಯುಕ್ತವಾಗಿ ನಿರ್ದಿಷ್ಟ ಸಂದರ್ಭಗಳಲ್ಲಿ ಪಠಿಸುತ್ತಾನೆ. (ಅವನ್ನು ಹೇಗೆ ಪಠಿಸಬಾರದೆಂಬುದಕ್ಕೆ ಬೆಂಗಳೂರು ಆಕಾಶವಾಣಿಯ ಅಮೃತವರ್ಷಿಣಿ ವಾಹಿನಿಯು ಪ್ರತಿದಿನ ಬೆಳಿಗ್ಗೆ ನಿದರ್ಶನ ಒದಗಿಸುತ್ತದೆ). ಋಗ್ವೇದ ಸೂಕ್ತಗಳನ್ನು ಪರಿಚಯಿಸಿಕೊಳ್ಳುವಾಗ ಮಂತ್ರಗಳ 'ವಿನಿಯೋಗ'ದ ಪ್ರಸ್ತಾಪ ಆಗಾಗ್ಗೆ ಬಂದಿದೆ. ಅಂದರೆ, ಯಾವುದೋ ಕ್ರಿಯೆಯ ಸಂದರ್ಭದಲ್ಲಿ ಅವನ್ನು ಪಠಿಸಲಾಗುತ್ತದೆ. ಅಂತಹ ಕ್ರಿಯೆಗಳ ಕರ್ತೃವಿಗೆ ಅಧ್ವರ್ಯು ಎಂಬ ಹೆಸರಿದೆ. ಅಗ್ನಿಯನ್ನು ಎಲ್ಲಿ ಹೊತ್ತಿಸಬೇಕು, ಸಮಿತ್ತನ್ನು ಎಲ್ಲಿ ಮತ್ತು ಹೇಗೆ ಅರ್ಪಿಸಬೇಕು, ಮುಂತಾದ ಕ್ರಿಯೆಗಳನ್ನು ತಿಳಿದವನು ಮತ್ತು ಮಾಡುವವನು ಅವನು. ಉದ್ಗಾತೃವು ನಿರ್ದಿಷ್ಟ ಸಮಯದಲ್ಲಿ ಸಾಮಗಾನ ಮಾಡುತ್ತಾನೆ. ಪಠಿಸಬೇಕಾದ ಮಂತ್ರಗಳು ಋಗ್ವೇದದಲ್ಲಿವೆ, ಕ್ರಿಯೆಗಳ ನಿರ್ದೇಶನವು ಯಜುರ್ವೇದದಲ್ಲಿದೆ ಮತ್ತು ಗಾನಕ್ಕೆ ಅಗತ್ಯವಾದ ಋಕ್ಕುಗಳು ಸಾಮವೇದದಲ್ಲಿವೆ. ಹೀಗೆ ಬಳಸಲಾಗುವ ಮಂತ್ರಗಳ ಸಾಮಾಜಿಕ ಮತ್ತು ಚಾರಿತ್ರಿಕ ಅರ್ಥಗಳು ಯಜ್ಞಕ್ಕೆ ನಿರರ್ಥಕ, ಆದರೆ ಅವೇ ಅಧ್ಯಯನಕ್ಕೆ ಹೆಚ್ಚು ಯೋಗ್ಯವಾದವೆಂಬುದನ್ನು ಈಗಾಗಲೆ ನಾವು ಅರಿತಿದ್ದೇವೆ. ಅಥರ್ವವೇದ ಸಂಹಿತೆಯನ್ನು ಪ್ರತಿನಿಧಿಸುವವನಿಗೆ ಮನಸ್ಸಿಲ್ಲದ ಮನಸ್ಸಿನಿಂದ ಏನಾದರೊಂದು 'ಗೌರವ' ಸ್ಥಾನ ಕಲ್ಪಿಸಿಕೊಡುವ ದೃಷ್ಟಿಯಿಂದ ಯಜ್ಞದಲ್ಲಿ ಒಬ್ಬ ಬ್ರಹ್ಮನನ್ನು ನೇಮಿಸಿಕೊಳ್ಳುತ್ತಾರೆ. ಅವನು ಸರ್ವವೇದ ಪಾರಂಗತನೆಂಬ ಐತಿಹ್ಯವನ್ನು ಸ್ವಲ್ಪ ಮುಜುಗರದಿಂದಲೇ ಸೃಷ್ಟಿಸಲಾಗಿದೆಯೆಂದು ತೋರುತ್ತದೆ. ಅವನೊಬ್ಬ ಮೂಕಪ್ರೇಕ್ಷಕ, ಅವನಿಗೆ ಯಾವ ಕರ್ತವ್ಯವನ್ನೂ ವಿಧಿಸಲಾಗಿಲ್ಲ. ಎಲ್ಲವನ್ನೂ ವಿಚಕ್ಷಣೆಯಿಂದ ಗಮನಿಸುತ್ತಿದ್ದು ನಿಯಂತ್ರಕನಾಗಿರುತ್ತಾನೆಂದು ಹೇಳುವುದು ರೂಢಿ. (ಈಗಲೂ ಅನೇಕ ಆಚರಣೆಗಳಲ್ಲಿ ಒಬ್ಬನನ್ನು 'ಬ್ರಹ್ಮ' ಎಂದು ಕೂರಿಸಲಾಗುತ್ತದೆ; ಆಗಾಗ್ಗೆ ಅಷ್ಟೋ ಇಷ್ಟೋ ದಕ್ಷಿಣೆ ಪಡೆಯುತ್ತಿರುವುದೊಂದೇ ಅವನ ಕೆಲಸ). ಈ ಬ್ರಹ್ಮನಿಗೂ ನಂತರದ ತ್ರಿಮೂರ್ತಿಗಳಲ್ಲಿ ಒಬ್ಬನಾದ ಸರಸ್ವತೀಪ್ರಿಯ ಬ್ರಹ್ಮನಿಗೂ ಏನೂ ಸಂಬಂಧವಿಲ್ಲ. (ಉಪನಿಷತ್ತುಗಳ 'ಬ್ರಹ್ಮನ್' ನೊಡನಂತೂ ಸುತರಾಂ ಹೋಲಿಕೆಯಿಲ್ಲ). ಅಥರ್ವವೇದವನ್ನು ಸಂಪ್ರದಾಯವು ಒಂದಿಷ್ಟು ಸಹಿಸಿಕೊಂಡಿರುವುದು ಈ ಮಾರ್ಗದಲ್ಲಿ ಎಂಬುದಷ್ಟೇ ಮುಖ್ಯ. ನೈಷ್ಠಿಕ ವೈದಿಕ ಸಂಪ್ರದಾಯಕ್ಕೆ ಹೊರತಾಗಿರುವ ನುಂಗಲೂ ಆಗದ, ತಿರಸ್ಕರಿಸಲೂ ಆಗದ, ಬಿಸಿಯ ತುಪ್ಪ ಈ ಅಥರ್ವವೇದ. ಅಧ್ಯಯನದ ದೃಷ್ಟಿಯಿಂದ ಅಥರ್ವವೇದವು ಋಗ್ವೇದದಷ್ಟು ಅಲ್ಲದಿದ್ದರೂ ಖಂಡಿತ ಮೌಲಿಕವಾದದ್ದು ಮತ್ತು ಬೋಧಪ್ರದವಾದ್ದು. ಪ್ರಾಚೀನ ಭಾರತದ ಸಾಂಸ್ಕೃತಿಕ ಚಿಂತನೆ ಮತ್ತು ಜೀವನದಲ್ಲಿ ಅಥರ್ವವೇದಕ್ಕೆ ಗಣನೀಯ ಪ್ರಮಾಣದ ಮಹತ್ವವನ್ನು ಯಾರೂ ನಿರಾಕರಿಸಲಾಗುವುದಿಲ್ಲ.

ಬೇರೆ ಮೂರು ವೇದಗಳು ಯಾರೊಬ್ಬರ ಹೆಸರಿನಿಂದಲೂ ಪ್ರಸಿದ್ಧವಾಗಿಲ್ಲ, ಆದರೆ ಅಥರ್ವವೇದವು ಅಥರ್ವನ್ ಎಂಬ ವ್ಯಕ್ತಿ ಅಥವಾ ಬಣದೊಂದಿಗೆ ಗುರುತಿಸಲ್ಪಟ್ಟಿದೆ. (ಅದನ್ನು 'ಅಥರ್ವಣವೇದ'ವೆಂದು ತಪ್ಪಾಗಿ ಕರೆಯುವುದು ಈ ವ್ಯಕ್ತಿಯ ಹೆಸರಿನಿಂದಾಗಿಯೇ.) ಅಥರ್ವನ್ ಬಣವು ಮೂರು ಸಾಧನೆಗಳಿಂದಾಗಿ ಖ್ಯಾತಿ ಹೊಂದಿದೆ : (ಅ) ಅರಣಿಗಳನ್ನು ಉಜ್ಜಿ ಅಗ್ನಿಯನ್ನು ಪಡೆಯುವುದರಲ್ಲಿ ಮೊದಲಿಗನಾದ್ದು, (ಆ) ದೇವ–ಮಾನವರ ನಡುವೆ ಸಂಪರ್ಕ ಕಲ್ಪಿಸಿದ್ದು, ಮತ್ತು (ಇ) ಉಪಟಳ ಉಂಟುಮಾಡುವ ರಾಕ್ಷಸರನ್ನು ಪವಾಡದ ಶಕ್ತಿಯಿಂದ ಸೋಲಿಸಿದ್ದು. (ಅಗ್ನಿಯನ್ನು ಉತ್ಪತ್ತಿಮಾಡಲು ಉಪಯೋಗಿಸುವ ಮರದ ತುಂಡುಗಳಿಗೆ ಅರಣಿ ಎಂಬ ಹೆಸರಿದೆ. ಚಕಮಕಿ ಕಲ್ಲಿಗೂ ಅದೇ ಹೆಸರಿದೆ). ಗೋಪಥ ಬ್ರಾಹ್ಮಣವೆಂಬ ಗ್ರಂಥದಲ್ಲಿ ಅಥರ್ವವೇದವು ಅಂಗೀರಸರಿಗೆ, ಅಥರ್ವಣರಿಗೆ ಮತ್ತು ಭೃಗುಗಳಿಗೆ "ಗೋಚರಿಸಿತು" ಎಂದು ಹೇಳಲಾಗಿದೆ ಮತ್ತು ಭೃಗುಗಳು ಋಗ್ವೇದದಲ್ಲಿ ಪ್ರಸಿದ್ಧರಾಗಿದ್ದಾರೆ.

ಋಗ್ವೇದ ಮತ್ತು ಅಥರ್ವವೇದ ಹೆಚ್ಚುಕಡಿಮೆ ಒಂದೇ ಕಾಲಕ್ಕೆ ಸೇರಿವೆ ಎಂಬುದನ್ನು ಈಗಾಗಲೇ ತಿಳಿದಿದ್ದೇವೆ. ವಿಷಯಗಳ ಕಾರಣದಿಂದಾಗಿ ಎರಡನ್ನೂ ಬೇರೆ ಬೇರೆ ಇರಿಸಲಾಗಿದೆ. ಹಾಗೆ ನೋಡಿದರೆ ಅಥರ್ವವೇದವು ಹೆಚ್ಚು ಜಾನಪದೀಯ ಗ್ರಂಥ ಎನಿಸುತ್ತದೆ ಮತ್ತು ಅದರಲ್ಲಿ ದಾಖಲಾಗಿರುವ ಮಾಂತ್ರಿಕ ಆಚರಣೆಗಳು ಋಗ್ವೇದದಲ್ಲಿ ಉಲ್ಲೇಖಗೊಂಡ ಆಚರಣೆಗಳಿಗಿಂತಲೂ ಹೆಚ್ಚು ಆದಿಮವಾದವು. ಋಗ್ವೇದದ ಕೆಲವು ಸೂಕ್ತಗಳು ಅಲ್ಪಸ್ವಲ್ಪ ಬದಲಾವಣೆ ಹೊಂದಿ ಅಥರ್ವವೇದದಲ್ಲಿ ಸ್ಥಾನ ಪಡೆದಿರುವಂತೆ ಕೆಲವು ಅಥರ್ವವೇದದ ಸೂಕ್ತಗಳೂ ಋಗ್ವೇದದಲ್ಲಿ ಕಾಣಸಿಗುತ್ತವೆ. ಅಂದರೆ, ಅವೆರಡೂ ಸ್ಪರ್ಧಿಗಳಲ್ಲ, ವಿರೋಧಿಗಳಲ್ಲ ಮತ್ತು ಶ್ರೇಷ್ಠ–ಕನಿಷ್ಠ ಎಂಬ ನೆಲೆಯಲ್ಲಿ ಪ್ರತ್ಯೇಕಗೊಂಡಿಲ್ಲ. ಪ್ರಾಚೀನ ಮಾಂತ್ರಿಕತೆಯು ಒಂದು ನಿರ್ದಿಷ್ಟ ಚಾರಿತ್ರಿಕ ಹಂತದ ವಿಶಿಷ್ಟ ಆಚರಣೆಯೆಂಬುದನ್ನು ಅಥರ್ವವೇದದ ಸಂದರ್ಭದಲ್ಲಿ ನೆನಪಿನಲ್ಲಿಡಬೇಕು. ಅಂತಹ ಅರಿವಿಲ್ಲದಿದ್ದರೆ ಅಥರ್ವವೇದವನ್ನು ಮೂಢನಂಬಿಕೆಗಳ ಮೊಟ್ಟಮೊದಲ ಆಕರವೆಂಬ ತಪ್ಪು ನಿರ್ಧಾರಕ್ಕೆ ಬರುವ ಅಪಾಯವಿದೆ. ಈ ಕಾರಣದಿಂದಾಗಿ ಪ್ರಾಚೀನ ಮಾಂತ್ರಿಕತೆಯ ಮೂಲತತ್ವವನ್ನು ಈಗಾಗಲೇ ಒಮ್ಮೆ ಚರ್ಚಿಸಿದ್ದಾಗ್ಯೂ ಈಗ ಮತ್ತೊಮ್ಮೆ ಒತ್ತಿಹೇಳುವುದು ಅನುಚಿತವಾಗಲಾರದು.

ವ್ಯವಸ್ಥಿತವಾಗಿ ಚಲನೆಯಲ್ಲಿರುವ ಪ್ರಕೃತಿಯ ಯಾವುದೋ ಒಂದು ಭಾಗದಲ್ಲಿ ನಿಯಮಗಳ ಜ್ಞಾನ ಅಥವಾ ಪರಿಕಲ್ಪನೆ ಇನ್ನೂ ಗೋಚರವಾಗಿರದಾಗ ಮಾಂತ್ರಿಕತೆಗೆ ಕಟ್ಟುಬೀಳುವುದು ಸಾಮಾನ್ಯವಾಗಿ ಎಲ್ಲ ಆದಿಮ ಸಮಾಜಗಳಲ್ಲೂ ರೂಢಿಯಲ್ಲಿದೆ. ಋಗ್ವೇದ–ಅಥರ್ವವೇದ ನಿಜಕ್ಕೂ ಆದಿಮ ಸಮಾಜಗಳವಲ್ಲ; ಏಕೆಂದರೆ, ಒಂದರ್ಥದಲ್ಲಿ ಅವು ಸಾಕಷ್ಟು ಬೆಳವಣಿಗೆಯನ್ನು ಕಂಡಿವೆ. ಆದರೆ ಆದಿಮ ಸಮಾಜದ

ಲಕ್ಷಣಗಳನ್ನು ದೊಡ್ಡ ಪ್ರಮಾಣದಲ್ಲಿ ಉಳಿಸಿಕೊಂಡಿರುವ ಕಾಲಘಟ್ಟ ಅದು. ಆದ್ದರಿಂದ ಅಲ್ಲಿ, ವಿಶೇಷವಾಗಿ ಅಥರ್ವವೇದದಲ್ಲಿ, ಮಾಂತ್ರಿಕತೆಯ ಬಳಕೆ ಸಾಕಷ್ಟಿದೆ. ಮಾಂತ್ರಿಕತೆಯ ಪರಾಕಾಷ್ಠೆಯೆಂದರೆ ಮಾಂತ್ರಿಕತೆಯನ್ನು ಪ್ರಜ್ಞಾಪೂರ್ವಕವಾಗಿಯೇ ಎತ್ತಿಹಿಡಿದ ಯಜ್ಞದ ಪ್ರಕ್ರಿಯೆ. ಅದಕ್ಕೆ ಮುನ್ನ ಮಾಂತ್ರಿಕತೆಯು ಅಪ್ರಜ್ಞಾಪೂರ್ವಕ ಎನ್ನಬಹುದಾದ ಸ್ಥಿತಿಯಲ್ಲಿರುತ್ತದೆ. ಈ ಸಂಬಂಧದಲ್ಲಿ ನಾವು ಋಗ್ವೇದದ ಹತ್ತನೆಯ ಮಂಡಲದ ೧೬೧ನೆಯ ಸೂಕ್ತವನ್ನು ವಿಶದವಾಗಿ ಪರಿಚಯಿಸಿಕೊಂಡಿದ್ದೆವು. ಕೃಷಿಸಂಬಂಧಿ ಚಟುವಟಿಕೆಗಳಲ್ಲಿ ಮಾಂತ್ರಿಕತೆಯು ಹೆಚ್ಚಾಗಿ ಬಳಕೆಗೆ ಬಂದಿದ್ದಿತು ಮತ್ತು ಈಗಲೂ ಅದು ಚಾಲನೆಯಲ್ಲಿದೆ. ಅತಿಸರಳ ಉದಾಹರಣೆಯೆಂದರೆ ಮಳೆ ಸುರಿಯ ಬೇಕಾದ ತಿಂಗಳುಗಳಲ್ಲಿ ಮಳೆ ಬೀಳದಿದ್ದರೆ "ಹುಯ್ಯೋ ಹುಯ್ಯೋ ಮಳೆರಾಯ" ಎಂಬ ಆಚರಣೆಯಲ್ಲಿ ತೊಡಗುವುದು. ಅದರಿಂದಾಗಿ ಮಳೆ ಸುರಿಯಲಾರದು, ಆದರೆ ಮಳೆಯ ಅನುಕರಣೆಯು ಮಳೆಯನ್ನು ತರಿಸಲು ಸಾಧನವಾಗುತ್ತದೆಂಬ ನಂಬಿಕೆ ಇದೆ. ಪ್ರಕೃತಿಯ ಮೇಲೆ ಅಂತಹ ಹಿಡಿತ ಸಾಧಿಸಬಹುದೆಂಬ ನಂಬಿಕೆಯು ಮಾಂತ್ರಿಕತೆಗೆ ಆಧಾರ; ಅಂತೆಯೇ ಪ್ರಕೃತಿ ನಿಯಮಗಳನ್ನು ಪ್ರಭಾವಿಸಿ ನಿರ್ದಿಷ್ಟ ಆಶಯಗಳನ್ನು ಪೂರೈಸಿಕೊಳ್ಳುವ ತವಕವೂ ಅದರಲ್ಲಿದೆ. ಜಾರ್ಜ್ ಥಾಮ್ಸನ್‌ನ ಮಾತುಗಳಲ್ಲಿ ಹೇಳುವುದಾದರೆ, ಮಾಂತ್ರಿಕತೆಯನ್ನು ಆಚರಿಸುವವರು "ವಸ್ತುಸ್ಥಿತಿಯ ಬಗ್ಗೆ ಅವರ ಮನೋಭಾವವನ್ನು ಬದಲಿಸಿಕೊಂಡು ವಸ್ತುಸ್ಥಿತಿಯೇ ಬದಲಾಯಿತೆಂದು ಬಗೆಯುತ್ತಾರೆ." ಅಥರ್ವವೇದದ ಮಾಂತ್ರಿಕತೆಯು ಈ ತೆರನಾದ್ದು. ಮಾಂತ್ರಿಕತೆಯ ಭಾಗವಾಗಿ ಪ್ರಕೃತಿಯಲ್ಲಿ ಲಭ್ಯವಿರುವ ಲವಣ, ಮೂಲಿಕೆ, ಮುಂತಾದುವನ್ನು ಬಳಸಿದರೆ ಅದು ಆದಿಮ ವೈದ್ಯಕೀಯದ ಆರಂಭಿಕ ದೆಸೆ ಎನಿಸಿಕೊಳ್ಳುತ್ತದೆ. ಚರಕ ಸಂಹಿತೆಯ ಪರಿಭಾಷೆಯಲ್ಲಿ ಅದು "ದೈವವ್ಯಪಾಶ್ರಯ ಭೇಷಜ"ದಿಂದ "ಯುಕ್ತಿವ್ಯಪಾಶ್ರಯ ಭೇಷಜ"ದತ್ತ ಹೆಜ್ಜೆ ಹಾಕುವುದು ಎನಿಸಿಕೊಳ್ಳುತ್ತದೆ.

ಋಗ್ವೇದದಲ್ಲಿ ೧೦ ಮಂಡಲಗಳಿವೆ; ಆ ಪ್ರಕಾರದಲ್ಲಿ ಅಥರ್ವವೇದವು ೨೦ ಕಾಂಡಗಳನ್ನು ಹೊಂದಿದೆ. ಒಟ್ಟು ೭೩೦ ಸೂಕ್ತಗಳಿರುವ ಅಥರ್ವವೇದದಲ್ಲಿ ಸುಮಾರು ೬೦೦೦ ಮಂತ್ರಗಳಿವೆ. ಋಗ್ವೇದದಲ್ಲಿ ಕಾಣಬರುವ ಕ್ಲುಪ್ತವಾದ ಜೋಡಣೆಯ ವಿಧಾನವು ಅಥರ್ವವೇದದಲ್ಲಿಲ್ಲ. ಒಂದೇ ಒಂದು ಮಂತ್ರದ ಸೂಕ್ತವೂ ಉಂಟು, ಬಹುಸಂಖ್ಯೆಯ ಮಂತ್ರಗಳ ಸೂಕ್ತಗಳೂ ಉಂಟು. ೫೦ರಿಂದ ೮೦ರವರೆಗೆ ಮಂತ್ರಗಳನ್ನು ಹೊಂದಿರುವ ಸೂಕ್ತಗಳು ಸಹ ಇವೆ. ಅಂತಹ ಒಂದು ಸೂಕ್ತವನ್ನು (೧೨.೧) ಮುಂದೆ ಪರಿಚಯಿಸಿಕೊಳ್ಳೋಣ. ಅದು ಪೃಥ್ವೀ ಸೂಕ್ತ, ನಿಜಕ್ಕೂ ಮೌಲಿಕವಾದ ಸೂಕ್ತ. ಉಳಿದಂತೆ ಅಥರ್ವವೇದದಲ್ಲಿ ಕೆಡುಕುಂಟುಮಾಡುತ್ತವೆಂದು ಭಾವಿಸಲಾದ ಅತೀಂದ್ರಿಯ ಶಕ್ತಿಗಳ ವಿರುದ್ಧ ಮಾಂತ್ರಿಕತೆಯ ಛಾಯೆಯಿರುವ ಸೂಕ್ತಗಳಿವೆ. ವಿವಿಧ ಬಗೆಯ ಕಾಯಿಲೆಗಳು, ಹಾವು ಕಡಿತ, ಇಂಥವೆಲ್ಲಾ ಈ ವಿಭಾಗದಲ್ಲಿ ಮಾಂತ್ರಿಕತೆಯ ಪ್ರಕ್ರಿಯೆಗೆ ಗುರಿಯಾಗುತ್ತವೆ. ಪ್ರೇಮ, ದಿನನಿತ್ಯದ ವ್ಯವಹಾರ, ಜೂಜು, ಮುಂತಾದುವಲ್ಲಿ ಜಯ ಸಾಧಿಸಲು ಸಹ ಮಾಂತ್ರಿಕತೆಯ ಪ್ರಯೋಗವಿದೆ. ೧೪ನೆಯ ಕಾಂಡದಲ್ಲಿ ಮದುವೆ ಆಚರಣೆಗೆ ಸಂಬಂಧಿಸಿದ ಎರಡು ಸೂಕ್ತಗಳಿವೆ; ಅವುಗಳ ಪೈಕಿ ಒಂದು ಋಗ್ವೇದ ಸೂಕ್ತವೊಂದರ (೧೦.೮೫) ಪುನರಾವರ್ತನೆಯೇ ಆಗಿದೆ. ಋಗ್ವೇದದಲ್ಲಿ ಇಲ್ಲದ ವ್ರಾತ್ಯನ ಹೊಗಳಿಕೆಗೆ ೧೫ನೆಯ ಕಾಂಡವು ಮೀಸಲಾಗಿದೆ. ವ್ರಾತ್ಯನೆಂದರೆ ಅಲೆಮಾರಿ ಭಿಕ್ಷುಕ. ಇವನು ಮುಂದಿನ ಬುದ್ಧಕಾಲೀನ ಭಿಕ್ಷುವಂತೂ ಅಲ್ಲ. ಮುಂದೆ ಅವನ ಬಗೆಗಿನ ಒಂದು ಸೂಕ್ತವನ್ನು ನೋಡೋಣ. ೧೮ನೆಯ ಕಾಂಡದಲ್ಲಿ ಪಿತೃ ಮತ್ತು ಪಿತೃಮೇಧ ಸೂಕ್ತಗಳಿವೆ. ಋಗ್ವೇದದಲ್ಲಿ ಇರುವುದಕ್ಕಿಂತಲೂ ಹೆಚ್ಚಿನ ಮಂತ್ರಗಳು ಇಲ್ಲಿವೆ. ೨೦ನೆಯ ಕಾಂಡದಲ್ಲಿ ೧೦ ಕುಂತಾಪ ಸೂಕ್ತಗಳಿವೆ. ಅವುಗಳ ಪರಿಚಯ ನಂತರ ಮಾಡಿಕೊಳ್ಳೋಣ. ಅವನ್ನುಳಿದು ಮಿಕ್ಕ ಸೂಕ್ತಗಳೆಲ್ಲಾ ಇಂದ್ರನನ್ನು ಉದ್ದೇಶಿಸಿರುವಂಥವು, ಬಹುಭಾಗ ಋಗ್ವೇದದ ಕೆಲವು ಸೂಕ್ತಗಳ ಪುನರಾವರ್ತನೆ. ಒಟ್ಟಿನಲ್ಲಿ, ಅಥರ್ವವೇದವು ವಿಭಿನ್ನ ವಿಷಯಗಳನ್ನು ಕುರಿತಾದಂತಹ ಸೂಕ್ತಗಳ ಸಂಹಿತೆ. ವೇದದಲ್ಲಿ ಇಂಥದೂ ಇರಬಹುದೇ ಎಂದು ಕೆಲವರಿಗೆ ಮುಜುಗರ ಉಂಟುಮಾಡಬಹುದಾದ ಕೆಲವು ಸೂಕ್ತಗಳು ಸಹ ಇಲ್ಲಿವೆ. ಅಂತಹ ಕೆಲವು ಋಗ್ವೇದದಲ್ಲೂ ಇವೆ, ಆದರೆ ನಮ್ಮ ಬಹುತೇಕ ಪಂಡಿತರು ಅಂಥವನ್ನೆಲ್ಲ ಅಧ್ಯಯನ ಮಾಡದೆಯೇ ಋಗ್ವೇದದ ಶ್ರೇಷ್ಠತೆಯನ್ನು ಕೊಂಡಾಡಿ ನಲಿಯುತ್ತಾರೆ ಎನ್ನಬಹುದು.

ದಿನನಿತ್ಯದ ಬದುಕು, ಕಷ್ಟ ಮತ್ತು ಸುಖ, ಭರವಸೆ ಮತ್ತು ಭಯ, ಇವೆಲ್ಲಾ ಅಥರ್ವವೇದದಲ್ಲಿ ವಿಪುಲವಾಗಿ ಪ್ರತಿಫಲಿತವಾಗಿವೆ. ಆ ಕಾಲದ ಸಾಮಾನ್ಯ ಜನರ ಚಿತ್ರಣವು ಇಲ್ಲಿಯ ವೈಶಿಷ್ಟ್ಯ. ಆ ದೃಷ್ಟಿಯಿಂದ ಇದು ಋಗ್ವೇದಕ್ಕಿಂತಲೂ ಹೆಚ್ಚು ಆಪ್ತವಾಗಲು ಸಾಧ್ಯ. ವೈದಿಕ ಸಾಹಿತ್ಯದ ಕಾಲದಲ್ಲಿ "ಮಧ್ಯಮ ವರ್ಗ" ಎನಿಸಿಕೊಳ್ಳಲು ಯಾರಾದರೂ ಇದ್ದರೆ ಅವರು ಅಥರ್ವವೇದದಲ್ಲಿ ಹೆಚ್ಚಾಗಿದ್ದಾರೆ. ಬುಡಕಟ್ಟುಗಳ ಆಚರಣೆಗಳು ವ್ಯಾಪಕವಾಗಿ ನಿರೂಪಿಸಲ್ಪಡುವುದು ಸಹ ಈ ವೇದದಲ್ಲೇ. ಎಂತೆಂತಹ ಆಚರಣೆಗಳ ಪ್ರಸ್ತಾಪವಿದೆಯೆಂಬುದನ್ನು ಸಂಕ್ಷಿಪ್ತವಾಗಿ ಪಟ್ಟಿ ಮಾಡಿದರೆ ಎಷ್ಟೋ ಪ್ರಮುಖ ಆಚರಣೆಗಳು ಬಿಟ್ಟುಹೋಗುವ ಸಂಭವವಿದೆ. ಸ್ಥೂಲವಾಗಿ ಕೆಲವನ್ನು ಹೆಸರಿಸಬಹುದು : ಮಗುವಿನ ಜನನದ ಮುನ್ನ ಆಚರಣೆ, ಮಗುವಿನ ಜನನದ ನಂತರ ಶುಭ ಕೋರುವುದು, ತಾಯಿಗೆ ತಾಯಿತ ನೀಡುವುದು, ಮಗುವಿಗೆ ಮೊದಲೆರಡು ಹಲ್ಲು ಬಂದಾಗಿನ ಸಂಭ್ರಮ, ಯುವಕರಿಗೆ ಬುಡಕಟ್ಟಿನೊಳಗೆ ಪ್ರವೇಶ, ಅವನಿಗೆ ಬಟ್ಟೆ ತೊಡಿಸುವುದು, ಇತ್ಯಾದಿ. ಬಟ್ಟೆ ತೊಡಿಸುವುದೆಂದರೆ ಯುವಕನ ಹೊಸ ಸ್ಥಾನ, ಕರ್ತವ್ಯ ಮತ್ತು ಜವಾಬ್ದಾರಿಗಳನ್ನು ಅವನಿಗೆ ಮನದಟ್ಟುಮಾಡಿಕೊಡುವುದು ಎಂದರ್ಥ. ನಂತರ ಅವನೇ ಮಾಂತ್ರಿಕತೆಯ ಅಧಿಕಾರ ಪಡೆಯುತ್ತಾನೆ. ಆಗ ಅವನು ಆಯ್ದುಕೊಂಡ ಹೆಣ್ಣನ್ನು ತನ್ನತ್ತ ಸೆಳೆಯುವುದು, ಯಾರಿಗೂ ತಿಳಿಯದಂತೆ ಅವಳ ಗುಡಿಸಿಲಿಗೆ ಹೋಗಬಲ್ಲ ತಂತ್ರವನ್ನು ಸಿದ್ಧಿಸಿಕೊಳ್ಳುವುದು, ಅವನೊಬ್ಬ ಸ್ನೇಹಿತನು ಅವನಿಗಾಗಿ ಹೆಣ್ಣನ್ನು ಹುಡುಕಿಕೊಡುವುದು, ಇಂಥವಕ್ಕೆ ಅವನು ಮಾಂತ್ರಿಕತೆಯನ್ನು ಬಳಸಬಹುದು.

ಕೃಷಿಯ ಬಗ್ಗೆ ಋಗ್ವೇದದಲ್ಲಿ ಲಭ್ಯವಿರುವ ಮಾಹಿತಿಗಿಂತಲೂ ಹೆಚ್ಚಿನ ಮಾಹಿತಿಯು ಅಥರ್ವವೇದದಲ್ಲಿ ದೊರಕುತ್ತದೆ. ಯುವಕನ ಜವಾಬ್ದಾರಿಗಳಲ್ಲಿ ಕೃಷಿಕನಾಗಿ ಉಳುಮೆ ಮಾಡುವುದು, ಹೊಲಕ್ಕೆ ನೀರು ತಿರುಗಿಸಲು ನಾಲೆಯನ್ನು ನಿರ್ಮಿಸುವುದು, ಮಳೆ–ಬೆಳೆಗಾಗಿ ಸೂಕ್ತ ಪ್ರಾರ್ಥನೆ ಸಲ್ಲಿಸುವುದು, ಬೆಳೆಯ ಕಟಾವಿಗೆ ಮಾನವೇತರ ಸಹಾಯ ದೊರಕಿಸಿಕೊಳ್ಳುವುದು, ಮುಂತಾದುವು ಸೇರಿವೆ. ಆ ಬಗ್ಗೆ ಕೆಲವು ವಿವರಗಳು ಅಥರ್ವವೇದದಲ್ಲಿ ದೊರಕುತ್ತವೆ. ವಸತಿಯ ನಿರ್ಮಾಣದಲ್ಲೂ ಯುವಕನ ಪಾತ್ರವಿರುತ್ತದೆ. ಅವನದು ಮರದ ಮನೆ ಮತ್ತು ಮೇಲೆ ಅದಕ್ಕೆ ಹುಲ್ಲಿನ ಹೊದಿಕೆ. ಅಗ್ನಿಯು ಅದನ್ನು ರಕ್ಷಿಸುತ್ತಾನೆ, ಅಂದರೆ ಅಗ್ನಿಯು ಅಪಾಯವನ್ನು ತಂದೊಡ್ಡುವುದಿಲ್ಲ. ಮಡದಿಯು ನೀರು ಹೊತ್ತು ತರುತ್ತಾಳೆ ಮತ್ತು ಇಡೀ ಕುಟುಂಬವು ಇಷ್ಟರೊಡನೆ ಸಡಗರದಿಂದ ಪಾನೀಯವನ್ನು ಸ್ವೀಕರಿಸುತ್ತದೆ.

ಋಗ್ವೇದದ ದೇವತೆಗಳನ್ನು ಯಜ್ಞದಿಂದ ತಣಿಸಬೇಕು

ಮತ್ತು ಯಜ್ಞವಿಧಿಗಳು ಸಂಕೀರ್ಣಗೊಳ್ಳುತ್ತಾ ಹೋದವು. ಆದರೆ ಅಥರ್ವವೇದದಲ್ಲಿ ಆಚರಣೆಗಳು ಬಹಳ ಸರಳ, ಮತ್ತು ಯಜ್ಞದಲ್ಲಿ ಕಾಣಿಕೆಯು ಪುಡಿಕಾಸಿನ ಮಟ್ಟವನ್ನು ಬಿಟ್ಟು ಬಹಳ ಮೇಲೇರುವುದಿಲ್ಲ. ಸಾಮಾನ್ಯವಾಗಿ ಈ ಆಚರಣೆಗಳ ಆಶಯವು ಸೀಮಿತವಾದ್ದು : ಇಷ್ಟರೆಲ್ಲರ ಕ್ಷೇಮ, ಒಳ್ಳೆಯ ಫಸಲು, ವೃದ್ಧಿಹೊಂದುತ್ತಿರುವ ಆಕಳು. ಋಗ್ವೇದದ ಕವಿಗಳ ಆಶಯವೂ ಬಹುಮಟ್ಟಿಗೆ ಇದೇ. ಈ ಆಶಯಗಳ ಪೂರೈಕೆಗೆ ಕೆಲವು ತೊಂದರೆಗಳಿರಲು ಸಾಧ್ಯ. ಅವು ವಿವಿಧ ಸ್ವರೂಪಗಳವು : ಉದಾಹರಣೆಗೆ, ಜ್ವರ, ಕೀಲುನೋವು, ಆಗಾಗ್ಗೆ ಮಳೆಯ ಅಭಾವ, ಫಸಲನ್ನು ಹಾಳುಗೆಡಹುವ ಬಿರುಗಾಳಿ ಮತ್ತು ಬಿರುಸಿನ ಮಳೆ, ಸಿಡಿಲಿನಿಂದಾಗಿ ಆಕಳ ಸಾವು, ಇತ್ಯಾದಿ. ಇವೆಲ್ಲಕ್ಕೂ ಅಥರ್ವ ಸಂಪ್ರದಾಯದಲ್ಲಿರುವ ಮದ್ದೆಂದರೆ ಮಾಂತ್ರಿಕತೆ; ಅಂದರೆ, ಅಂತಹ ಯಾತನೆಯ ಘಟನೆಗಳು ನಡೆಯದಿರಲೆಂದು ಆಶಿಸಿ ಮನಸ್ಸಿಗೆ ದಾರ್ಢ್ಯ ತುಂಬಿಕೊಳ್ಳುವುದು. ಋಗ್ವೇದದಲ್ಲಿದ್ದಂತೆ ಅಥರ್ವವೇದದಲ್ಲೂ ಸಭಾ, ಸಮಿತಿ ಮತ್ತು ಅಲ್ಲಿಯ ಮಾತು ಅಥವಾ ಚರ್ಚೆ, ಎಲ್ಲವೂ ಇವೆ. ನೂರ್ಕಾಲದ ಬಾಳನ್ನು ಆಶಿಸುವ ಅಥರ್ವವೇದದ ಕವಿಗಳು ಜೀವನದಲ್ಲಿ ಚರಿತ್ರಾರ್ಹವಾದ್ದೇನೂ ಇಲ್ಲದಿದ್ದರೂ ತೃಪ್ತಿಯಿಂದಿರುವ ಮನೋಭಾವದವರು. ಯಥಾಪ್ರಕಾರ ಜೀವನದ ಪೂರೈಕೆಯ ನಂತರ ಅವರಿಗೆ ಪಿತೃಗಳ ಬಳಿಗೆ ಯಾನದ ಸೌಕರ್ಯ ಇದ್ದೇ ಇರುತ್ತದೆ.

ಋಗ್ವೇದದಲ್ಲಿ ವಾಣಿಜ್ಯದಿಂದ ಜೀವನ ಹೊರೆಯುವವರಿದ್ದಾರೆ, ಆದರೆ ಆ ಬಗೆಗಿನ ವಿವರಣೆಗಳು ಕಡಿಮೆ. ಅಥರ್ವವೇದದಲ್ಲಿ ವಿವರಣೆಗಳು ತುಸು ಹೆಚ್ಚಾಗಿ ಲಭ್ಯವಿವೆ. ಅವರಿಗೆ ದಾರಿಹೋಕರ ಮತ್ತು ಕಾಡುಮೃಗಗಳದ್ದೇ ಭೀತಿ. ಅಲ್ಪಸ್ವಲ್ಪ ಲಾಭ ಮಾಡಿಕೊಡಬೇಕೆಂದು ಅವರು ದೇವತೆಗಳನ್ನು ಕೇಳಿಕೊಳ್ಳುತ್ತಾರೆ. ವಾಣಿಜ್ಯ ವ್ಯವಹಾರಗಳಿಗಾಗಿ ಹೊರಕ್ಕೆ ತೆರಳುವ ಮುನ್ನ ಕೆಲವು ಆಚರಣೆಗಳಿವೆ; ಅವುಗಳಲ್ಲಿ ವಾಯುಗುಣ ಚೆನ್ನಾಗಿರಲೆಂಬುದಕ್ಕೆ ಸಂಬಂಧಿಸಿದವು ಹೆಚ್ಚು. ಹಿಂದಿರುಗುವಾಗ ವರ್ತಕನು ಗಂಧದ್ರವ್ಯ, ಆಭರಣ, ವನಸ್ಪತಿಗಳು, ಮುಂತಾದುವನ್ನು ತರುತ್ತಾನೆ. ಸಾಮಾನ್ಯವಾಗಿ ದೇವತೆಯ ರಕ್ಷಣೆ ಅವನಿಗೆ ಬೇಕಾದ್ದು ಎರಡು ವಿಷಯಗಳಲ್ಲಿ : ಸಾಲ ಹೆಚ್ಚಾಗಿದ್ದಾಗ ಅದನ್ನು ಹಿಂದಿರುಗಿಸದಿರಲು ಮತ್ತು ಹೊರೆ ಹಾಗೂ ನಷ್ಟದ ಬಾಧೆ ಇಲ್ಲದಿರುವಂತೆ ಲಾಭದ ಗಳಿಕೆ.

ಈಗಾಗಲೆ ಪ್ರಸ್ತಾಪಿಸಿರುವಂತೆ ಮದುವೆಯ ಸಂಭ್ರಮವನ್ನು ಅಥರ್ವವೇದವು ಋಗ್ವೇದದ ಸೂಕ್ತದ ಹಿನ್ನೆಲೆಯಲ್ಲಿಯೇ ಕಟ್ಟಿಕೊಂಡಿದೆ. ಅಲ್ಲಿಯೂ ಕೆಲಸ, ಜವಾಬ್ದಾರಿ, ಪ್ರೇಮವೃದ್ಧಿ, ಪತಿಗೃಹಕ್ಕೆ ಪ್ರವೇಶ, ಮುಂತಾದ ಸನ್ನಿವೇಶಗಳಿವೆ. ಸ್ತ್ರೀಯ ಗಂಡನು ಕೆಟ್ಟವನಾದರೆ ಅವನನ್ನು ಹತೋಟಿಗೆ ತರಲು ಅಥರ್ವವೇದವು ಮಾಂತ್ರಿಕತೆಯನ್ನು ಅವಲಂಬಿಸುತ್ತದೆ. ಅಂತೆಯೇ, ಗಂಡನು ಬೇರೆಯವರ ಪ್ರೀತಿಯ ತೆಕ್ಕೆಗೆ ಸಿಲುಕಿದರೆ ಅದಕ್ಕೆ ಅವಕಾಶ ನೀಡಿದ ಸ್ತ್ರೀಯರ ವಿರುದ್ಧ ಮಾಂತ್ರಿಕತೆಯ ಸಾಧನವಿದೆ. ಅಂತಹ ಕೆಲವು ಪ್ರಸಂಗಗಳನ್ನು ಮುಂದೆ ಪರಿಚಯಿಸಿಕೊಳ್ಳೋಣ.

ಸೂಕ್ತಗಳತ್ತ ಮುನ್ನಡೆಯುವ ಮುನ್ನ ಇನ್ನೆರಡು ಮಾತು : (ಅ) ಅಥರ್ವವೇದದಲ್ಲಿ ಹಲವು ಗದ್ಯಭಾಗಗಳಿವೆ ಮತ್ತು ಅವು ೧೫ ಹಾಗೂ ೧೬ನೆಯ ಕಾಂಡಗಳಲ್ಲಿವೆ. (ಆ) ಅಥರ್ವವೇದಕ್ಕೆ ತಥಾಕಥಿತ ಸಾಯಣ ಭಾಷ್ಯವೇನೋ ಇದೆ, ಆದರೆ ಅದು ಪ್ರಸಿದ್ಧವೂ ಅಲ್ಲ, ಉಪಯುಕ್ತವೂ ಅಲ್ಲ. ಅದನ್ನು ಎಸ್. ಪಿ. ಪಂಡಿತ್ ಮುಂಬೈನಲ್ಲಿ ಬಹಳ ಹಿಂದೆ ಪ್ರಕಟಿಸಿದ್ದರು. ಅದನ್ನು ಬಳಸಲಾಗಿಲ್ಲದಿರುವುದು ಇಲ್ಲಿಯ ಒಂದು ಕೊರತೆ.

ಇಷ್ಟು ಪೀಠಿಕೆಯ ನಂತರ ಅಥರ್ವವೇದದ ಮೊಟ್ಟಮೊದಲ ಸೂಕ್ತದತ್ತ ಗಮನ ಹರಿಸೋಣ. ಅದು ವಾಚಸ್ಪತಿಯನ್ನು ಸ್ತುತಿಸುವ ಸೂಕ್ತ, ಆದರೆ ಆದಿಯಲ್ಲೇ ಮಾಂತ್ರಿಕತೆಯ ಸಿಂಚನವಿರುವ ಸೂಕ್ತವೂ ಆಗಿದೆ. ವಾಚಸ್ಪತಿಯು "ಉಸಿರಿರುವ ತನಕ ಮಾತು ಕರುಣಿಸುವವನು. ವಿಶ್ವವನ್ನೆಲ್ಲಾ ಆವರಿಸಿರುವ ೨೭ ದೇವತೆಗಳೆಲ್ಲರ ವಿವಿಧ ರೂಪಗಳಿಂದ ಲಭಿಸುವ ಸರ್ವಸ್ವವನ್ನೂ ವಾಚಸ್ಪತಿಯು ಕರುಣಿಸಬೇಕು." (೧.೧ : ತ್ರಿಷಪ್ತಾಃ ಪರಿಯಂತಿ ವಿಶ್ವಾ ರೂಪಾಣಿ ಬಿಭ್ರತಃ ! ವಾಚಸ್ಪತಿರ್ಬಲಾ ತೇಷಾಂ ತನ್ವೋ ಅದ್ಯ ದಧಾತು ಮೇ ॥). ಇದೊಂದು ಮಂಗಲ ಶ್ಲೋಕದಂತಿದೆ. ೨೭ (ತ್ರಿಷಪ್ತಾಃ) ಎಂಬುದು ನಿರ್ದಿಷ್ಟ ಸಂಖ್ಯೆಯಾದರೂ ಅದರ ತಾತ್ಪರ್ಯ 'ನೂರಾರು ದೇವತೆಗಳು' ಎಂದೇ. ಎಲ್ಲ ದೇವತೆಗಳೂ ವಾಚಸ್ಪತಿಯ ಮೂಲಕ ಕವಿಯ ಅಭಿವ್ಯಕ್ತಿಗೆ ಶಕ್ತಿಸಾಮರ್ಥ್ಯಗಳನ್ನು ನೀಡುತ್ತಾರೆ. 'ವಾಚಸ್ಪತಿಯು ನನ್ನಲ್ಲಿ ಜ್ಞಾನ ತುಂಬಲಿ' ಎಂಬ ಆಶಯವು ಮೂರನೆಯ ಮಂತ್ರದಲ್ಲಿ ಮತ್ತೆ ಪ್ರಕಟವಾಗಿದೆ (೧.೩ : ವಾಚಸ್ಪತಿರ್ನಿ ಯಚ್ಛತು ಮಯ್ಯೇವಾಸ್ತು ಮಯಿ ಶ್ರುತಂ). ಅದಕ್ಕೆ ಮುಂಚೆ ಎರಡನೆಯ ಮಂತ್ರದಲ್ಲಾಗಲೆ ಮಾಂತ್ರಿಕತೆಯ ಛಾಯೆ ಇದೆ ಮತ್ತು ಎರಡನೆಯ ಸೂಕ್ತವು ರೋಗೋಪಶಮನದ ಉದ್ದೇಶವನ್ನು ಸಾರುತ್ತದೆ. ರೋಗಿಯ ಶರೀರದ ಸುತ್ತ ರೋಗವನ್ನು ಸುತ್ತಲಾಗಿದೆಯೆಂದು ಅಲ್ಲಿ ಹೇಳಲಾಗಿದೆ. ಹಾಗೆ ಸುತ್ತುವರಿದಿರುವುದನ್ನು ಬಾಣದಿಂದ ತುಂಡರಿಸಬೇಕೆಂಬ ಆಶಯವನ್ನು ಸೂಕ್ತದ ಮೂರನೆಯ ಮಂತ್ರವು ಪ್ರಕಟಿಸುತ್ತದೆ (೧.೩ : ಇಹ್ಯೆವಾಭಿ ವಿ ತನೂಭೇ ಆರ್ತ್ನೀ ಇವ ಜ್ಯಯಾ). ಹಾಗೆ ಸುತ್ತಿಕೊಳ್ಳುವ ರೋಗಗಳೆಂದರೆ ಮೂತ್ರಬಾಧೆ ಮತ್ತು ಮಲಬದ್ಧತೆ. ಅದನ್ನು ಮೂರನೆಯ ಸೂಕ್ತದಲ್ಲಿ ಹೇಳಲಾಗಿದೆ (೧.೩.೬ : ಏವಾ ತೇ ಮೂತ್ರಂ ಮುಚ್ಯತಾಂ ಬಹಿರ್ಬಾಲಿತಿ ಸರ್ವಕಂ). ಎಲ್ಲಾ ಹೊರಬರಲಿ, ಹರಿದುಹೋಗಲಿ, ಎಂದರ್ಥ. ನದಿಯ ಹರಿವಿಗೆ ಕಟ್ಟೆಯು ಪ್ರತಿಬಂಧಕವಿದ್ದಂತೆ ಮೂತ್ರವನ್ನು ತಡೆದಿಟ್ಟಿರುವ ಅಗೋಚರ ಕಟ್ಟೆಯೊಂದಿದೆ. ಅದನ್ನು ತೆರೆದು ಮೂತ್ರವು ಹೊರಬರಬೇಕು. ಅದನ್ನೇ ಇನ್ನೂ ಸ್ಪಷ್ಟವಾಗಿ ೯ನೆಯ ಮಂತ್ರವು ಉಚ್ಚರಿಸಿದೆ : ಬಿಲ್ಲಿನಿಂದ ಬಾಣವು ರಭಸದಿಂದ ಹೋಗಿಬಿಡುವಂತೆ ಶರೀರದ ದ್ವಾರಗಳಿಂದ ಮೂತ್ರ-ಪುರೀಷಗಳು ಹೊರಬರಲಿ, ಎಂದು (೧.೩.೯ : ಯಥೇಷುಕಾ ಪರಾಪತದವಸೃಷ್ಟಾಧಿ ಧನ್ವನಃ । ಏವಾ ತೇ ಮೂತ್ರಂ ಮುಚ್ಯತಾಂ ಬಹಿರ್ಬಾಲಿತಿ ಸರ್ವಕಂ ॥). ಮಂತ್ರದ ಜೊತೆ ಈ ಕ್ರಿಯೆಯು ನಡೆಯುವಂತೆ ಏನಾದರೊಂದು ಮೂಲಿಕೆಯನ್ನು ರೋಗಿಗೆ ಕೊಡುತ್ತಿದ್ದಿರಬೇಕು, ಅಥರ್ವವೇದವು ಅದನ್ನು ಉಲ್ಲೇಖಿಸಿಲ್ಲ.

**ಅಂದ**

ಮನೆಯಂಗಳದ
ರಂಗೋಲಿಯ ಅಂದ
ಆಗಿತ್ತಿನ್ನು ಚೆಂದ
ಕಂದನ ಕಾಲ್ತುಳಿತದಿಂದ !

ಡಾ॥ ವಿ. ಪುಗಳೇಂದಿ
ಬಳ್ಳಾರಿ

ಏಳನೆಯ ಸೂಕ್ತದಲ್ಲಿ ಕೇಡುಕುಂಟುಮಾಡುವ ಕಿಮೀದಿನ್ ಎಂಬ ದುಷ್ಟಶಕ್ತಿಯ ನಾಶಮಾಡಲು ಅಗ್ನಿ ಮತ್ತು ಇಂದ್ರರನ್ನು ಪ್ರಾರ್ಥಿಸಲಾಗಿದೆ. ದಸ್ಯುಗಳನ್ನು ಸದೆಬಡಿಯುವಂತೆ ಇಂದ್ರನು 'ಕಿಮೀದಿನ್'ಅನ್ನು ಸಹ ಬಡಿದುಹಾಕುತ್ತಾನೆ. ಈ ಪದದ ಅರ್ಥವನ್ನು 'ಕಿಮಿದಾನೀಂ' ಎಂಬುದರಿಂದ ಪಡೆಯಬಹುದು ಎಂದು ಯಾಸ್ಕನು ನಿರುಕ್ತದಲ್ಲಿ ಹೇಳಿದ್ದಾನೆ. "ಅಯ್ಯೋ, ಈ ದುಷ್ಟಶಕ್ತಿ ಎದುರಾಗಿದೆ, ಈಗೇನು ಗತಿ !" ಎಂಬ ಭಾವ ಅದರಲ್ಲಿ ಹುದುಗಿದೆ. (೧.೭.೧ : ಸ್ತುವಾನಮಗ್ನ ಆ ವಹ ಯಾತುಧಾನಂ ಕಿಮೀದಿನಂ । ತ್ವಂ ಹಿ ದೇವ ವಂದಿತೋ ಹಂತಾ ದಸ್ಯೋರ್ಬಭೂವಿಥ ॥).

ಹನ್ನೊಂದನೆಯ ಸೂಕ್ತವು "ನಾರೀ ಸುಖಪ್ರಸೂತಿ" ಯನ್ನು ಕುರಿತಾದದ್ದು. ಸಹಜವಾಗಿಯೇ ಪ್ರಸೂತಿಯ ಸಂದರ್ಭವು ಅನಿಶ್ಚಿತವಾದ ಅಪಾಯಗಳಿಗೆ ಆಹ್ವಾನ ನೀಡುವಂಥದು. ಮೂರು ಸಾವಿರ ವರ್ಷಗಳಿಗೂ ಹೆಚ್ಚಿನ ಕಾಲದ ಹಿಂದಿನ ಸನ್ನಿವೇಶ ಇದು ಎಂಬುದನ್ನು ನೆನಪಿನಲ್ಲಿಡಬೇಕು. ಆತಂಕದ ಗಾಢತೆ ಆಗ ಕಣ್ಣಿಗೆ ಕಟ್ಟುತ್ತದೆ. ಮೊದಲೆರಡು ಮಂತ್ರಗಳಲ್ಲಿ ಪೂಷನ್ ಮತ್ತು ಅರ್ಯಮನ್ ದೇವತೆಗಳು ಹೋತೃವಿನ ಸ್ಥಾನದಲ್ಲಿದ್ದುಕೊಂಡು ಪ್ರಸವವನ್ನು ಸುಗಮವಾಗಿಸಬೇಕೆಂಬ ಆಶಯವು ವ್ಯಕ್ತವಾಗಿದೆ. ಮುಂದಿನ ನಾಲ್ಕು ಮಂತ್ರಗಳನ್ನು ವ್ಯಾಖ್ಯಾನಿಸಲು ಮುಜುಗರ ಅನುಭವಿಸಿದ ಗ್ರಿಫಿತ್ ಅವನ್ನು ಆಂಗ್ಲಭಾಷೆಗೆ ಅನುವಾದಿಸಲಾಗದೆಂದು ಹೇಳಿ ಲ್ಯಾಟಿನ್ ಭಾಷೆಗೆ ಅನುವಾದಿಸಿಬಿಟ್ಟಿದ್ದಾನೆ ! ಅಂತಹ ಪ್ರಮಾದದ ಸಂಗತಿಯೇನೂ ಅಲ್ಲಿಲ್ಲ. ಯೋನಿಯನ್ನು ಭೇದಿಸಿ ಮಗು ಹೊರಬರುತ್ತದೆ, ಮಾಂಸ-ಮಜ್ಜೆ ಮುಂತಾದುವನ್ನು ದಾಟಿ ಅದು ಹೊರಬರಬೇಕು; ವಿವಿಧ ಬಣ್ಣಗಳ ದ್ರವವನ್ನು ಸಾವರಿಸಿಕೊಂಡು ಬರುವ ಮಗು ಬಹುಕಾಲ ಬಾಳಬೇಕೇ ವಿನಾ ಪ್ರಸವ ಸಮಯದಲ್ಲಿ ಅಪಾಯಕ್ಕೀಡಾಗಬಾರದು. ಹಾಗಿರುವಾಗ ಪ್ರಸವ ಸಮಯದಲ್ಲಿ ಯಾವ ಬಾಧಕವೂ ಎದುರಾಗದಿರಲಿ, ಎಂಬುದು ಮೂಲ ಆಶಯ. ಪ್ರಸೂತಿ ಶಾಸ್ತ್ರದ ಪ್ರಾಥಮಿಕ ಘಟ್ಟವನ್ನು ನಾವಿಲ್ಲಿ ಕಾಣಬಹುದು. ಇದನ್ನು "ಅಪೌರುಷೇಯ" ವಾದ ವೇದ ಎನ್ನಬೇಕೇ ?

**ಜಿ. ರಾಮಕೃಷ್ಣ**
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ
೩ನೇ ಹಂತ, ಬೆಂಗಳೂರು – ೫೬೦ ೦೮೫

# ಚುನಾವಣೆಯೆಂಬ ಜಾತ್ರೆಯಲ್ಲಿ ಮತ(ದಾನ) ಮಾರಾಟ

ಡಾ॥ ಕೆ. ಮೋಹನ್‌ಕೃಷ್ಣ ರೈ

ಚುನಾವಣೆ ಎನ್ನುವುದು ಅತ್ಯಂತ ಶಿಸ್ತುಬದ್ಧವಾಗಿ ಹಾಗೂ ಖಚಿತವಾದ ಉದ್ದೇಶಗಳನ್ನು ಇಟ್ಟುಕೊಂಡು ನಡೆಯುವ ಒಂದು ಪ್ರಕ್ರಿಯೆ. ಭಾರತದಲ್ಲಿ ನಡೆಯುವ ಚುನಾವಣೆ ಜಗತ್ತಿನಲ್ಲಿಯೇ ಹೆಚ್ಚು ವಿಶ್ಲೇಷಣೆಗೆ ಒಳಗಾಗುವ ಹಾಗೂ ಕುತೂಹಲ ಮೂಡಿಸುವ ರೀತಿಯದ್ದಾಗಿದೆ. ಏಕೆಂದರೆ ಭಾರತವು ಬಹುದೊಡ್ಡ ಪ್ರಜಾಪ್ರಭುತ್ವ ರಾಷ್ಟ್ರ. ಪ್ರಜಾಪ್ರಭುತ್ವ ರಾಷ್ಟ್ರದ ಅಧಿಕಾರ ಚುಕ್ಕಾಣಿಯನ್ನು ಹಿಡಿಯುವವರು ಯಾರು ಎನ್ನುವುದು ಚುನಾವಣೆಯಿಂದ ನಿರ್ಧರಿತವಾಗುತ್ತದೆ. ಸಂವಿಧಾನಬದ್ಧವಾಗಿ ನಡೆಯುವ ಚುನಾವಣೆಯ ಕೇಂದ್ರಬಿಂದು ಮತದಾರ ಹಾಗೂ ಮತದಾರರ ಮೂಲಕ ನಡೆಯುವ ಮತದಾನ. ಯಾವುದೇ ದೇಶದ ಜನರು ಪೌರತ್ವವನ್ನು ಪಡೆಯುವುದು ಹಾಗೂ ಅದರ ಮೂಲಕ ಮತದಾನದ ಹಕ್ಕನ್ನು ಪಡೆಯುವುದೆಂದರೆ ಅದು ಅವರ ಸ್ವಾತಂತ್ರ್ಯದ, ಅಸ್ತಿತ್ವದ ಹಾಗೂ ನಾಗರಿಕ ಹಕ್ಕುಬಾಧ್ಯತೆಗಳ ವಿಚಾರವಾಗುತ್ತದೆ. ಮತದಾನದ ಹಕ್ಕನ್ನು ಪಡೆಯಲು ಜಗತ್ತಿನ ಹಲವಾರು ರಾಷ್ಟ್ರಗಳಲ್ಲಿ ದೀರ್ಘ ಹೋರಾಟ ನಡೆದಿರುವುದು ಚರಿತ್ರೆಯ ಅಧ್ಯಯನದಿಂದ ತಿಳಿದು ಬರುವ ಸಂಗತಿ. ಮತದಾನ ಎನ್ನುವುದು ನಾಗರಿಕ ಹಕ್ಕು, ಸ್ವಾತಂತ್ರ್ಯದ ರಕ್ಷಣೆ ಹಾಗೂ ಪ್ರಜಾಪ್ರಭುತ್ವದ ಪ್ರಶ್ನೆಗಳನ್ನು ಒಳಗೊಂಡಿರುವ ಪ್ರಕ್ರಿಯೆಯಾಗಿದೆ. ಇದು ನಿರ್ಣಾಯಕವಾದ ಕ್ರಿಯೆಯಾಗಿದ್ದು, ದೇಶವನ್ನು ಮುನ್ನಡೆಸುವ ಸಾಮರ್ಥ್ಯವನ್ನು ಹೊಂದಿದೆ. ಮತದಾನವು ಕೇವಲ ತಾಂತ್ರಿಕವಾದ ಕ್ರಿಯೆಯಾಗಿರದೆ, ಅದರೊಳಗೆ ಚಿಂತನೆ, ಆಲೋಚನೆ ಹಾಗೂ ಸಿದ್ಧಾಂತಗಳು ಪ್ರಧಾನವಾಗಿರುತ್ತವೆ. ಮತದಾರರನ್ನು ಪ್ರಭಾವಿಸುವ ಹಾಗೂ ಓಲೈಸುವ ಅಂಶಗಳು ಹತ್ತಾರು ಇದ್ದರೂ, ಅಂತಿಮವಾಗಿ ಮತದಾರ ಖಚಿತವಾದ ತೀರ್ಮಾನಕ್ಕೆ ಬರಲೇಬೇಕಾಗುತ್ತದೆ. ಮತದಾನದಲ್ಲಿ ಖಚಿತವಾದ ತೀರ್ಮಾನಗಳು ಹಾಗೂ ಸ್ಪಷ್ಟವಾದ ಉದ್ದೇಶಗಳು ಇರಲೇಬೇಕು ಎನ್ನುವುದು ಆಶಯ. ಆದರೆ ಇಂದು ಮತದಾನವು ಉದ್ದಿಮೆಯ ಸ್ವರೂಪವನ್ನು ಪಡೆದುಕೊಳ್ಳಲಾರಂಭಿಸಿ ಬಂಡವಾಳ ಕೇಂದ್ರಿತ ವ್ಯವಸ್ಥೆಯ ಚೌಕಟ್ಟಿನ ಒಳಗೆ ವ್ಯವಹರಿಸಲಾರಂಭಿಸಿರುವುದು ವಿಪರ್ಯಾಸವೇ ಸರಿ.

ಪ್ರಜಾಪ್ರಭುತ್ವ ರಾಷ್ಟ್ರವಾದ ಭಾರತದಲ್ಲಿ ಮತದಾನ ಎನ್ನುವುದು ನಿಜವಾಗಲೂ 'ದಾನ'ದ ರೂಪದಲ್ಲಿ ಇದೆಯೇ ಎನ್ನುವುದು ಮೂಲಭೂತವಾಗಿ ಕಾಡುವ ಪ್ರಶ್ನೆ. ದಾನಗಳಲ್ಲಿ ಹಲವಾರು ರೀತಿಯ ಅಥವಾ ಸ್ವರೂಪದ ದಾನಗಳಿವೆ. ಉದಾಹರಣೆಗೆ ಭೂದಾನ, ಶಾಸ್ತ್ರದಾನ, ವಿದ್ಯಾದಾನ, ರಕ್ತದಾನ, ಅಂಗಾಂಗದಾನ ಹೀಗೆ ಪಟ್ಟಿ ಬೆಳೆಯುತ್ತಾ ಹೋಗುತ್ತದೆ. ದಾನ ಮಾಡಿದರೆ ಪುಣ್ಯ ಅಥವಾ ಮೋಕ್ಷ ಪ್ರಾಪ್ತಿಯಾಗುತ್ತದೆ ಎನ್ನುವ ಅಲೌಕಿಕ ಚಿಂತನೆಗಳು ರಾಜಪ್ರಭುತ್ವದ ಸಂದರ್ಭದಲ್ಲಿ ಅಧಿಕಾರ ಸ್ಥಾಪನೆಗೆ ಸಾಕಷ್ಟು ಬಳಕೆಯಾಗಿವೆ. ದಾನ ನೀಡುವ ಪ್ರಕ್ರಿಯೆ ಒಂದು ನಿಯಂತ್ರಣ ವ್ಯವಸ್ಥೆಯಾಗಿಯೂ ಕೆಲಸ ಮಾಡಿದೆ. ಚರಿತ್ರೆಯಲ್ಲಿ ಇದಕ್ಕೆ ಸಾಕಷ್ಟು ಉದಾಹರಣೆಗಳು ಸಿಗುತ್ತವೆ. ದಾನ ನೀಡುವ ಪ್ರಕ್ರಿಯೆ ಅತ್ಯಂತ ಪಾರದರ್ಶಕವಾದದ್ದು ಹಾಗೂ ಮಾನವೀಯ ಕಳಕಳಿಯಿಂದ ಕೂಡಿರುವಂಥದ್ದು ಎನ್ನುವುದು ಸಾಮಾನ್ಯ ನಂಬಿಕೆ. ಆದರೆ ಈ ಮಾತು ಎಲ್ಲ ಸ್ವರೂಪದ ದಾನಗಳಿಗೂ ಅನ್ವಯಿಸುತ್ತದೆ ಎಂದಲ್ಲ. ದಾನ ನೀಡುವುದರ ಹಿಂದೆ ಸ್ವಾರ್ಥ ಅಡಕವಾಗಿದ್ದರೆ ಅಥವಾ ದಾನ ಪಡೆಯುವುದರ ಹಿಂದೆ ಲಾಭದ ದೃಷ್ಟಿಯಿದ್ದರೆ ಅದು ದಾನ ಎನಿಸಿಕೊಳ್ಳುವುದಿಲ್ಲ. ಮತದಾನವನ್ನು ಈ ಚೌಕಟ್ಟಿನಲ್ಲಿ ಹೇಗೆ ಅರ್ಥೈಸಿಕೊಳ್ಳಬೇಕು ಎನ್ನುವುದು ನಿಜವಾಗಲೂ ಜಟಿಲವಾದ ಪ್ರಶ್ನೆಯೇ ಆಗಿದೆ. ಮತದಾನ ಇನ್ನಿತರ ದಾನಗಳಂತೆ ಕೆಲವರಿಗಷ್ಟೇ ಸೀಮಿತವಾಗಿರದೆ, ಹದಿನೆಂಟು ವರ್ಷ ತುಂಬಿದ ಪ್ರತಿಯೊಬ್ಬರಿಗೂ ಸಂಬಂಧಿಸಿದ್ದಾಗಿದೆ. ಇದೇ ಮತದಾನದ ವಿಶೇಷತೆ. ಮತದಾರ ಎನ್ನುವ ಅರ್ಹತೆಯನ್ನು ಪಡೆದುಕೊಂಡ ಬಳಿಕ ಮತದಾನವು ಹಕ್ಕು ಹಾಗೂ ಕರ್ತವ್ಯದ ಭಾಗವಾಗುತ್ತದೆ.



ಮತದಾನವೆಂದರೆ ಮತವನ್ನು ದಾನ ನೀಡುವುದು ಎಂದರ್ಥ. ಇಲ್ಲಿ ಹಲವಾರು ಪ್ರಶ್ನೆಗಳು ಹುಟ್ಟಿಕೊಳ್ಳುತ್ತವೆ. ಅವುಗಳೆಂದರೆ ದಾನ ನೀಡುವವರು ಹಾಗೂ ದಾನ ಪಡೆಯುವವರು ಯಾರು ? ದಾನವನ್ನು ಯಾಕಾಗಿ ನೀಡಲಾಗುತ್ತದೆ ? ದಾನವನ್ನು ಯಾರಿಗೆ ನೀಡ ಲಾಗುತ್ತದೆ? ಮುಂತಾದವು. ಮತದಾನವನ್ನು ಬಹಿಷ್ಕರಿಸುವ, ಇಲ್ಲವೇ ಮತದಾನದಲ್ಲಿ ಭಾಗಿಯಾಗದೆ ಇರುವವರ ಸಂಖ್ಯೆಯೂ ಕಡಿಮೆಯೇನಿಲ್ಲ. ದೇಶದ ಪ್ರಜೆಗಳು ದೇಶದ ವ್ಯವಸ್ಥಿತ ಆಡಳಿತಕ್ಕಾಗಿ ಹಾಗೂ ಆ ಮೂಲಕ ರಾಜ್ಯ ವ್ಯವಸ್ಥೆ ಗಟ್ಟಿಗೊಳ್ಳುವುದಕ್ಕಾಗಿ ತಮ್ಮ ಮತವನ್ನು ದಾನ ಮಾಡುವುದು ಜವಾಬ್ದಾರಿಯ ಭಾಗವೂ ಆಗಿದೆ. ತಮ್ಮ ಅಭ್ಯರ್ಥಿಗಳನ್ನು ತಾವೇ ಆಯ್ಕೆ ಮಾಡಿ ಅವರ ಮೂಲಕ ಸರ್ಕಾರ ರಚನೆಗೊಂಡು ದೇಶವನ್ನು ಕ್ರಮಬದ್ಧವಾದ ಹಾಗೂ ಯೋಜನಾಬದ್ಧ ಅಭಿವೃದ್ಧಿಯತ್ತ ಮುನ್ನಡೆಸುವಂತೆ ಮಾಡುವ ಜವಾಬ್ದಾರಿ ಮತದಾರರದ್ದು. ಮತವನ್ನು ದಾನವಾಗಿ ಪಡೆದವರು ಕೂಡ ಜವಾಬ್ದಾರಿಯುತವಾಗಿ ನಡೆದುಕೊಂಡು ದಾನದ ಮಹತ್ವವನ್ನು ಸ್ವಾರ್ಥರಹಿತ ಹಾಗೂ ಪಾರದರ್ಶಕ ಕಾಯಕದ ಮೂಲಕ ಹೆಚ್ಚಿಸ ಬೇಕಾಗುತ್ತದೆ. ಮತವನ್ನು ಹಣ ಅಥವಾ ಇನ್ನಿತರ ಆಮಿಷಗಳನ್ನು ಒಡ್ಡಿಕೊಂಡುಕೊಂಡರೆ ಅದು ದಾನ ವಾಗುವುದಿಲ್ಲ. ಅಷ್ಟೇ ಅಲ್ಲದೆ, ಮತದಾನ ಮಾಡಿದವರು ನಿರ್ಣಾಯಕರಾಗಿ ಕಾಣಿಸಿಕೊಳ್ಳುವ ಬದಲು ಅಧೀನರಾಗಿ ಅಥವಾ ಅವಲಂಬಿಗಳಾಗಿ ಪರಿವರ್ತನೆ ಗೊಳ್ಳುವ ಸ್ಥಿತಿ ನಿರ್ಮಾಣವಾಗುತ್ತದೆ. ಮತದಾನವು ಇಂದು ವ್ಯಾಪಾರೀಕರಣಕ್ಕೆ ಒಳಪಟ್ಟು ಮಾರುಕಟ್ಟೆಯಲ್ಲಿ ಬಿಕರಿಯಾಗುವ ಒಂದು ಸರಕಾಗಿ ಮಾರ್ಪಟ್ಟಿದೆ. ಚುನಾವಣೆಗಳು ನಡೆಯುವ ಪ್ರದೇಶಗಳು ಅಕ್ಷರಶಃ ವ್ಯಾಪಾರ ನಡೆಯುವ ಸಂತೆಗಳಾಗಿ ಪರಿವರ್ತನೆ ಗೊಳ್ಳಲಾರಂಭಿಸಿವೆ. ಅಲ್ಲಿ ಪ್ರತಿಯೊಂದು ಪಕ್ಷದವರೂ ಮತವನ್ನು ಪಡೆಯುವ ಉದ್ದೇಶಕ್ಕಾಗಿ ಹಣ ಹಂಚುವಿಕೆಯಲ್ಲಿ ತೊಡಗುವುದು ಹಾಗೂ ಹಣದ ವಿಚಾರದಲ್ಲಿ ಒಪ್ಪಂದ ಮಾಡುತ್ತಿರುವುದು ಸಾಮಾನ್ಯವಾಗಿ ಕಂಡುಬರುವ ಸಂಗತಿಯಾಗಿದೆ. ಈ ಅಕ್ರಮಗಳಿಗೆ ಸಾಮಾಜಿಕ ಒಪ್ಪಿಗೆಯೂ ಇದೆಯೇ ಎನ್ನುವ ಅನುಮಾನವೂ ಮೂಡುತ್ತದೆ.

ಚುನಾವಣೆಯು ವ್ಯಾಪಾರೀಕರಣಕ್ಕೆ ಒಳಗಾಗಿರು ವುದರಿಂದಾಗಿ ಅದು ಜಾತ್ರೆಯ ಸ್ವರೂಪವನ್ನು ಪಡೆದು ಕೊಂಡಿದೆ. ಚುನಾವಣೆ ಬಂತು ಎನ್ನುವುದು ಹಬ್ಬದ ವಾತಾವರಣವನ್ನು ಯಾಕಾಗಿ ಮೂಡಿಸುತ್ತದೆ ಹಾಗೂ ಚುನಾವಣಾ ಸಂಬಂಧಿ ಉತ್ಸವಗಳು ಯಾಕಾಗಿ ನಡೆಯುತ್ತವೆ ಎನ್ನುವ ವಿಚಾರ ಇಂದು ಚರ್ಚೆಯ ವಸ್ತುವಾಗಬೇಕಾಗಿದೆ. ಚುನಾವಣೆ ನಡೆಯುವ ಸ್ಥಳಗಳಿಗೆ ಮತದಾರರು ಮತಗಟ್ಟೆಗಳಿಗೆ ಬಂದುಹೋಗಲು ಉಚಿತ ವಾಹನ ವ್ಯವಸ್ಥೆ, ಉಚಿತ ಊಟೋಪಚಾರ, ಆಮೇಲೆ ಜೇಬಿಗಿಷ್ಟು ಹಣ, ಅಷ್ಟೇ ಅಲ್ಲದೆ ಹೆಂಡ, ಸೀರೆ, ಕೋಳಿ, ಕುರಿ... ಹೀಗೆ ಯಾರ್ಯಾರಿಗೆ ಏನೇನು ಬೇಕೊ ಅವೆಲ್ಲವನ್ನೂ ಒದಗಿಸುವ ವ್ಯವಸ್ಥೆ ಮಾಡಲಾಗಿರುತ್ತದೆ. ಇಷ್ಟೆಲ್ಲಾ ಸಿಗುತ್ತದೆ ಎಂದಾಗ ಚುನಾವಣೆ ಲಾಭದಾಯಕ ಎಂದಾಯಿತು. ಹಾಗಾಗಿ ಚುನಾವಣೆ ಬರುತ್ತದೆ ಎನ್ನುವುದೇ ಒಂದು ಸುಗ್ಗಿ. ಚುನಾವಣೆಗಳು ಬರುತ್ತಲೇ ಇರಲಿ ಎನ್ನುವುದು ಅದರ ಫಲಾನುಭವಿಗಳ ಅಪೇಕ್ಷೆ. ಈ ಸಡಗರ, ಸಂಭ್ರಮದ ಹಿಂದೆ ದೇಶದ ಕಾಳಜಿ ಏನಾದರೂ ಇದೆಯೇ ಎಂಬುದಾಗಿ ಪ್ರಶ್ನಿಸಿದರೆ ಹಾಗೆಂದರೇನು ಎನ್ನುವವರೇ ಹೆಚ್ಚು. ಚುನಾವಣೆಗಳನ್ನು ಕಟ್ಟುನಿಟ್ಟಾಗಿ ಹಾಗೂ ಕಾನೂನುಬದ್ಧವಾಗಿ ನಡೆಸಬೇಕೆನ್ನುವುದು ಇಂಥವರಿಗೆ ಅಪಥ್ಯವಾದ ವಿಚಾರ. ಆ ರೀತಿ ಮಾತನಾಡುವ ಅಧಿಕಾರಿಗಳು ವಿಲನ್‌ಗಳಾಗಿ ಚಿತ್ರಿತರಾಗುತ್ತಾರೆ. ಚುನಾವಣೆಯ ಸಂದರ್ಭದಲ್ಲಿ ಯಾವುದಾದರೂ ಬೂತ್‌ನಲ್ಲಿ ಪ್ರಿಸೈಡಿಂಗ್ ಅಧಿಕಾರಿ ಸ್ವಲ್ಪ ಶಿಸ್ತಿನ ಮನುಷ್ಯನಾದರೆ ಅವನಿಗೆ ಹಿಡಿಶಾಪ ಹಾಕುವವರೇ ಹೆಚ್ಚು. ಯಾರದೋ ಹೆಸರಿನಲ್ಲಿ ಇನ್ಯಾರೋ ಮತ ಚಲಾಯಿಸುವುದು, ಸತ್ತುಹೋದ ವ್ಯಕ್ತಿಗಳ ಹೆಸರಿನಲ್ಲಿ ಮತ ಚಲಾಯಿಸುವುದು, ಸುಳ್ಳು ವಯಸ್ಸು ಹೇಳಿ ಮತ ಚಲಾಯಿಸುವುದು, ಮತದಾನದ ಗುರುತಾದ ಇಂಕ್‌ನ್ನು ಅಳಿಸಿ ಮತ್ತೆ ಮತಹಾಕಲು ಪ್ರಯತ್ನಿಸುವುದು ಇವೇ ಮುಂತಾದ ಅಕ್ರಮಗಳನ್ನು ಪ್ರಶ್ನಿಸುವುದು ಅಪರಾಧ ಎನ್ನುವ ಮಟ್ಟಕ್ಕೆ ಇಂದು ಬಹುತೇಕ ಮತದಾರರು ಹಾಗೂ ಅಭ್ಯರ್ಥಿಗಳು ಬಂದಿರುವುದು ಪ್ರಜಾಪ್ರಭುತ್ವ ವ್ಯವಸ್ಥೆಯ ವ್ಯಂಗ್ಯವಾಗಿ ತೋರುತ್ತದೆ.

ಚುನಾವಣಾ ಕರ್ತವ್ಯವೆಂದರೆ ಅದೊಂದು ಶಿಕ್ಷೆ ಎನ್ನುವ ಭಾವನೆ ಚುನಾವಣಾ ಕರ್ತವ್ಯಕ್ಕೆ ಹೋಗುವ ಬಹುತೇಕ ಎಲ್ಲ ಸಿಬ್ಬಂದಿಗಳಲ್ಲಿಯೂ ಇರುವುದಕ್ಕೆ ಮೇಲೆ ವಿವರಿಸಿದ ಅಂಶಗಳೇ ಕಾರಣ. ಚುನಾವಣಾ ಸಂದರ್ಭಗಳಲ್ಲಿ ಮತಗಟ್ಟೆಗಳಲ್ಲಿ ನಡೆಯುವ ಗಲಾಟೆ, ರಾಜಕೀಯ ಪಕ್ಷಗಳ ಕಾರ್ಯಕರ್ತರ ಹೊಡೆದಾಟಗಳು, ಚುನಾವಣಾ ಸಿಬ್ಬಂದಿಗಳಿಗೆ ನಾನಾ ರೀತಿಯ ಆಮಿಷ ಗಳನ್ನು ಒಡ್ಡುವುದು, ಚುನಾವಣಾ ಸಿಬ್ಬಂದಿಗೆ ಸರಿಯಾದ ರಕ್ಷಣೆ ಇಲ್ಲದಿರುವುದು ಇವೆಲ್ಲಾ ಒಂದುಕಡೆ ಯಾದರೆ, ಸಿಬ್ಬಂದಿಗಳಿಗೆ ಮತಗಟ್ಟೆಗಳಲ್ಲಿ ಯಾವುದೇ ಮೂಲಭೂತ ಸೌಕರ್ಯ ಇಲ್ಲದೇ ಇರುವುದು ಇನ್ನೊಂದು ಸಮಸ್ಯೆ. ಮತಗಟ್ಟೆ ಸಿಬ್ಬಂದಿಗಳಿಗೆ ಕುಡಿಯುವ ನೀರು, ಮಲಗುವ ಕೊಠಡಿ, ಸ್ನಾನ ಹಾಗೂ ಶೌಚಾಲಯ ವ್ಯವಸ್ಥೆ ಇವು ಯಾವುವೂ ವ್ಯವಸ್ಥಿತವಾಗಿರುವುದಿಲ್ಲ. ಇವೆಲ್ಲವನ್ನು ಸಿಬ್ಬಂದಿಗಳೇ ತಾತ್ಕಾಲಿಕವಾಗಿ ಕಲ್ಪಿಸಿಕೊಳ್ಳಬೇಕಾಗುತ್ತದೆ. ಮಹಿಳಾ ಸಿಬ್ಬಂದಿಗಳು ಎದುರಿಸುವ ಸಮಸ್ಯೆಗಳ ಪಟ್ಟಿ ಇನ್ನಷ್ಟು ಬೆಳೆಯುತ್ತಾ ಹೋಗುತ್ತದೆ. ಮತಗಟ್ಟೆಗಳನ್ನು ಹೆಚ್ಚಾಗಿ ಸರ್ಕಾರಿ ಶಾಲೆಗಳಲ್ಲಿಯೇ ವ್ಯವಸ್ಥೆ ಮಾಡಲಾಗುತ್ತದೆ. ಸರ್ಕಾರಿ ಶಾಲೆಗಳು ಎಷ್ಟರಮಟ್ಟಿಗೆ ನಿರ್ಲಕ್ಷ್ಯಕ್ಕೆ ಒಳಗಾಗಿವೆ ಎನ್ನುವುದು ಅಲ್ಲಿನ ಮೂಲಭೂತ ಸೌಕರ್ಯಗಳ ಕೊರತೆಯಿಂದಲೇ ತಿಳಿದುಬರುತ್ತದೆ. ಚುನಾವಣಾ ಸಿಬ್ಬಂದಿ ಎರಡು ಹಗಲು ಹಾಗೂ ಒಂದು ರಾತ್ರಿ ಕಷ್ಟಪಟ್ಟರೆ, ಆ ಶಾಲೆಗಳಲ್ಲಿ ಓದುವ ಮಕ್ಕಳು ಹಾಗೂ ಅಲ್ಲಿನ ಸಿಬ್ಬಂದಿ ದಿನನಿತ್ಯ ಕಷ್ಟ ಅನುಭವಿಸಬೇಕಾದ ಸ್ಥಿತಿ. ಕೆಲವು ಮತಗಟ್ಟೆಗಳಿಗೆ ಸರಿಯಾದ ರಸ್ತೆ ಸಂಪರ್ಕವೂ ಇರುವುದಿಲ್ಲ, ಚುನಾವಣಾ ಸಾಮಗ್ರಿಗಳನ್ನು ಹೊತ್ತುಕೊಂಡು ಹೋಗಬೇಕಾದ ಸ್ಥಿತಿಯೂ ಇದೆ. ಆದರೆ ಇವು ಯಾವುವೂ ಸಾರ್ವಜನಿಕರಿಗಾಗಲಿ, ಸರ್ಕಾರಿ ಅಧಿಕಾರಿ ಗಳಿಗಾಗಲಿ ಅಥವಾ ಜನಪ್ರತಿನಿಧಿಗಳಿಗಾಗಲಿ ಮುಖ್ಯ ಎನಿಸುವುದೇ ಇಲ್ಲ. ಕೇವಲ ಅಕ್ರಮ ಹಾಗೂ ಅವ್ಯವಹಾರಗಳೇ ತಾಂಡವವಾಡುವ ಸಂದರ್ಭದಲ್ಲಿ ಲಾಭ-ನಷ್ಟದ ಲೆಕ್ಕಾಚಾರಗಳೇ ಅಂತಿಮವಾಗಿರುತ್ತವೆ.

ಹಣಕ್ಕಾಗಿ ಅಥವಾ ಇನ್ನಿತರ ಆಮಿಷಗಳಿಗೆ ಒಳಗಾಗಿ ಮತವನ್ನು ಮಾರಾಟ ಮಾಡುವ ಜನರನ್ನು ಪ್ರಶ್ನಿಸಿದರೆ ಅವರು ಕೊಡುವ ಉತ್ತರ ಯಾರನ್ನಾದರೂ ಒಂದು ಕ್ಷಣ ಗೊಂದಲಕ್ಕೀಡುಮಾಡುವುದಂತೂ ನಿಜ. ಏಕೆಂದರೆ ಅದು ಭಾರತದ ಸಾಮಾಜಿಕ ಹಾಗೂ ಆರ್ಥಿಕ ಸ್ಥಿತಿಗತಿಗಳಿಗೆ ಸಂಬಂಧಿಸಿದ ಪ್ರಶ್ನೆಯೂ ಆಗಿದೆ. ಬಡತನ, ನಿರುದ್ಯೋಗ, ಅನಕ್ಷರತೆ, ಕೊಳೆಗೇರಿ ನಿವಾಸ ಮುಂತಾದ ಸಮಸ್ಯೆಗಳು ಯಾವ ರೀತಿಯ ಸಾಮಾಜಿಕ ಸಂಬಂಧ ಗಳನ್ನು ಹುಟ್ಟುಹಾಕಿವೆ ಹಾಗೂ ಜನಜೀವನವನ್ನು ರೂಪಿಸಿವೆ ಎನ್ನುವ ಅಂಶವನ್ನು ನಿರ್ಲಕ್ಷಿಸು ವಂತಿಲ್ಲ. ಈ ಎಲ್ಲ ಸಮಸ್ಯೆಗಳು ಸಮಾಜದ ಕೆಳವರ್ಗಗಳನ್ನು, ಅದರಲ್ಲೂ ದುಡಿಯುವ ವರ್ಗ ಗಳನ್ನು, ಅಸ್ತಿತ್ವಕ್ಕಾಗಿ ಪರದಾಡುವಂತೆ ಮಾಡಿವೆ. ಆಹಾರ, ಬಟ್ಟೆ ಹಾಗೂ ವಸತಿಗಾಗಿ ಗುಲಾಮರಂತೆ ವರ್ತಿಸ ಬೇಕಾದ ಅನಿವಾರ್ಯತೆಯನ್ನು ಸೃಷ್ಟಿಸಿವೆ. ಪ್ರತಿಯೊಂದು ಪಕ್ಷದವರು ಮನೆಯ ಪ್ರತಿಯೊಬ್ಬ ಸದಸ್ಯನಿಗೂ ತಲಾ ಇಷ್ಟಿಷ್ಟು ಹಣವನ್ನು ಹಂಚುತ್ತಾರೆ, ಇದು ನಮ್ಮ ಬದುಕಿಗೆ



ಅನಿವಾರ್ಯವೂ ಆಗಿದೆ ಎನ್ನುವ ಮಾತು ಹಲವರದ್ದು. ಇನ್ನು ಶೋಕಿಗಾಗಿ ಹಾಗೂ ಕುಡಿತಕ್ಕಾಗಿ ಹಣ ಪಡೆಯುವವರು ಸರಿ–ತಪ್ಪುಗಳ ಅರಿವೇ ಇಲ್ಲದ ವರಂತೆ ವರ್ತಿಸುತ್ತಿರುತ್ತಾರೆ. ಆದರೆ ಇವರೆಲ್ಲರೂ ಮತದಾನವನ್ನು ಯಾವತ್ತೂ ತಪ್ಪಿಸಿಕೊಂಡವರಲ್ಲ. ಇವರಿಗೆ ಈಗ ಸರ್ಕಾರ ಚಿಂತಿಸುತ್ತಿರುವ ಕಡ್ಡಾಯ ಮತದಾನ ಅನ್ವಯಿಸುವುದೇ ಇಲ್ಲ. ಬೇಕಾದರೆ ಏಲೀಟ್ ವರ್ಗಗಳು ಕಡ್ಡಾಯ ಮತದಾನದ ವ್ಯಾಪ್ತಿಗೆ ಬರಬಹುದು. ಏಕೆಂದರೆ ಈ ವರ್ಗದ ಜನರಲ್ಲಿ ಬಹುತೇಕರು ಮತ ಚಲಾಯಿಸಲು ಮತಗಟ್ಟೆಗಳ ಕಡೆ ಮುಖ ಮಾಡುವುದೇ ಇಲ್ಲ. ಆದರೆ ಮತದಾನದ ಮಹತ್ವದ ಕುರಿತು ಭಾಷಣ ಮಾಡುವುದರಲ್ಲಿ ಹಾಗೂ ಚುನಾವಣಾ ಫಲಿತಾಂಶದ ಕುರಿತು ವಿಮರ್ಶಾತ್ಮಕವಾಗಿ ಮಾತನಾಡುವವರಲ್ಲಿ ಇವರು ಮೊದಲಿಗರಾಗಿರುತ್ತಾರೆ.

ಭಾರತೀಯ ಸಂವಿಧಾನದಲ್ಲಿ ಮತದಾನದ ಹಕ್ಕು ಅತ್ಯಂತ ಮಹತ್ವವನ್ನು ಪಡೆದಿರುವಂಥದ್ದು. ಅದು ಕೇವಲ ಹಕ್ಕು ಮಾತ್ರವಾಗಿರದೆ, ಅಸ್ಮಿತೆಯ ಜೊತೆಗೆ ದೇಶದ ರಾಜಕಾರಣದಲ್ಲಿ ಪ್ರಜೆಗಳು ನಿರ್ವಹಿಸ ಬೇಕಾದ ಜವಾಬ್ದಾರಿಯ ಭಾಗವೂ ಆಗಿದೆ. ರಾಜ್ಯ ವ್ಯವಸ್ಥೆ ಉಳಿಯಬೇಕಾದರೆ ಮುಕ್ತ ಹಾಗೂ ನ್ಯಾಯಸಮ್ಮತ ಚುನಾವಣೆ ನಡೆಯಲೇ ಬೇಕು. ಅಂದರೆ ಇಲ್ಲಿ ದೇಶದೊಂದಿಗೆ ಪ್ರಜೆಗಳು ಕೂಡ ತಮ್ಮ ಅಸ್ತಿತ್ವವನ್ನು ಗಟ್ಟಿಗೊಳಿಸಿಕೊಳ್ಳುವ ಪ್ರಯತ್ನದಲ್ಲಿರುತ್ತಾರೆ. ಇದು ಜಾಗತಿಕಮಟ್ಟದ ವಿದ್ಯಮಾನವಾಗಿದ್ದು, ಯಾವ ದೇಶವೂ ಇದರಿಂದ ಹೊರತಾಗಿಲ್ಲ. ಚುನಾವಣೆಯ ಬಳಿಕ ಯಾವ ಸರ್ಕಾರ ಅಧಿಕಾರಕ್ಕೆ ಬರುತ್ತದೆ, ಅದರ ಸಿದ್ಧಾಂತವೇನು ಅಥವಾ ಅಜೆಂಡಾಗಳೇನು ಎನ್ನುವುದು ಅನ್ಯದೇಶದವರಿಗೂ ಕುತೂಹಲಕರವಾದ ವಿಷಯವಾಗಿರುತ್ತದೆ. ಅಮೆರಿಕಾದಲ್ಲಿ ಆಂತರಿಕ ಕಲಹ ಕೊನೆಗೊಂಡು ಗುಲಾಮಗಿರಿಯನ್ನು ರದ್ದುಗೊಳಿಸುವ ತೀರ್ಮಾನವನ್ನು ಲಿಂಕನ್ ತೆಗೆದುಕೊಂಡಾಗ ಗುಲಾಮಗಿರಿಯಂಥ ಕ್ರೂರ ಪದ್ಧತಿಗೆ ಒಳಗಾದ ಜನ ವರ್ಗ ನಿಟ್ಟುಸಿರು ಬಿಡುವಂತಾಯಿತು. ಕಪ್ಪುವರ್ಣೀಯರಿಗೆ ಪೌರತ್ವ ಹಾಗೂ ಮತದಾನದ ಹಕ್ಕು ಸಿಕ್ಕ ದಿನ ಚಾರಿತ್ರಿಕ ದಿನವಾಗಿ ಗುರುತಿಸಲ್ಪಟ್ಟಿತು. ಅವರೆಲ್ಲರೂ ಅಮೆರಿಕಾದ ಅಧಿಕೃತ ಪ್ರಜೆಗಳಾಗಿ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಪಡೆದುಕೊಂಡರು. ಕರಿಯರ ಬಗೆಗಿನ ಬಿಳಿಯರ ವರ್ಣಭೇದ ಧೋರಣೆ ಮನಸ್ಸಿನಿಂದ ಹೋಗಲಿಲ್ಲವಾದರೂ ಕಾನೂನಿನ ಚೌಕಟ್ಟಿನಲ್ಲಿ ಜನಾಂಗೀಯ ನಿಂದನೆಗೆ ಅವಕಾಶ ಇಲ್ಲದ ಕಾರಣ ಹೊಂದಿಕೊಂಡು ಹೋಗಬೇಕಾದ ಅನಿವಾರ್ಯತೆಗೆ ಅವರೆಲ್ಲ ಒಳಗಾಗಲೇಬೇಕಾಯಿತು. ಏಕೆಂದರೆ ಕಾನೂನಿಗೆ ಕಪ್ಪು ಹಾಗೂ ಬಿಳಿ ಚರ್ಮಗಳೆರಡೂ ಸಮಾನ. ವರ್ಣ/ಜಾತಿ/ವರ್ಗ/ಮತ/ಪಂಥ ತಾರತಮ್ಯ ಗಳೆಲ್ಲವನ್ನೂ ಒಡೆದುಹಾಕುವ ಮತದಾನ ಇಂದು ಅವೆಲ್ಲವನ್ನೂ ಪೋಷಿಸಿಕೊಂಡು ಸಾಗುತ್ತಿರುವುದು ಚುನಾವಣೆಯ ಮೂಲ ಆಶಯಕ್ಕೆ ವಿರುದ್ಧವಾಗಿ ಇರುವಂಥದ್ದು.

ಮತವನ್ನು ಪಡೆಯುವ ಉದ್ದೇಶಕ್ಕಾಗಿ ಕುಟುಂಬವನ್ನು, ಸಮಾಜವನ್ನು ಅವೆಲ್ಲವುದಕ್ಕಿಂತ ಮುಖ್ಯವಾಗಿ ಮನಸ್ಸನ್ನು ಒಡೆಯುವ ರಾಜಕಾರಣ ಇಂದು ಜಾತಿಗಿಂತಲೂ ಬಲಿಷ್ಠವಾಗಿ ಬೆಳೆಯುತ್ತಿರುವುದು ಸಮಾಜದ ಹಿತದೃಷ್ಟಿಯಿಂದ ಆರೋಗ್ಯಕರ ಬೆಳವಣಿಗೆಯಲ್ಲ. ರಾಜಕೀಯ ಪಕ್ಷಗಳು ಇಂದು ಜಾತಿ ಹಾಗೂ ಪಂಥಗಳ ಹಿನ್ನೆಲೆಯಲ್ಲಿ ಒಡೆದು ಹೋಗುತ್ತಿದ್ದು, ಸಮಾಜವನ್ನೂ ಒಡೆಯುವ ಪ್ರಯತ್ನದಲ್ಲಿವೆ. ಮುಸ್ಲಿಮರು ಹಾಗೂ ಕ್ರಿಶ್ಚಿಯನ್ನರು ಮತ ಹಾಕುವ ಪಕ್ಷ, ವ್ಯಾಪಾರಸ್ಥರು ಮತ ಹಾಕುವ ಪಕ್ಷ, ರೈತರು ಹಾಗೂ ಕೆಳವರ್ಗದ ಜನರು ಮತ ಹಾಕುವ ಪಕ್ಷ, ಪ್ರಗತಿಪರರ ಪಕ್ಷ, ಸೆಕ್ಯುಲರ್ ಪಕ್ಷ, ಕೋಮುವಾದಿ ಪಕ್ಷ ಹೀಗೆ ಪ್ರತ್ಯೇಕ ಪ್ರತ್ಯೇಕವಾಗಿಯೇ ಗುರುತಿಸಿಕೊಳ್ಳುತ್ತಾ ಪ್ರಸ್ತುತ ರಾಜಕಾರಣ ಮುಂದು ವರಿಯುತ್ತಿದೆ. ಈ ಸ್ವರೂಪದ ರಾಜಕಾರಣದಲ್ಲಿ ಜಾತಿಯಾಧಾರಿತ ಶ್ರೇಣೀಕೃತ ಸಾಮಾಜಿಕ ರಚನೆ, ಧಾರ್ಮಿಕ ಸಂಘರ್ಷ, ಶೋಷಣೆ ಹಾಗೂ ದಬ್ಬಾಳಿಕೆ ಇವೆಲ್ಲವೂ ಹಾಗೆಯೇ ಮುಂದುವರಿಯುತ್ತಿರುತ್ತವೆ. ಇದರಿಂದಾಗಿ ಈಗಾಗಲೇ ಅಸ್ತಿತ್ವದಲ್ಲಿರುವ ಸಾಮಾಜಿಕ ಹಾಗೂ ಸಾಂಸ್ಕೃತಿಕ ಅಂತರಗಳು ಇನ್ನಷ್ಟು ಹೆಚ್ಚುತ್ತಾ ಹೋಗುವಂತಾಗಿದೆ. ಬೇರೆ ಬೇರೆ ರಾಜಕೀಯ ಪಕ್ಷಗಳಿಗೆ ಸೇರಿದ ಕಾರ್ಯಕರ್ತರು ಪರಸ್ಪರ ಶತ್ರು ಗಳಂತೆ ವರ್ತಿಸುತ್ತಾ ಹೊಡೆದಾಟ ಬಡಿದಾಟಗಳನ್ನು ನಡೆಸುತ್ತಿರುವುದು ಸಾಮಾನ್ಯ ಸಂಗತಿಯಾಗಿದೆ. ಇದಕ್ಕೆ ಗ್ರಾಮ ಅಥವಾ ನಗರ, ಶಿಕ್ಷಿತ ಅಥವಾ ಅಶಿಕ್ಷಿತ ಎನ್ನುವ ವ್ಯತ್ಯಾಸಗಳಿಲ್ಲ. ಜಾತಿಯ ಗೋಡೆಗಳನ್ನು ಕಟ್ಟಿಕೊಂಡ ಭಾರತದಲ್ಲಿ ಇದೀಗ ಪಕ್ಷ ರಾಜಕಾರಣದ ಗೋಡೆಗಳು ನಿರ್ಮಾಣಗೊಂಡಿವೆ. ಇವು ಇನ್ನೊಂದು ಬಗೆಯ ಶ್ರೇಣೀಕೃತ ಸಾಮಾಜಿಕ ರಚನೆಯನ್ನು ಹುಟ್ಟುಹಾಕಿವೆ. ಅದರೊಳಗೆ ಊಳಿಗಮಾನ್ಯ ಹಾಗೂ ಬಂಡವಾಳಶಾಹಿ ಮನಸ್ಸುಗಳೆರಡೂ ಸಕ್ರಿಯವಾಗಿದ್ದು, ಆಧುನಿಕ ಎನ್ನುವ ಹೆಸರಿನಲ್ಲಿ ಗುಲಾಮಗಿರಿಯನ್ನೇ ಮುಂದುವರಿಸಲಾಗಿದೆ. ಬಹುಪರಾಕ್ ಹೇಳುವ ಹೊಗಳು ಭಟ್ಟಂಗಿಗಳನ್ನು ಈ ಕಾರಣದಿಂದಾಗಿಯೇ ಆಶ್ರಯ ನೀಡಿ ಸಲಹಲಾಗಿದೆ. ಮತದಾನ ಪ್ರಕ್ರಿಯೆ ಈ ಮಿತಿಗಳನ್ನು ದಾಟಿ ನಿಲ್ಲುವುದಕ್ಕೆ ಸಾಧ್ಯವಿದೆಯೇ ಎನ್ನುವ ಪ್ರಶ್ನೆ ಇನ್ನೂ ಹಲವಾರು ಉಪಪ್ರಶ್ನೆಗಳನ್ನು ಹುಟ್ಟುಹಾಕುತ್ತದೆಯೇ ಹೊರತು ಸಮರ್ಪಕ ಉತ್ತರಗಳ ಕಡೆಗೆ ಸಾಗುವುದೇ ಇಲ್ಲ. ಹಾಗಾಗಿಯೇ ಮತದಾನ ಪ್ರಕ್ರಿಯೆ ಮತ ಮಾರಾಟ ಪ್ರಕ್ರಿಯೆಯಾಗಿ ಪರಿವರ್ತನೆ ಗೊಂಡಿರುವುದು. ಇದರರ್ಥ ಚುನಾವಣೆ ಹಾಗೂ ಮತದಾನದ ಬಗ್ಗೆ ಯಾರಿಗೂ ನಂಬಿಕೆ ಇಲ್ಲ ಎಂದಲ್ಲ. ಚುನಾವಣೆಯ ನಡೆ ಮುಕ್ತವಾಗಿಲ್ಲ ಹಾಗೂ ಪಾರದರ್ಶಕ ವಾಗಿಲ್ಲ ಎನ್ನುವುದು ಬಹುತೇಕರ ತಕರಾರು.

ರಾಜಕಾರಣವು ಇಂದು ಒಂದು ಉದ್ಯಮವಾಗಿ ಬೆಳೆಯುತ್ತಿರುವುದರಿಂದಾಗಿ ಅದರಲ್ಲಿ ಸೇವೆ ಎನ್ನುವ ಪದ ಅರ್ಥವನ್ನು ಕಳೆದುಕೊಂಡಿದೆ. ರಾಜಕೀಯ ಪಕ್ಷಗಳ ಪ್ರಣಾಳಿಕೆಗಳು ವಾದ–ಪ್ರತಿವಾದಗಳಿಗಷ್ಟೇ ಸೀಮಿತಗೊಂಡು ಸಾರ್ವಜನಿಕ ವಲಯದಲ್ಲಿ ಹಾಸ್ಯದ ವಸ್ತುಗಳಾಗಿವೆ. ಮಂತ್ರಿಯಾಗುವುದು ಅಥವಾ ಎಂ.ಪಿ., ಎಂ.ಎಲ್.ಎ. ಆಗುವುದೆಂದರೆ ಉದ್ಯೋಗ

ಪ್ರಜಾಪ್ರಭುತ್ವ ರಾಷ್ಟ್ರವಾದ ಭಾರತದಲ್ಲಿ ಮತದಾನ ಎನ್ನುವುದು ನಿಜವಾಗಲೂ 'ದಾನ'ದ ರೂಪದಲ್ಲಿ ಇದೆಯೇ ಎನ್ನುವುದು ಮೂಲಭೂತವಾಗಿ ಕಾಡುವ ಪ್ರಶ್ನೆ. ದಾನಗಳಲ್ಲಿ ಹಲವಾರು ರೀತಿಯ ಅಥವಾ ಸ್ವರೂಪದ ದಾನಗಳಿವೆ. ಉದಾಹರಣೆಗೆ ಭೂದಾನ, ಶಾಸ್ತ್ರದಾನ, ವಿದ್ಯಾದಾನ, ರಕ್ತದಾನ, ಅಂಗಾಂಗದಾನ ಹೀಗೆ ಪಟ್ಟಿ ಬೆಳೆಯುತ್ತಾ ಹೋಗುತ್ತದೆ. ದಾನ ಮಾಡಿದರೆ ಪುಣ್ಯ ಅಥವಾ ಮೋಕ್ಷ ಪ್ರಾಪ್ತಿಯಾಗುತ್ತದೆ ಎನ್ನುವ ಅಲೌಕಿಕ ಚಿಂತನೆಗಳು ರಾಜಪ್ರಭುತ್ವದ ಸಂದರ್ಭದಲ್ಲಿ ಅಧಿಕಾರ ಸ್ಥಾಪನೆಗೆ ಸಾಕಷ್ಟು ಬಳಕೆಯಾಗಿವೆ. ದಾನ ನೀಡುವ ಪ್ರಕ್ರಿಯೆ ಒಂದು ನಿಯಂತ್ರಣ ವ್ಯವಸ್ಥೆಯಾಗಿಯೂ ಕೆಲಸ ಮಾಡಿದೆ. ಚರಿತ್ರೆಯಲ್ಲಿ ಇದಕ್ಕೆ ಸಾಕಷ್ಟು ಉದಾಹರಣೆಗಳು ಸಿಗುತ್ತವೆ. ದಾನ ನೀಡುವ ಪ್ರಕ್ರಿಯೆ ಅತ್ಯಂತ ಪಾರದರ್ಶಕವಾದದ್ದು ಹಾಗೂ ಮಾನವೀಯ ಕಳಕಳಿಯಿಂದ ಕೂಡಿರು ವಂಥದ್ದು ಎನ್ನುವುದು ಸಾಮಾನ್ಯ ನಂಬಿಕೆ. ಆದರೆ ಈ ಮಾತು ಎಲ್ಲ ಸ್ವರೂಪದ ದಾನಗಳಿಗೂ ಅನ್ವಯಿಸುತ್ತದೆ ಎಂದಲ್ಲ. ದಾನ ನೀಡುವುದರ ಹಿಂದೆ ಸ್ವಾರ್ಥ ಅಡಕವಾಗಿದ್ದರೆ ಅಥವಾ ದಾನ ಪಡೆಯುವುದರ ಹಿಂದೆ ಲಾಭದ ದೃಷ್ಟಿಯಿದ್ದರೆ ಅದು ದಾನ ಎನಿಸಿಕೊಳ್ಳುವುದಿಲ್ಲ. ಮತದಾನವನ್ನು ಈ ಚೌಕಟ್ಟಿನಲ್ಲಿ ಹೇಗೆ ಅರ್ಥೈಸಿ ಕೊಳ್ಳಬೇಕು ಎನ್ನುವುದು ನಿಜವಾಗಲೂ ಜಟಿಲವಾದ ಪ್ರಶ್ನೆಯೇ ಆಗಿದೆ.

ಲಭಿಸುವುದು ಎಂಬರ್ಥದಲ್ಲಿ ಇವೆಲ್ಲವೂ ಉದ್ಯೋಗಗಳಾಗಿ ಪರಿವರ್ತನೆಗೊಂಡಿವೆ. ಬಂಡವಾಳದ ಕ್ರೋಢೀಕರಣವೇ ಏಕೈಕ ಉದ್ದೇಶವಾಗಿ, ಅದರ ಈಡೇರಿಕೆಗೆ ಸುಧಾರಣೆ, ಅಭಿವೃದ್ಧಿ ಮುಂತಾದ, ಜನರನ್ನು ಮರುಳುಮಾಡುವ ಆಕರ್ಷಕ ಯೋಜನೆಗಳು ರೂಪುಗೊಳ್ಳುತ್ತಿರುತ್ತವೆ. ಸುಶಿಕ್ಷಿತ, ಪ್ರಗತಿಪರ ನಿಲುವುಳ್ಳ ಹಾಗೂ ದೇಶದ ಅಭಿವೃದ್ಧಿ ಕುರಿತು ಚಿಂತಿಸುವ ಜನರು ಕೂಡ ಪಕ್ಷ ರಾಜಕಾರಣ ಸಾಗುತ್ತಿರುವ ರೀತಿ ಹಾಗೂ ಅದು ಹುಟ್ಟುಹಾಕಿರುವ ಅನಿಷ್ಟಗಳನ್ನು ಗಂಭೀರವಾಗಿ ತೆಗೆದುಕೊಂಡಂತೆ ಕಂಡುಬರುವುದಿಲ್ಲ. ಸರ್ಕಾರವನ್ನೇ ಒಂದು ಮಧ್ಯವರ್ತಿ ವ್ಯವಸ್ಥೆಯನ್ನಾಗಿ ನೋಡಲಾಗುತ್ತಿದೆ. ಏಕೆಂದರೆ ಖಾಸಗಿ ವಲಯ ಎಲ್ಲ ಕ್ಷೇತ್ರಕ್ಕೂ ಪ್ರವೇಶಿಸುತ್ತಿದ್ದು, ಸರ್ಕಾರದಿಂದ ರಾಜಾತಿಥ್ಯವನ್ನು ಪಡೆಯುತ್ತಿದೆ. ಹಾಗಾಗಿ ಸಾರ್ವಜನಿಕ ವಲಯದೊಳಗೆ ಖಾಸಗಿ ವಲಯವೊ ಅಥವಾ ಖಾಸಗಿ ವಲಯ ದೊಳಗೆ ಸಾರ್ವಜನಿಕ ವಲಯವೊ ಎನ್ನುವ ಸಂದೇಹ ಮೂಡುವಂತಾಗಿದೆ. ಸರ್ಕಾರದ ಯೋಜನೆಗಳು ಯಾರಿಗೆ ತಲುಪಬೇಕೊ ಅವರಿಗೆ ತಲುಪುತ್ತಿಲ್ಲ. ಮತ್ತೆ ಏಲೀಟ್ ವರ್ಗಗಳನ್ನು ಓಲೈಸುವ ಕಡೆಗೇ ಕೆಲವು ಆಡಳಿತ ವರ್ಗಗಳು ಚಿಂತಿಸುತ್ತಿರುತ್ತವೆ. ಈ ಎಲ್ಲ ಬೆಳವಣಿಗೆಗಳು ಮುಕ್ತ ಹಾಗೂ ನ್ಯಾಯಸಮ್ಮತ ಚುನಾವಣೆಗೆ ಅಡ್ಡಿಯಾಗಿವೆ ಎನ್ನುವುದಂತೂ ನಿಜ. ಚುನಾವಣಾ ಅಕ್ರಮಗಳನ್ನು ಎಸಗುತ್ತಲೇ ಅಧಿಕಾರಕ್ಕೆ ಬರುವ ವ್ಯಕ್ತಿ ಅಥವಾ ಪಕ್ಷದಿಂದ ಪ್ರಾಮಾಣಿಕತೆ ಅಥವಾ ಮುಕ್ತತೆಯನ್ನು ನಿರೀಕ್ಷಿಸಲು ಸಾಧ್ಯವಿಲ್ಲ.

ಜವಾಬ್ದಾರಿಯುತ ಸರ್ಕಾರವನ್ನು ಅಸ್ತಿತ್ವಕ್ಕೆ ತರಬೇಕು ಎನ್ನುವುದರಲ್ಲಿ ಮತದಾರರು ಜವಾಬ್ದಾರಿಯುತವಾಗಿ ತೀರ್ಮಾನಗಳನ್ನು ತೆಗೆದುಕೊಳ್ಳಬೇಕು ಎನ್ನುವ ಮಾತು ಕೂಡ ಅಡಕವಾಗಿದೆ. ಮತದಾರರು ಜವಾಬ್ದಾರಿಯುತವಾಗಿ ನಡೆದುಕೊಳ್ಳದಿದ್ದರೆ ಸರ್ಕಾರವನ್ನು ಅಥವಾ ರಾಜಕೀಯ ಪಕ್ಷಗಳನ್ನು ಪ್ರಶ್ನಿಸುವ ನೈತಿಕತೆ ಮತದಾರರಿಗೆ ಇರುವುದಿಲ್ಲ. ಭಾವುಕತೆ ಹಾಗೂ ವ್ಯಕ್ತಿಪೂಜೆಗಳೇ ಮುಖ್ಯವಾದಾಗ ಮನಸ್ಸು ಸಂಕುಚಿತಗೊಂಡು ಪ್ರಶ್ನಿಸುವ ಮನೋಧರ್ಮ ಹುಟ್ಟಿಕೊಳ್ಳುವುದೇ ಇಲ್ಲ. ತಮ್ಮ ನೇತಾರರಿಗಾಗಿ ಎಂತಹ ಅಕ್ರಮಗಳನ್ನೂ ಎಸಗಲು ಅನುಯಾಯಿಗಳು ಮುಂದಾಗುತ್ತಾರೆ. ಮತ ಮಾರಾಟ ಎನ್ನುವುದು ಅಂಥ ಅಕ್ರಮಗಳಲ್ಲಿ ಒಂದು ಮಾತ್ರ. ಈ ಅಕ್ರಮಗಳನ್ನು ಎಸಗುವ ಮತದಾರರಾಗಲಿ ಅಥವಾ ಈ ಬಗೆಯ ಅಕ್ರಮಗಳಿಂದ ಆಯ್ಕೆಯಾಗುವ ಅಭ್ಯರ್ಥಿಗಳಾಗಲಿ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಅಥವಾ ಸಂವಿಧಾನದ ಚೌಕಟ್ಟಿನೊಳಗೆ ಪಾರದರ್ಶಕವಾಗಿ ವ್ಯವಹರಿಸಲು ಸಾಧ್ಯವಿಲ್ಲ. ತಾವೇ ಸ್ವತಃ ಅಪರಾಧಗಳಲ್ಲಿ ಸಿಲುಕಿ ಜೈಲು ಸೇರುವ ನೇತಾರರ ಸಂಖ್ಯೆಯೇನೂ ಕಡಿಮೆ ಇಲ್ಲ. ಅವರು ಜೈಲಿನಿಂದ ಬಿಡುಗಡೆಯಾದಾಗ ವಿಜಯೋತ್ಸವವನ್ನು ಆಚರಿಸಿ ಅವರನ್ನು ತವರು ಜಿಲ್ಲೆಗೆ ಕರೆದುಕೊಂಡು ಬರುವ ಅಭಿಮಾನಿಗಳ ಸಂಭ್ರಮವನ್ನು ನೋಡುವಾಗ ಮತದಾರ ಎಡವುತ್ತಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ. ಸ್ವಾಮಿನಿಷ್ಠೆಯ ಪ್ರದರ್ಶನದ ಭರಾಟೆಯಲ್ಲಿ ಸ್ವಂತಿಕೆ ಹಾಗೂ ಆತ್ಮಗೌರವ ಮರೆಯಾಗುತ್ತಿದ್ದು, ಇದರಿಂದಾಗಿ ಪರಾವಲಂಬನೆ ಅನಿವಾರ್ಯವಾಗತೊಡಗಿದೆ. ಜಗತ್ತಿನ ಅತಿ ದೊಡ್ಡ ಪ್ರಜಾಪ್ರಭುತ್ವ ರಾಷ್ಟ್ರವಾದ ಭಾರತದಲ್ಲಿ ಚುನಾವಣಾ ಪ್ರಕ್ರಿಯೆ ನ್ಯಾಯಸಮ್ಮತವಾಗಿ ನಡೆಯದೆ ಅಕ್ರಮಗಳ ಸುಳಿಯಲ್ಲಿ ಸಿಕ್ಕಿಹಾಕಿಕೊಂಡಿರುವುದು ದೇಶದ ಭವಿಷ್ಯದ ಹಿತದೃಷ್ಟಿಯಿಂದ ದೊಡ್ಡ ಹಿನ್ನಡೆಯೆಂದೇ ಭಾವಿಸಬೇಕಾಗುತ್ತದೆ. ಚುನಾವಣಾ ಸಂಬಂಧಿ ಕಾನೂನು-ಕಾಯ್ದೆಗಳನ್ನು ಬಿಗಿಗೊಳಿಸುವುದರ ಮೂಲಕ ಈ ಸಮಸ್ಯೆಗೆ ಪರಿಹಾರ ಕಂಡುಹಿಡಿಯಬಹುದು ಎನ್ನುವುದು ಬಹಳ ಹಿಂದಿನಿಂದಲೂ ಇರುವ ಚಿಂತನೆ. ಆದರೆ ಚುನಾವಣಾ ಸಂಬಂಧಿ ಕಾನೂನು-ಕಾಯ್ದೆಗಳು ಬಿಗಿಯಾಗಿಯೇ ಇವೆಯಾದರೂ ಅವು ಮತದಾರರಲ್ಲಿ ಜಾಗೃತಿಯನ್ನು ಮೂಡಿಸುವಲ್ಲಿ ಮಾತ್ರ ವಿಫಲವಾಗಿವೆ.

ಮತದಾರರು ಚುನಾವಣಾ ಪ್ರಕ್ರಿಯೆಗೆ ಸಂಬಂಧಿಸಿದಂತೆ ಸ್ವಂತ ತೀರ್ಮಾನಗಳನ್ನು ತೆಗೆದುಕೊಳ್ಳುವ ಸ್ಥಿತಿಯಲ್ಲಿ ಇದ್ದಾರೆಯೇ ಎನ್ನುವ ಪ್ರಶ್ನೆ ಅತ್ಯಂತ ಮಹತ್ವದ್ದು. ಏಕೆಂದರೆ ತಡೆಗೋಡೆಗಳು ಹಲವಾರು ಇರುವುದರಿಂದಾಗಿ ಸ್ವಾತಂತ್ರ್ಯದ ಕಲ್ಪನೆ ಮರೀಚಿಕೆಯಾಗುವ ಸಾಧ್ಯತೆಗಳೇ ಹೆಚ್ಚು. ಮತದಾನದ ಹಕ್ಕು ಇದೆ ಎಂದಾಗ ಮತದಾನವನ್ನು ಸ್ವತಂತ್ರವಾಗಿ ಮಾಡುವ ಸಂದರ್ಭವೂ ನಿರ್ಮಾಣಗೊಂಡಿದೆ ಎಂದಲ್ಲ. ಏಕೆಂದರೆ ಸಾಮಾಜಿಕ ಅಂತರಗಳನ್ನು ಕಾಯ್ದುಕೊಂಡು ಅದರ ಮೂಲಕ ನಡೆಯುವ ಸಾಂಸ್ಕೃತಿಕ ರಾಜಕಾರಣವನ್ನು ಮೀರಿ ನಿಲ್ಲುವ ಸ್ವಾತಂತ್ರ್ಯ ಮತದಾರರಿಗೆ ಬಂದಿದೆಯೇ ಅಥವಾ ಆ ಸಾಮರ್ಥ್ಯವನ್ನು ಪಡೆಯುವ ಸಾಮಾಜಿಕ ಸಂದರ್ಭ ನಿರ್ಮಾಣಗೊಂಡಿದೆಯೇ ಎನ್ನುವ ವಾಸ್ತವಾಂಶಗಳ ಕಡೆಗೂ ಗಮನಹರಿಸಬೇಕಾಗುತ್ತದೆ. ಜನರು ತಮ್ಮ ನಾಗರಿಕ ಹಕ್ಕುಬಾಧ್ಯತೆಗಳಿಗೆ ಹೋರಾಡುವುದನ್ನು ಬಿಟ್ಟು ಈಗಾಗಲೇ ಅಧಿಕಾರ ಹಾಗೂ ಸವಲತ್ತುಗಳನ್ನು ಹೊಂದಿರುವ ಜನವರ್ಗಗಳ ಹಕ್ಕುಬಾಧ್ಯತೆಗಳಿಗಾಗಿ ಹೋರಾಡುವ ಸ್ಥಿತಿ ನಿರ್ಮಾಣಗೊಂಡಿರುವುದು ಈ ಕಾರಣಗಳಿಂದಾಗಿಯೇ. ಹಿಂದಿನಿಂದಲೂ ಬಳುವಳಿಯಾಗಿ ಬಂದಿರುವ ಅರಸು ಆರಾಧನಾ ಪದ್ಧತಿ ಹಾಗೂ ದಾಸ್ಯರೂಪಿ ಸಂಬಂಧಗಳು, ವಸಾಹತುಶಾಹಿ ಆಳ್ವಿಕೆ ಹುಟ್ಟುಹಾಕಿದ ಅವಲಂಬನೆಯ ಬದುಕು ಹಾಗೂ ಸಂಮ್ಮಿಶ್ರ ಸಂಸ್ಕೃತಿ, ನವವಸಾಹತುಶಾಹಿ ಸಂದರ್ಭದ ಮಾರುಕಟ್ಟೆಕೇಂದ್ರಿತ ಹಾಗೂ ಅನುಕರಣೆಯ ಬದುಕು ಇವೆಲ್ಲವೂ ಜನರು ತಮ್ಮ ಸ್ವಂತಿಕೆಯನ್ನು ಕಳೆದುಕೊಂಡು ಇನ್ನೊಬ್ಬರನ್ನು ಆಶ್ರಯಿಸುವಂತೆ ಹಾಗೂ ಜಾಗತಿಕ ತೀರ್ಮಾನಗಳನ್ನು ತಮ್ಮ ತೀರ್ಮಾನಗಳು ಎಂಬಂತೆ ಭ್ರಮಿಸಿ ಬದುಕುವ ಅನಿವಾರ್ಯತೆಯನ್ನು ಸೃಷ್ಟಿಸಿವೆ. ಈ ಬೆಳವಣಿಗೆ ಗ್ರಾಮೀಣ ಭಾರತ ಅಥವಾ ನಗರ ಭಾರತವೆನ್ನದೆ ಎಲ್ಲ ಕಡೆಗಳಲ್ಲೂ ಸಮಾನವಾಗಿಯೇ ಕಂಡುಬರುತ್ತಿದೆ. ಅಕ್ರಮಗಳನ್ನೇ ಸಕ್ರಮವೆಂಬುದಾಗಿ ಬಿಂಬಿಸುವ ಹಾಗೂ ಅದಕ್ಕೊಂದು ಸಾಂಸ್ಥಿಕ ರೂಪವನ್ನು ಕೊಟ್ಟು ಅಧಿಕೃತ ವ್ಯವಸ್ಥೆಯನ್ನಾಗಿಸುವ ಪ್ರಯತ್ನಗಳು ನಿರಂತರವಾಗಿ ನಡೆಯುತ್ತಲೇ ಬಂದಿವೆ. ಮೋಸಹೋಗುವವರು ಎಲ್ಲಿಯವರೆಗೆ ಇರುತ್ತಾರೊ ಮೋಸಗೊಳಿಸುವವರು ಅಲ್ಲಿಯವರೆಗೆ ಇದ್ದೇ ಇರುತ್ತಾರೆ ಎನ್ನುವಂತೆ ನಮ್ಮ ಮತದಾನ ಪ್ರಕ್ರಿಯೆಯು ಕೂಡ ಒಂದರ್ಥದಲ್ಲಿ ಮೋಸಹೋಗುವ ಹಾಗೂ ಮೋಸಗೊಳಿಸುವ ಜನವರ್ಗಗಳ ಮಧ್ಯೆ ದಾಳವಾಗಿ ಬಳಕೆಯಾಗುತ್ತಿದೆ.




ನವಕರ್ನಾಟಕ ಪ್ರಕಾಶನ, ಡಾ॥ ಎ. ವಿ. ಬಾಳಿಗ ಸ್ಮಾರಕ ಆಸ್ಪತ್ರೆ, ರಂಗಭೂಮಿ ಉಡುಪಿ ಇವರ ಸಂಯುಕ್ತ ಆಶ್ರಯದಲ್ಲಿ ಶ್ರೀಮತಿ ನೇಮಿಚಂದ್ರ ಅವರ 'ಬದುಕು ಬದಲಿಸಬಹುದು' ಮಾಲಿಕೆಯ 'ಸಾವೇ, ಬರುವುದಿದ್ದರೆ ನಾಳೆ ಬಾ !' ಮತ್ತು 'ಸೋಲೆಂಬುದು ಅಲ್ಪ ವಿರಾಮ' ಎಂಬ ಎರಡು ಕೃತಿಗಳ ಬಿಡುಗಡೆ ಸಮಾರಂಭವು ೧೫-೦೮-೨೦೧೫ರಂದು ನೂತನ ರವೀಂದ್ರ ಮಂಟಪ, ಎಂ.ಜಿ.ಎಂ. ಕಾಲೇಜು ಆವರಣ, ಉಡುಪಿಯಲ್ಲಿ ಅದ್ದೂರಿಯಾಗಿ ನಡೆಯಿತು. ಶ್ರೀಮತಿ ಕುಸುಮಾ ಕಾಮತ್ (ಪ್ರಾಂಶುಪಾಲರು, ಎಂ.ಜಿ.ಎಂ. ಕಾಲೇಜು) ಅವರು ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಖ್ಯಾತ ಮನೋವೈದ್ಯರಾದ ಡಾ॥ ಪಿ. ವಿ. ಭಂಡಾರಿ ಮತ್ತು ಖ್ಯಾತ ಲೇಖಕಿ ಹಾಗೂ ಆಪ್ತಸಲಹಾಗಾರರಾದ ಶ್ರೀಮತಿ ಶಾಂತಾ ನಾಗರಾಜ್ ಅವರು ಕೃತಿಗಳ ಲೋಕಾರ್ಪಣೆಯನ್ನು ಮಾಡಿದರು.

**ಡಾ॥ ಕೆ. ಮೋಹನ್‌ಕೃಷ್ಣ ರೈ**
ಪ್ರಾಧ್ಯಾಪಕರು, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬, ಬಳ್ಳಾರಿ ಜಿಲ್ಲೆ

# ಬದಲಾದ ಬದುಕಿನಲ್ಲಿ ಹೆಣ್ಣಿನ ಹೆಜ್ಜೆ

ನಮ್ಮ ಬದುಕು ೨೧ನೇ ಶತಮಾನವನ್ನು ಪ್ರವೇಶಿಸಿ ಬದಲಾವಣೆಯ ನಾಗಾಲೋಟದಲ್ಲಿ ಓಡುತ್ತಿದೆ. ಹಿಂದೆ ತಿರುಗಿ ನೋಡಿದರೆ ಊಹಿಸಲೂ ಅಸಾಧ್ಯವಾದ ಬದಲಾವಣೆ ನಡೆದಿದೆ. ಬದುಕಿನ ಎಲ್ಲ ಆಯಾಮಗಳಲ್ಲಿ ನಾಗರಿಕತೆ, ತಾಂತ್ರಿಕತೆ ಎದ್ದು ಕಾಣುತ್ತಿದೆ. ಶಿಕ್ಷಣ ಕ್ಷೇತ್ರದಿಂದ ದೊರೆತ ಅರಿವು, ಮಾಹಿತಿ ತಂತ್ರಜ್ಞಾನದಲ್ಲಾದ ಕ್ರಾಂತಿಕಾರಕ ಬದಲಾವಣೆ ಮಹಿಳೆಯರ ಬದುಕಿನಲ್ಲಿ ಬೆಳಕನ್ನು ನೀಡಿದೆ. ಬದಲಾವಣೆ ಎಂಬುದು ನಿರಂತರವಾಗಿ ನಡೆಯುವ ಪ್ರಕ್ರಿಯೆ. ಯಾವುದು ಇದ್ದಂತೆ ಇರುವುದಿಲ್ಲ. ಇದು ಸರಿಯಾದ ರೀತಿಯಲ್ಲಿ ಅಂದರೆ ಅರ್ಥಪೂರ್ಣವಾಗಿ ಆದರೆ ಅದೇ ಪ್ರಗತಿ ಎನಿಸಿಕೊಳ್ಳುತ್ತದೆ.

ಇಂದಿನ ಮಹಿಳೆ ಪರಿಸ್ಥಿತಿಗೆ ತಕ್ಕಂತೆ ಬದಲಾಗಿ ಉತ್ಸಾಹದಿಂದ ಹೊಸ ಹುರುಪಿನಿಂದ ಈ ಶತಮಾನದ ಹೊಸಿಲು ತುಳಿದು ಹೊಸ ಶತಮಾನದ ಹೊಸ ಬದುಕನ್ನು ತನ್ನದಾಗಿಸಿಕೊಂಡಿದ್ದಾಳೆ. ಪರಾವಲಂಬಿತನ ಹೋಗಲಾಡಿಸಿಕೊಂಡು ಸ್ವಾವಲಂಬಿಯಾಗಿ ಎಲ್ಲ ಕ್ಷೇತ್ರಗಳಲ್ಲೂ ಪುರುಷನೊಂದಿಗೆ ಸರಿಸಮವಾಗಿ ಹೆಜ್ಜೆ ಹಾಕುತ್ತಿದ್ದಾಳೆ. ದೈಹಿಕ ಬಲಾಢ್ಯತೆಗಿಂತ ಮಾನಸಿಕ ಶಕ್ತಿ ಗಳಿಸಿಕೊಂಡು ತನ್ನ ಹಕ್ಕುಗಳಿಗಾಗಿ ಹೋರಾಡುವ ಸ್ಥೈರ್ಯ ಗಳಿಸಿಕೊಂಡಿದ್ದಾಳೆ. ಜಾಗತೀಕರಣದ ಪರಿಣಾಮ ಧಾರ್ಮಿಕ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಮತ್ತು ಕೌಟುಂಬಿಕ ಸನ್ನಿವೇಶಗಳಲ್ಲಿ ಮಹಿಳೆಯರ ಪಾತ್ರ ಗಮನಾರ್ಹವಾಗಿ ಬದಲಾಗಿದೆ. ಅವಳ ಬದುಕಿನಲ್ಲಿ ಇಲ್ಲಿಯವರೆಗೆ ಇದ್ದ ಅನೇಕ ನಿರ್ಬಂಧಗಳು–ನಿಷೇಧಗಳು ಇಲ್ಲವಾಗಿ ನೂರಾರು ಹೊಸ ಅವಕಾಶಗಳು ಅವಳಿಗಾಗಿ ತೆರೆದುಕೊಂಡಿವೆ. ಇದರ ಪರಿಣಾಮವಾಗಿ ಮಹಿಳೆಯ ಬದುಕಿನಲ್ಲಿ ಮೂಲಭೂತ ಬದಲಾವಣೆಗಳಾಗಿವೆ.

ಜಾಗತೀಕರಣದ ಪರಿಣಾಮವಾಗಿ ಪ್ರಪಂಚವೇ ಒಂದು ಘಟಕವಾಗಿ ಪರಿವರ್ತಿತವಾಗಿದೆ. ದೇಶ–ದೇಶಗಳ ನಡುವಣ ಅಂತರ ಕಡಿಮೆಯಾಗಿ, ತಾರತಮ್ಯಗಳು ನಿಧಾನವಾಗಿ ಅಳಿದುಹೋಗುತ್ತಿವೆ. ಪಾಶ್ಚಾತ್ಯ–ಪೌರಸ್ತ್ಯ ದೇಶಗಳಲ್ಲಿ ಅದರಲ್ಲೂ ಭಾರತ ದಂತಹ ಅಭಿವೃದ್ಧಿ ದೇಶಗಳಲ್ಲಿ ಜಾಗತೀಕರಣದ ಪ್ರವೃತ್ತಿ ಬಲಿಷ್ಠವಾಗಿ ಬೆಳೆಯುತ್ತಿದೆ. ಈ ಹಿನ್ನೆಲೆಯಲ್ಲಿ ಇಂದು ಅವಿಭಕ್ತ ಕುಟುಂಬ ಪದ್ಧತಿಯು ಅಪರೂಪವಾಗಿದೆ. ಇದಕ್ಕೆ ನಮ್ಮ ವಿಜ್ಞಾನ, ತಂತ್ರಜ್ಞಾನ, ನಾಗರಿಕತೆ ಎಲ್ಲವೂ ಕಾರಣವಾಗಿದೆ. ಇದು ಮುಂದುವರಿದರೆ ವಿವಾಹ–ದಾಂಪತ್ಯದ ಪರಿಕಲ್ಪನೆಗಳು ಬದಲಾಗಿ ಕೌಟುಂಬಿಕ ಬದುಕು ಸಡಿಲವಾಗುತ್ತದೆ. ನೈತಿಕ ಮೌಲ್ಯಗಳು ಬದಲಾದಂತೆ ಅನೈತಿಕತೆ ಹೆಚ್ಚಾಗಿ ಏಡ್ಸ್‌ನಂತಹ ಮಹಾಮಾರಿ ಜಗತ್ತನ್ನೇ ನುಂಗುತ್ತದೆ. ಅಂಕೆಯಿಲ್ಲದ ಕಾಮುಕತೆಯಿಂದ ಹೆಣ್ಣಿನ ಮೇಲಿನ ದೌರ್ಜನ್ಯ, ಅತ್ಯಾಚಾರಗಳು ಎಲ್ಲೆಡೆ ನಡೆಯುತ್ತಿವೆ. ಇದೆಲ್ಲದರ ನಡುವೆ ಇನ್ನೊಂದು ಗಮನಿಸಬೇಕಾದ ಸಂಗತಿ ಎಂದರೆ ತನ್ನ ಮೇಲಿನ ಅನ್ಯಾಯಗಳನ್ನು ಒಪ್ಪಿಕೊಳ್ಳದೆ ಪ್ರತಿಭಟಿಸುವುದನ್ನು ಕಲಿತಿದ್ದಾಳೆ. ಇದು ಈ ಶತಮಾನದ ಕೊಡುಗೆ ಎಂದೇ ಹೇಳಬೇಕು.




ಇಂದಿರಾ

ಸ್ತ್ರೀ ಸ್ವಾತಂತ್ರ್ಯದ ಪರಿಕಲ್ಪನೆಯೂ ಬದಲಾಗುತ್ತಾ ಬೆಳೆಯುತ್ತಾ ಸಾಗುತ್ತಿದೆ. ಸ್ತ್ರೀ ಸ್ವಾತಂತ್ರ್ಯದ ಬಗೆಗಿನ ಚರ್ಚೆ, ಚಿಂತನೆಗಳು ಇಂದಿನದಲ್ಲ ಮನುವಿನ ಕಾಲದಿಂದಲೇ ನಡೆದಿದೆ. ಇಂದಿನ ಪ್ರಜಾಪ್ರಭುತ್ವ ವ್ಯವಸ್ಥೆ ಸ್ತ್ರೀ ಸ್ವಾತಂತ್ರ್ಯ ಚಿಂತನೆಗೆ ಹೆಚ್ಚಿನ ವೇಗವನ್ನು ಚಾಲನೆಯನ್ನು ನೀಡಿದೆ. ರಾಜಪ್ರಭುತ್ವದಲ್ಲಿ ಸ್ತ್ರೀ ಸ್ವಾತಂತ್ರ್ಯದ ಹರಣದ ಪ್ರಮಾಣ ಹೆಚ್ಚಾಗಿತ್ತು. ಇದು ಯಾವುದೇ ಒಂದು ಧರ್ಮಕ್ಕೆ ಸೀಮಿತವಾಗದೆ ಎಲ್ಲ ಧರ್ಮದ ಸಂಸ್ಕೃತಿಗಳಲ್ಲೂ ನಾವಿದನ್ನು ಕಾಣುತ್ತೇವೆ. ಹೆಣ್ಣು ಒಂದು ಭೋಗ ವಸ್ತುವಿನ ಸ್ಥಾನಕ್ಕೆ ಇಳಿದಳು. ಸಮಾಜ ಹೆಣ್ಣನ್ನು ಶೃಂಗಾರ ಸಾಧನವಾಗಿ ಕಂಡಿತು. ಈ ಕಾಲಘಟ್ಟದಲ್ಲಿ ಹೆಣ್ಣನ್ನು ಸ್ತುತಿಸುವ, ಆರಾಧಿಸುವ, ಜೊತೆ–ಜೊತೆಯಲ್ಲಿ ಶೋಷಿಸುವ ಕೆಲಸವೂ ಸಾಗಿತು. ಈ ಪ್ರವೃತ್ತಿ ಇಂದಿಗೂ ಸಾಗುತ್ತಿರುವುದನ್ನು ಕಾಣಬಹುದು. ಹೆಣ್ಣನ್ನು ವಿಲಾಸದ ಸಾಮಗ್ರಿಯಾಗಿ ಬಳಸಿಕೊಳ್ಳುವ ಹೇಯ ಪ್ರವೃತ್ತಿ ತಗ್ಗಿಲ್ಲ. ಜಗತ್ತಿನಾದ್ಯಂತ ಹಬ್ಬಿರುವ ಕೊಳ್ಳುಬಾಕ ಗ್ರಾಹಕ ಸಂಸ್ಕೃತಿಯಲ್ಲಿ ಹೆಣ್ಣು ಒಂದು ವ್ಯಾಪಾರದ ವಸ್ತುವಾಗಿದ್ದಾಳೆ.

ಇಂದಿನ ವಾಣಿಜ್ಯ ಯುಗದಲ್ಲಿ ಹೆಣ್ಣಿಗೆ ಹೊಸ–ಹೊಸ ಅವಕಾಶಗಳು ದೊರೆತಿವೆ. ಆರ್ಥಿಕ ಕ್ಷೇತ್ರದಲ್ಲಂತೂ ಅವಳ ಮೇಲಿನ ಎಲ್ಲ ನಿರ್ಬಂಧಗಳು ಸಡಿಲವಾಗಿವೆ. ಇದರ ಜೊತೆಯಲ್ಲಿ ಸವಾಲುಗಳು ಎದುರಾಗಿವೆ. ಆಧುನಿಕ ಜೀವನಶೈಲಿಗೆ, ಅದರ ಕಟ್ಟುಪಾಡುಗಳಿಗೆ ಅನಿವಾರ್ಯವಾಗಿ ಹೆಗಲು ಕೊಡಬೇಕಾಗಿದೆ. ಧಾರ್ಮಿಕ–ಮತೀಯ ನಿರ್ಬಂಧಗಳು ಇಂದು ಇಲ್ಲವಾದರೂ ಜಾಗತಿಕತೆಯ ಪರಿಣಾಮ ಹೊಸ ನಾಗರಿಕತೆ ರೂಪುಗೊಳ್ಳುತ್ತಿದೆ. ಇದನ್ನೆ 'ವಿಶ್ವಸಂಸ್ಕೃತಿ' ಎಂತಲೂ ಕರೆಯಬಹುದು. ಇದರಲ್ಲಿ ಪರಸ್ಪರ ಅವಲಂಬಿ ಜೀವನ ವ್ಯವಸ್ಥೆ ಆರಂಭವಾಗಿದೆ. ಹೆಣ್ಣಿನ ಸ್ಥಾನಮಾನಗಳ ಬಗೆಗೆ ಸಮಾನ ಅಭಿಪ್ರಾಯ ಮೂಡತೊಡಗಿದೆ. ಸನಾತನವಾದಿಗಳು ಬದಲಾದ ಮಹಿಳೆಯನ್ನು ಒಪ್ಪಿಕೊಳ್ಳುತ್ತಿದ್ದಾರೆ. ಎಲ್ಲ ಉನ್ನತ ಅಧಿಕಾರ ಸ್ಥಾನಗಳನ್ನು ಹೆಣ್ಣಿನೊಂದಿಗೆ ಹಂಚಿಕೊಳ್ಳುವ ಹಂತವನ್ನು ನಮ್ಮ ಸಮಾಜ ತಲುಪಿದೆ. ಈ ದೃಷ್ಟಿಯಿಂದ ಭಾರತ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲೆ ಮುಂಚೂಣಿಯಲ್ಲಿದೆ ಎನ್ನಬಹುದು. ಆಧುನಿಕ ಮಾಹಿತಿ ತಂತ್ರಜ್ಞಾನದ ಪ್ರಗತಿ ಜಗತ್ತಿನ ನಕಾಶೆಯನ್ನು ಬದಲಿಸುವುದರ ಜೊತೆಗೆ ಮಹಿಳೆಯರ ಪಾಲಿಗೆ ವರದಾನವಾಗಿ ರೂಪುಗೊಂಡಿದೆ.

ಬದಲಾದ ಬದುಕಿನಲ್ಲಿ ಕಾಣುವಂತಹ ಒಳ್ಳೆಯ ಬದಲಾವಣೆ ಮಹಿಳೆಯಲ್ಲಿ ಕಂಡರೂ ಆಂತರ್ಯದಲ್ಲಿ ಅರಗಿಸಿಕೊಳ್ಳಲಾಗದ, ಹೇಳಿಕೊಳ್ಳಲಾಗದ ಒತ್ತಡಗಳಿಗೆ ಇಂದು ಹೆಣ್ಣು ಒಳಗಾಗಿದ್ದಾಳೆ. ಉದ್ಯೋಗದ, ಕೆಲಸದ ಒತ್ತಡದಲ್ಲಿ ಮಹಿಳೆ ಕೌಟುಂಬಿಕ ಸುಖದಿಂದ ವಂಚಿತಳಾಗುತ್ತಿದ್ದಾಳೆ. ಬಹು ಮುಖ್ಯವಾದ ಸಾಂಸ್ಕೃತಿಕ ಬದುಕನ್ನು ಆಕೆ ಕಳೆದುಕೊಳ್ಳುತ್ತಿದ್ದಾಳೆ. ಮಹಾನಗರದ ವೇಗದ ಬದುಕಿನಲ್ಲಿ ಅವಳ ಬದುಕಿನ ಬಹುಪಾಲು ಸಮಯ ಕಛೇರಿ ಮತ್ತು ಪ್ರಯಾಣದಲ್ಲಿ ಕಳೆದುಹೋಗುತ್ತಿದೆ.

ಆಧುನಿಕ ಮಹಿಳೆ ತನಗಿಷ್ಟವಾದ ವೃತ್ತಿಯನ್ನು, ಉದ್ಯೋಗವನ್ನು, ಆರಿಸಿ ಕೊಳ್ಳುವ ದೇಶ, ವಿದೇಶಿಗಳಿಗೆ ಹೋಗುವ ಸ್ವಾತಂತ್ರ್ಯವನ್ನು ಪಡೆದಿದ್ದಾಳೆ. ಇದು ಅವಳ ಪ್ರಗತಿಯ ಒಂದು ಮುಖವಾದರೆ, ಮತ್ತೊಂದೆಡೆ ಉದ್ಯೋಗಿಯಾಗಿ – ಗೃಹಿಣಿಯಾಗಿ ವಹಿಸಬೇಕಾದ ದ್ವಿಪಾತ್ರ ಆಕೆಯ ಬದುಕನ್ನು ಇಬ್ಬಂದಿಯಾಗಿ ಮಾಡುತ್ತಿದೆ. ಕೆಲವೊಂದು ಸಂದರ್ಭಗಳಲ್ಲಿ ಎರಡನ್ನೂ ಹೊಂದಿಸಿಕೊಳ್ಳಲು ಸಾಧ್ಯವಾಗದೆ ಅಸಹಾಯಕಳಾಗುತ್ತಾಳೆ. ಇದೇ ಕಾರಣಗಳಿಗಾಗಿ ಅನೇಕರು ವೃತ್ತಿ ಬದುಕಿನಲ್ಲಿ ವಿಫಲರಾಗುತ್ತಾರೆ. ಒತ್ತಡದ ಕಾರಣದಿಂದ ಆರೋಗ್ಯ ಹಾನಿಮಾಡಿಕೊಂಡು ಬಳಲುತ್ತಾರೆ. ಗರ್ಭಿಣಿ ಸಮಸ್ಯೆ, ಜನನ ಕಾಲದ ಸಮಸ್ಯೆ. ಇವು ದಿನೇ–ದಿನೇ ಹೆಚ್ಚಾಗುತ್ತದೆ. ಇವು ಪ್ರಕೃತಿ ಸಹಜವಾಗಿ ನಡೆಯುತ್ತದೆ ಎನ್ನುವುದಕ್ಕಿಂತ ಅದನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ಬದಲಾಯಿಸುವ ದುರಂತವನ್ನು ತಲುಪಿದ್ದೇವೆ. ಇದು ಹೀಗೆ ಮುಂದುವರಿದರೆ ಭವಿಷ್ಯ ಇನ್ನಷ್ಟು ದುರಂತವಾಗುವುದರಲ್ಲಿ ಯಾವುದೇ ಸಂದೇಹವಿಲ್ಲ.

ಜಗತ್ತು ಬೆಳೆದಂತೆ ಬದುಕಿನ ವಾಸ್ತವಗಳನ್ನು ಒಪ್ಪಿ ಸ್ವೀಕರಿಸುವ ಹಂತವನ್ನು ನಾವು ತಲುಪಿದ್ದೇವೆ. ಇದು ಕೇವಲ ಭಾರತದಲ್ಲಿ ಮಾತ್ರವಲ್ಲ ಎಲ್ಲೆಡೆ ಕಾಣುತ್ತಿರುವ ಸನ್ನಿವೇಶವಾಗಿದೆ. ಲೈಂಗಿಕ ವಿಚಾರಗಳಲ್ಲಿ ಮಾತ್ರ ಭಾರತದಲ್ಲಿ ಇಂದಿಗೂ ಸ್ವಚ್ಛಂದತೆಯನ್ನು ಒಪ್ಪುವುದಿಲ್ಲ. ಏಕೆಂದರೆ ಅದನ್ನು ಪಶು ಪ್ರವೃತ್ತಿ ಎಂದು ನಮ್ಮಲ್ಲಿ ಭಾವಿಸಲಾಗಿದೆ. ಹೀಗಾಗಿ ಭಾರತೀಯ ಸಮಾಜದಲ್ಲಿ ವಿವಾಹ ಸಂಬಂಧಗಳು ಇಂದಿಗೂ ಗಟ್ಟಿಯಾಗಿ ಉಳಿದುಕೊಂಡಿವೆ. ಸಮುದಾಯ ಬದುಕಿಗೆ ಈ ತಳಪಾಯ ಅನಿವಾರ್ಯವಾಗಿದೆ. ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವದಿಂದ ಸ್ವಲ್ಪ ಅಲುಗಿದಂತೆ ಕೆಲವೊಮ್ಮೆ ಭಾಸವಾಗುತ್ತದೆ. ಮುಂದಿನ ದಿನಗಳಲ್ಲಿ ನಮ್ಮ ಶೀಲ–ಚಾರಿತ್ರ್ಯದ ಪರಿಕಲ್ಪನೆಗಳು ಬದಲಾಗಬಹುದು. ಆಗ ಗಂಡು–ಹೆಣ್ಣುಗಳ ಸಂಬಂಧಗಳಲ್ಲೂ ಬದಲಾವಣೆ ಕಾಣುತ್ತದೆ.

ಇಂದು ಅವಿಭಕ್ತ ಕುಟುಂಬ ಪದ್ಧತಿಯು ಅಪರೂಪವಾಗಿದೆ. ಇದಕ್ಕೆ ನಮ್ಮ ವಿಜ್ಞಾನ, ತಂತ್ರಜ್ಞಾನ, ನಾಗರಿಕತೆ ಎಲ್ಲವೂ ಕಾರಣವಾಗಿದೆ. ಇದು ಮುಂದುವರಿದರೆ ವಿವಾಹ–ದಾಂಪತ್ಯದ ಪರಿಕಲ್ಪನೆಗಳು ಬದಲಾಗಿ ಕೌಟುಂಬಿಕ ಬದುಕು ಸಡಿಲ ಷಷಷಷಷವಾಗುತ್ತದೆ. ನೈತಿಕ ಮೌಲ್ಯಗಳು ಬದಲಾದಂತೆ ಅನೈತಿಕತೆ ಹೆಚ್ಚಾಗಿ ಏಡ್ಸ್‌ನಂತಹ ಮಹಾಮಾರಿ ಜಗತ್ತನ್ನೇ ನುಂಗುತ್ತದೆ. ಅಂಕೆಯಿಲ್ಲದ ಕಾಮುಕತೆಯಿಂದ ಹೆಣ್ಣಿನ ಮೇಲಿನ ದೌರ್ಜನ್ಯ, ಅತ್ಯಾಚಾರಗಳು ಎಲ್ಲೆಡೆ ನಡೆಯುತ್ತಿವೆ. ಇದೆಲ್ಲದರ ನಡುವೆ ಇನ್ನೊಂದು ಗಮನಿಸಬೇಕಾದ ಸಂಗತಿ ಎಂದರೆ ತನ್ನ ಮೇಲಿನ ಅನ್ಯಾಯಗಳನ್ನು ಒಪ್ಪಿಕೊಳ್ಳದೆ ಪ್ರತಿಭಟಿಸುವುದನ್ನು ಕಲಿತಿದ್ದಾಳೆ. ಇದು ಈ ಶತಮಾನದ ಕೊಡುಗೆ ಎಂದೇ ಹೇಳಬೇಕು.

ಹೆಣ್ಣಿನ ಬದುಕನ್ನು ಬದಲಾಯಿಸುವಲ್ಲಿ ನಮ್ಮ ದೂರದರ್ಶನ ಒಂದು ವಿಶ್ವವಿದ್ಯಾನಿಲಯದ ಕೆಲಸವನ್ನು ಮಾಡುತ್ತಿದೆ. ಹೆಣ್ಣನ್ನು ಮುಕ್ತ ಜೀವನಶೈಲಿಗೆ ಈ ಮಾಧ್ಯಮ ಸಿದ್ಧಮಾಡಿದೆ. ಇದರ ಪರಿಣಾಮ ಮುಂದಿನ ದಿನಗಳಲ್ಲಿ ಈ ಮಾಧ್ಯಮ ಸಮಾಜದ ಸ್ವಾಸ್ಥ್ಯಕ್ಕೆ ಪೂರಕವಾಗುವುದರ ಬದಲು ಮಾರಕವಾಗಿ ಪರಿಣಮಿಸಲಿದೆ. ಒಟ್ಟಿನಲ್ಲಿ ಇಂದಿನ ಮಹಿಳೆ ಹಿಂದಿನ–ಇಂದಿನ ಬದುಕಿನ ನಡುವೆ ಹೊಸದೊಂದು ದಾರಿಯನ್ನು ಹುಡುಕುವ ಅನಿವಾರ್ಯತೆಯ ಹಂತದಲ್ಲಿದ್ದಾಳೆ.

ಇಂದಿರಾ
'ಸಿರಿ', ಬಂಜಾರ ಬಡಾವಣೆಯ ಒಳಗೆ, ಓಂ ಶಕ್ತಿ ದೇವಾಲಯದ ಹಿಂಭಾಗ
ಹೊರಮಾವು ಅಂಚೆ, ಬೆಂಗಳೂರು – ೫೬೦ ೦೪೩

## ಚಿತ್ತಾರ

ಏನೆಂದು ಚಿತ್ತಾರವು ಮೂಡಿತೊ ನನ್ನ ಎದೆಯಲ್ಲಿ
ಬಿದಿರೆ ಚಂದ್ರನ ಅಣಕಿಸುವ ಬಿಂಕ ಅದರಲ್ಲಿ !

ನೋವು–ನಲಿವಿನ ಹಾಡು ಮೂಡಿತು ರೇಖೆಗಳಲ್ಲಿ
ಮನಬಂದಂತೆ ನವಿರಾಗಿ ಹಾಡಿ ಹರದಾಡಿ ಮೂಡಿವೆ ಹೊಸ ರೂಪದಲ್ಲಿ !

ತಿರುಗುವ ಭೂಮಿಯ ನೆಲವ ಮಾಡಿ ಆಡುವ ಆಟದಲ್ಲಿ
ಬದುಕು ಮಾಯೆ ಗಾಳಿಯಂತೆ ಸದಾ ಬಿರುಗಾಳಿಯೇ ಅದರ ಸುಳಿಯಲ್ಲಿ !

ಎಲ್ಲಿಯೋ ನಡೆದ ಘಟನೆಯ ಮರೆಯಲ್ಲಿ
ಎಲ್ಲವೂ ಮರೆಯುವ ತಹತಹದ ಮರೀಚಿಕೆಯಲ್ಲಿ
ಚಿತ್ತಾರದ ಸೊಬಗು ಬಯಸುವವರಾರು ?
ಅದು ಎಣ್ಣೆ ಸುರಿದ ಸ್ಥಳದಲ್ಲಿ
ಚೆಲ್ಲಿದ ನೀರಿನ ಅಸ್ಪಷ್ಟ ಬುಗ್ಗೆಗಳ ಕೊಲ್ಲಿ !

ವೇಣು ಜಾಲಿಬೆಂಚಿ
ಕವಿ ಹಾಗೂ ನ್ಯಾಯವಾದಿಗಳು
ಕೇರಾಫ್ : ಮ. ಸಂ. ಎಲ್.ಐ.ಜಿ.–೨, ೨೪೯
ಕೆ.ಹೆಚ್.ಬಿ. ಕಾಲೋನಿ ಯರಮರಸ್ ಕ್ಯಾಂಪ್, ರಾಯಚೂರು – ೫೮೪ ೧೩೫




**ಬೆಳಗ್ಗೆ ಮತ್ತು ಸಂಜೆ ಟ್ಯೂಷನ್ನಿಗೆ ಹೋಗಿ, ಮಧ್ಯದಲ್ಲಿ ಕಾಲೇಜಿಗೂ ಹೋಗಿ ಬರುವ ಮಗನ ಓಡಾಟ ಸುಮ್ಮನಾದೀತೇ...? ಒಂದು ಬಡಾವಣೆಯಲ್ಲಿ ಫಿಸಿಕ್ಸ್, ಮತ್ತೊಂದು ಬಡಾವಣೆಯಲ್ಲಿ ಮಾಥ್ಸ್ ಟ್ಯೂಷನ್; ಮನೆ ಮಗದೊಂದು ಬಡಾವಣೆ !! ಕನಿಷ್ಠ ದಿನಕ್ಕೆ ಐವತ್ತು ಕಿಲೋಮೀಟರುಗಳ ಪ್ರಯಾಣ !! ಸೈಕಲ್ಲಿನಲ್ಲಿ ಇದು ಸಾಧ್ಯವೇ ? ಊಹುಂ ಇಲ್ಲ ! ಅದಕ್ಕೆ ಪರಿಹಾರವೆಂದರೆ ಮಗನಿಗೊಂದು ಸ್ಕೂಟರ್ ಕೊಡಿಸುವುದು. ಸ್ಕೂಟರ್ ಎಂದಿದ್ದಕ್ಕೆ ಮುಖ ಕಿವಿಚಿಕೊಂಡು, ಎರಡು ದಿನ ಉಪವಾಸ ಸತ್ಯಾಗ್ರಹ ಹಿಡಿದ ಮಗನಿಗೆ ವಿಶ್ವ ಮೋಟಾರು ಸೈಕಲ್ ಕೊಡಿಸಬೇಕಾಯಿತು ! ಅದಕ್ಕೇನೋ ಲೋನ್ ತೆಗೆದುಕೊಂಡು ಕೊಡಿಸಿದ್ದಾಯಿತು. ಮುಂದಿನ ವರ್ಷ ತನಗೆ ಯಾವ ವಾಹನ ಕೊಡಿಸುತ್ತೀರಿ ಎಂದು ಕೇಳಿದ ಪಿಂಕಿಯ ಪ್ರಶ್ನೆಗೆ ವಿಶ್ವ ಒಳಗೊಳಗೇ ಬೆವರಿ, "ಇನ್ನೂ ಒಂದು ವರ್ಷ ಇದೆಯಲ್ಲ ಆಗ ನೋಡೋಣ" ಎಂದು ಹಾರಿಕೆಯ ಉತ್ತರ ಕೊಟ್ಟಿದ್ದ. "ಅಂತಿಂತಾದ್ದು ಕೊಡಿಸಿದರೆ ನಾನು ಸುಮ್ಮನಿರುವುದಿಲ್ಲ" ಎಂದು ಉಗ್ರ ಸಂದೇಶವನ್ನು ಆಗಲೇ ಮುಟ್ಟಿಸಿದ್ದಳು ಪಿಂಕಿ. ತಮ್ಮ ಎರಡು ಕರುಳಬಳ್ಳಿಗಳ ಬೆದರಿಕೆಗಳ ಜೊತೆಗೇ ಜೀವಿಸುವುದನ್ನು ಕಲಿತರು ದಂಪತಿಗಳು.**

# ಟ್ಯೂಷನ್ ! ಕಾಷನ್ !!

**● ಎಸ್. ಜಿ. ಶಿವಶಂಕರ್**

ನಮ್ಮ ದೇಶದ ತಂದೆ-ತಾಯಿಯರಿಗೆ ತಮ್ಮ ಮಕ್ಕಳು ಇಂಜಿನಿಯರ್ ಇಲ್ಲವೇ ಡಾಕ್ಟರ್ ಆಗಲಿ ಎಂದೇ ಬಯಸುವುದು ಮತ್ತು ಅದಕ್ಕೆ ಪೂರಕವಾದ ಓದು ಮಾತ್ರ ಅವರ ಗಮನದಲ್ಲಿರುತ್ತದೆ ಉಳಿದೆಲ್ಲಾ ಓದು ಅವರಿಗೆ ಕಸಕ್ಕೆ ಸಮಾನ. ಬುದ್ಧಿವಂತ ಮಕ್ಕಳೆಂದರೆ ಇವನ್ನೇ ಓದಬೇಕು, ಇವನ್ನು ಓದದ ಮಕ್ಕಳು ದಡ್ಡರು ಎಂದೇ ನಮ್ಮ ಸಮಾಜ ತಿಳಿಯುವುದು ! ಬೇರೆ ಇನ್ಯಾವುದೇ ಓದಾಗಲಿ, ವೃತ್ತಿಯಾಗಲಿ ಪೋಷಕರ ಗೌರವಕ್ಕೆ ಪಾತ್ರವಾಗುವುದಿಲ್ಲ.

ವಿಶ್ವ ಮತ್ತು ವಿಶಾಲೂ ದಂಪತಿಗಳು ಇದಕ್ಕೆ ಹೊರತಲ್ಲ. ತಮ್ಮ ಇಬ್ಬರು ಮಕ್ಕಳು, ಪಿಂಕಿ ಮತ್ತು ಪವನ ಇಂಜಿನಿಯರ್ ತಪ್ಪಿದರೆ ಡಾಕ್ಟರ್ ಆಗಬೇಕು ಎಂದು ಆಶಿಸಿದ್ದರು. ಅದಕ್ಕೆ ತಕ್ಕ ತಯಾರಿಯನ್ನು ಚಿಕ್ಕಂದಿನಿಂದಲೇ ಪ್ರಾರಂಭಿಸಿದ್ದರು. ಮಕ್ಕಳಿಬ್ಬರಿಗೆ ಆಟವಾಡಲು ಸಮಯವೇ ಸಿಗದಂತಹ ಟೈಟ್ ಪರಿಸ್ಥಿತಿ ! ಶಾಲೆಯಲ್ಲಿ ಕೊಡುವ ಹೋಮ್‌ವರ್ಕ್ ಮತ್ತು ಅಸೈನ್ಮೆಂಟುಗಳನ್ನು ಮುಗಿಸುವುದಕ್ಕೆ ಸಮಯವೇ ಸಾಲುತ್ತಿರಲಿಲ್ಲ. ತಾವೂ ಸಹ ಮಕ್ಕಳ ಜೊತೆಯಲ್ಲಿ ಕೂತು ಕಡ್ಡಾಯವಾಗಿ ಹೋಮ್‌ವರ್ಕುಗಳನ್ನು ಮಾಡಿಸುತ್ತಿದ್ದರು. ಇವೆಲ್ಲಾ ಮಾಡುವಾಗ ದಂಪತಿಗಳಿಗೆ ಎರಡನೆಯ ಸಲ ಶಾಲೆಯಲ್ಲಿ ಓದುತ್ತಿದ್ದಂತೆ ಭಾಸವಾಗುತ್ತಿತ್ತು. ಟಿ.ವಿ. ನೋಡಲು ಮಕ್ಕಳಿಗಿರಲಿ, ಅವರಿಗೇ ಸಮಯ ದೊರೆಯುತ್ತಿರಲಿಲ್ಲ !

ಕಾಲ ಸುಮ್ಮನಿರುತ್ತದೆಯೇ...? ನಾಗಾಲೋಟದಲ್ಲಿ ಓಡುತ್ತದೆ. ದೊಡ್ಡವ ಪವನ ಎಸ್.ಎಸ್.ಎಲ್.ಸಿ. ಮುಗಿಸಿ ಕಾಲೇಜು ಮೆಟ್ಟಿಲು ಹತ್ತಲು ಸಿದ್ಧನಾದ. ಪ್ರತಿಷ್ಠಿತ ಕಾಲೇಜೊಂದರಲ್ಲಿ ಅವನಿಗೆ ಸೀಟು ದೊರಕಿಸಿಕೊಳ್ಳಲು ವಿಶಾಲೂ ಮತ್ತು ವಿಶ್ವ ಅದುವರೆಗೆ ಕಂಡಿರದಿದ್ದವರನ್ನು ಕಂಡು, ಗೋಗರೆದು, ಅವರು ಹೇಳಿದ ಸಮಯಕ್ಕೆ ತಪ್ಪದೆ ಮತ್ತೆ ಮತ್ತೆ ಹೋಗಿ ಶಿಫಾರಸು ಪತ್ರ ಪಡೆದು ಕೊನೆಗೆ ಪ್ರವೇಶ ಸಿಕ್ಕಾಗ ಧನ್ಯವಾದೆವು ಎಂದುಕೊಂಡರು. ಪಿ.ಯು.ಸಿ. ಎಂಬ ಮಹಾ ಓದಿಗೆ ಪವನನನ್ನು ಯಶಸ್ವಿಯಾಗಿ ಸೇರಿಸಿದರು ದಂಪತಿಗಳು.

ಪವನನನ್ನು ಸೇರಿಸಿದ ಕಾಲೇಜಿನ ಪ್ರವರ್ತಕ ಒಬ್ಬ ಮಹಾನ್ ವ್ಯವಹಾರ ನಿಪುಣ. ಈಗಾಗಲೇ ಹಾಲಿ ಇದ್ದ ಹತ್ತಾರು ವ್ಯಾಪಾರಗಳ ಜೊತೆಗೆ ಕಾಲೇಜನ್ನು ಸಹ ಪ್ರಾರಂಭಿಸಿದ್ದ. ನಮ್ಮ ರಾಜ್ಯದಲ್ಲಿ ಪಿ.ಯು.ಸಿ. ಕಾಲೇಜನ್ನು ಜೂನಿಯರ್ ಕಾಲೇಜು ಎಂದು ಕರೆಯುತ್ತಾರೆ. ಜ್ಯೂನಿಯರ್ ಕಾಲೇಜಿನಲ್ಲಿ ಡೈಮಂಡ್ ಗಣಿಯಲ್ಲಿ ತೆಗೆದಷ್ಟೇ ಹಣ ತೆಗೆಯಬಹುದು ಎಂಬುದನ್ನು ಅವನು ಸರಿಯಾಗಿಯೇ ಊಹಿಸಿದ್ದ. ಅದಕ್ಕೆ ತಕ್ಕಂತೆ ಕಾಲೇಜನ್ನು ಕಟ್ಟಿಸಿದ್ದ. ಕಾಲೇಜು ಯಾವುದೇ ಮಲ್ಟಿನ್ಯಾಷನಲ್ ಕಂಪೆನಿಯ ಕಾರ್ಪೊರೇಟ್ ಆಫೀಸಿಗೂ ಕಡಿಮೆಯಿಲ್ಲವೆನಿಸುವಷ್ಟು ವೈಭವಪೂರ್ಣವಾಗಿತ್ತು. ಮಧ್ಯಮ ವರ್ಗದ ಜನರ ಸಂಪಾದನೆ ಮತ್ತು ಮನಃಸ್ಥಿತಿಯನ್ನು ಚೆನ್ನಾಗಿ ಅರಿತಿದ್ದ ಆತ ! ಕಾಲೇಜಿನಲ್ಲಿ ಅಬ್ಬಾ ! ಎನಿಸುವಂತಹ ಅನುಕೂಲಗಳನ್ನೂ ಕಲ್ಪಿಸಿದ್ದ. ಅದನ್ನು ಡೇ ಬೋರ್ಡಿಂಗ್ ಕಾಲೇಜು ಎಂದು ಘೋಷಿಸಿದ್ದ. ಬೆಳಿಗ್ಗೆ ಎಂಟಕ್ಕೆ ಮಕ್ಕಳು ಬಂದರೆ ಸಂಜೆ ಆರರ ಮೇಲೆಯೇ ಅವರನ್ನು ಬಿಡುಗಡೆ ಮಾಡುತ್ತಿದ್ದುದು. ಬೆಳಗಿನ ಉಪಾಹಾರ, ಮಧ್ಯಾಹ್ನದ ಭೋಜನ, ಸಂಜೆಯ ಸ್ನ್ಯಾಕ್ಸ್ ಮತ್ತು ಟೀ ಎಲ್ಲದಕ್ಕೂ ಕಾಲೇಜಿನಲ್ಲಿಯೇ ವ್ಯವಸ್ಥೆ ಮಾಡಿದ್ದ. ಬೆಳಗ್ಗೆ ಮಕ್ಕಳಿಗೆ ಯೋಗ, ಆಟೋಟ ಎಲ್ಲಾ ಮುಗಿದ ನಂತರ ಉಪಾಹಾರ. ಪಠ್ಯಗಳು ಮುಗಿದ ನಂತರ ಸಂಜೆ ಈಜು, ಭರತನಾಟ್ಯ ಮುಂತಾದುವಕ್ಕೆ ಅವಕಾಶ. ಇಂಥ ಕಾಲೇಜಿನಲ್ಲಿ ಫೀಸು ಎಷ್ಟಿರಬಹುದು ಎಂಬುದು

ನಿಮ್ಮ ಊಹೆಗೆ ಬಿಟ್ಟದ್ದು. ಪವನನಿಗೆ ಪ್ರವೇಶ ಸಿಕ್ಕಿದ್ದು ಇಂಥ ಕಾಲೇಜಿನಲ್ಲೇ !

ಪಿ.ಯು.ಸಿ.ಯ ಓದು ನಮ್ಮ ದೇಶದಲ್ಲಿ ಒಂದು ವಿಸ್ಮಯಕರ ಓದು. ಇದರಲ್ಲಿ ಗಳಿಸುವ ಅಂಕದ ಮೇಲೆಯೇ ಮಕ್ಕಳಿಗೆ ಇಂಜಿನಿಯರಿಂಗ್ ಇಲ್ಲವೇ ಮೆಡಿಕಲ್ ಸೀಟು ದೊರಕುವುದು. ಇದರ ಜೊತೆಗೆ ಸಿ.ಇ.ಟಿ. ಎನ್ನುವ ಇನ್ನೊಂದು ಪಿ.ಯು.ಸಿ.ಯ ನಂತರದ ಪರೀಕ್ಷೆ ಇದೆ. ಅದರ ಬಗೆಗೆ ಈಗ ಬರೆಯಹೊರಟರೆ ಇನ್ನೊಂದು ಪ್ರಬಂಧವೇ ಆಗುತ್ತದೆ. ಸದ್ಯಕ್ಕೆ ಅದನ್ನು ಬಿಟ್ಟು ಬರಿಯ ಪಿ.ಯು.ಸಿ.ಯ ಬಗೆಗೆ ಮಾತ್ರ ನೋಡೋಣ. ಪಿ.ಯು.ಸಿ. ಓದು ಒಂದು ಯುದ್ಧದಂತೆ ! ಯುದ್ಧಕ್ಕೆ ಮಾಡುವ ತಯಾರಿಗಿಂತ ಇದಕ್ಕೆ ಹೆಚ್ಚಿನ ತಯಾರಿ ಬೇಕಾಗುತ್ತದೆ.

ಪಿ.ಯು.ಸಿ.ಗೆ ಮಕ್ಕಳು ಕಾಲೇಜು ಸೇರುತ್ತಿದ್ದಂತೆ ಜೊತೆ ಜೊತೆಗೇ ಅವರಿಗೆ ಟ್ಯೂಷನ್ ಪ್ರಾರಂಭ ವಾಗುತ್ತದೆ. ಈ ಟ್ಯೂಷನ್ ಕಾಲೇಜಿಗೆ ಹೊರತಾದದ್ದು. ಕಾಲೇಜಿನಲ್ಲಿ ಪಾಠ ಮಾಡುವ ಲೆಕ್ಚರರುಗಳೇ ಈ ಟ್ಯೂಷನ್ ವೈರಸುಗಳು. ಇದೊಂದು ಪಿಡುಗು ! ಸಾಂಕ್ರಾಮಿಕ ರೋಗವಿದ್ದಂತೆ ! ಪಿ.ಯು.ಸಿ. ಸೇರುವ ಬಹುತೇಕ ಮಕ್ಕಳು ಈ ಟ್ಯೂಷನ್ ವೈರಸ್ಸಿನ ಸೋಂಕಿಗೆ ಒಳಗಾಗುತ್ತಾರೆ. ಇದಕ್ಕಾಗಿ ಪೋಷಕರು ಒಂದೊಂದು ವಿಷಯಕ್ಕೂ ಹತ್ತಿಪ್ಪತ್ತು ಸಾವಿರ ಕಕ್ಕಬೇಕಾಗುತ್ತದೆ.

ಟ್ಯೂಷನ್ ಸೂರ್ಯೋದಯಕ್ಕೆ ಮುಂಚೆಯೇ ಶುರುವಾಗಿ ಕಾಲೇಜು ಪ್ರಾರಂಭವಾಗಲು ಇನ್ನೊಂದರ್ಧ ಗಂಟೆ ಇದೆ ಎನ್ನುವಾಗ ಮುಗಿಯುತ್ತದೆ. ಒಂದೊಂದು ಗಂಟೆಗೆ ಒಂದೊಂದು ಬ್ಯಾಚು ಶುರುವಾಗುತ್ತದೆ. ಒಂದೊಂದು ಬ್ಯಾಚಿನಲ್ಲಿ ಕನಿಷ್ಠ ಇಪ್ಪತ್ತರಿಂದ ಮೂವತ್ತು ವಿದ್ಯಾರ್ಥಿಗಳಿರುತ್ತಾರೆ. ಬೆಳಗ್ಗೆ ಐದು ಗಂಟೆಗೇ ಒಂದು ಬ್ಯಾಚು ಶುರುವಾಗಿಬಿಡುತ್ತದೆ. ಸರಿಸುಮಾರು ಒಂಬತ್ತು ಗಂಟೆಗೆ ಬೆಳಗಿನ ಕೊನೆಯ ಬ್ಯಾಚು ಮುಗಿಯುತ್ತದೆ. ಅಲ್ಲಿಗೆ ಬೆಳಗ್ಗೆ ನಾಲ್ಕು ಬ್ಯಾಚುಗಳಲ್ಲಿ ಸರಿಸುಮಾರು ನೂರಿಪ್ಪತ್ತು ವಿದ್ಯಾರ್ಥಿ ಗಳಿಗೆ ಹೆಚ್ಚಿಗೆ ಮಾರ್ಕ್ಸ್ ಪಡೆಯಲು ಏನೇನು ಮಾಡಬೇಕು ಎಂಬ ಬಗೆಗೆ ತಾಲೀಮು ನಡೆಯುತ್ತದೆ. ಇದಾದ ನಂತರದ ಬ್ಯಾಚುಗಳು ಸಂಜೆ ಐದರ ಮೇಲೆ ಪ್ರಾರಂಭವಾಗಿ ರಾತ್ರಿ ಒಂಬತ್ತರಿಂದ ಹತ್ತರವರೆಗೆ ನಡೆಯುತ್ತವೆ. ಒಬ್ಬೊಬ್ಬ ವಿದ್ಯಾರ್ಥಿ ಸರಾಸರಿ ಹತ್ತು ಸಾವಿರ ಸಂದಾಯ ಮಾಡುತ್ತಾನೆಂದರೂ ಅಂದಾಜು ಇನ್ನೂರು ಜನರ ಒಟ್ಟು ಆದಾಯ ಎಷ್ಟೆಂಬುದು ನಿಮ್ಮ ಲೆಕ್ಕಾಚಾರಕ್ಕೆ ಬಿಟ್ಟಿದ್ದೇನೆ ! ಈ ಸಂಪಾದನೆಗೆ ಇನ್‌ಕಮ್‌ಟ್ಯಾಕ್ಸ್ ಮುಂತಾದ ಯಾವುದೇ ಉಸಾಬರಿ ಇಲ್ಲ. ಇದು ಕೃಷ್ಣನ ಲೆಕ್ಕದಂತೆ !! ಕೆಲವು ಟ್ಯೂಷನ್ ಲೆಕ್ಚರರುಗಳು ಈ ಅಪಾರ ಹಣ ಕರಗಿಸಲು ವರ್ಷಕ್ಕೆ ಒಂದುಬಾರಿ ವಿದೇಶ ಪ್ರವಾಸ ಕೈಗೊಳ್ಳುತ್ತಾರಂತೆ !! ಹೀಗೆ ಬರೆದದ್ದಕ್ಕೆ ನನಗೆ ಅವರುಗಳ ಮೇಲೆ ಹೊಟ್ಟೆಕಿಚ್ಚು ಎಂದು ಖಂಡಿತವಾಗಿಯೂ ಭಾವಿಸಬೇಡಿ.

ಇಂಥ ಪ್ರೈವೇಟ್ ಟ್ಯೂಷನ್ ಮಾಡುವ ಅಧ್ಯಾಪಕರು ಕಾಲೇಜುಗಳಲ್ಲಿ ಸರಿಯಾಗಿ ಬೋಧಿಸುವುದಿಲ್ಲ ಎಂಬ ಅಪವಾದಗಳಿವೆ. ಸಹಜವೇ. ಸುಮಾರು ಎಂಟು ತಾಸು ಮನೆಯಲ್ಲಿ ಪಾಠ ಮಾಡಿದರೆ ಕಾಲೇಜಿನಲ್ಲೂ ಮಾಡಲು ಸಾಧ್ಯವೇ...? ಪಾಪ ಅವರೇನು ಸೂಪರ್‌ಮ್ಯಾನುಗಳೇ ?!! ಜೊತೆಗೆ ಕಾಲೇಜಿನಲ್ಲಿ ಪಾಠ ಕೇಳುವ ವಿದ್ಯಾರ್ಥಿಗಳು ಎಲ್ಲಿರುತ್ತಾರೆ...? ಅವರೆಲ್ಲರೂ ಮನೆ ಪಾಠಕ್ಕೇ ಹೋಗುವುದರಿಂದ ಕಾಲೇಜಿನಲ್ಲಿ ಮತ್ತೆ ಪಾಠ ಮಾಡುವುದು ವ್ಯರ್ಥವಲ್ಲವೆ...? ಇದೇ ಕಾರಣಕ್ಕೆ ಕಾಲೇಜುಗಳಲ್ಲಿ ನಡೆಯುವುದು ಕಾಟಾಚಾರದ ವ್ಯವಹಾರ ಎಂಬ ಅಪವಾದವೂ ಇದೆ !! ಆದರೂ ಫೀಸು ಮತ್ತು ಡೊನೇಷನ್ನು ಮಾತ್ರ ಅಬ್ಬಬ್ಬಾ ಎನ್ನುವಷ್ಟು !!

ವಿಶ್ವನ ಮಗ ಪವನ ಒಂದು ಹೈಟೆಕ್ ಕಾಲೇಜಿನಲ್ಲೇ ಓದಬೇಕೆಂದು ಹಠ ಹಿಡಿದಿದ್ದ ! ಕಾರಣ ಪಿ.ಯು.ಸಿ. ಫಲಿತಾಂಶ ಆ ಕಾಲೇಜಿನಲ್ಲಿ ನೂರಕ್ಕೆ ನೂರರಷ್ಟು, ಜೊತೆಗೆ ಸರಾಸರಿ ಮೂವತ್ತು ರ‍್ಯಾಂಕುಗಳು ಆ ಕಾಲೇಜಿಗೇ ಬರುತ್ತಿದ್ದವು. ಇದರ ಪರಿಣಾಮ ವಿಶ್ವನ ಬ್ಯಾಂಕು ಖಾತೆ ಲಕ್ಷ ರೂಪಾಯಿಯಷ್ಟು ಬಡವಾಯಿತು. ಒಂದಿಷ್ಟು ಸಾಲವೂ ಆಯಿತೆನ್ನಿ.

ಕಾಲೇಜು ಸೇರಿಸಿದ ತಕ್ಷಣವೇ ತಂದೆಯಾಗಿ ಮೊದಲು ಮಾಡಬೇಕಾಗಿದ್ದ ಆದ್ಯ ಕರ್ತವ್ಯವೆಂದರೆ ಟ್ಯೂಷನ್ನಿಗೆ ಲೆಕ್ಚರರ್‌ಗಳನ್ನು ಬುಕ್ ಮಾಡುವುದು ಎಂದು ಅವನಿಗೆ ಗೊತ್ತಾಗಿತ್ತು ! ಎರಡನೆಯ ವರ್ಷದ ಪಿ.ಯು.ಸಿ. ಪರೀಕ್ಷೆಗೆ ಮೊದಲನೆಯ ವರ್ಷದ ಮೊದಲ ತಿಂಗಳೇ ಟ್ಯೂಷನ್ನಿಗೆ ಲೆಕ್ಚರರುಗಳನ್ನು ಬುಕ್‌ಮಾಡಿ ಅಡ್ವಾನ್ಸು ನೀಡಿ ಹೆಸರು ಬರೆಸಬೇಕು. ಲೇಟಾದರೆ ಯಾರಲ್ಲಿಯೂ ಅವಕಾಶ ಸಿಗುವುದಿಲ್ಲ. ಈ ಎಲ್ಲ ಜ್ಞಾನವನ್ನೂ ವಿಶ್ವನ ಹಿರಿಯ ಮಿತ್ರರು, ಸಹೋದ್ಯೋಗಿ ಗಳು ಆಗಲೇ ನೀಡಿದ್ದರಿಂದ ವಿಶ್ವ ತಡಮಾಡದೆ ಮಗನಿಗೆ ಅವಕಾಶ ಮಾಡಿಕೊಡಲು ಮುಂದಾದ !

ಮೊದಲಿಗೆ ಟ್ಯೂಷನ್ ಹೇಳಿಕೊಡುವ ಲೆಕ್ಚರರುಗಳ ಒಂದು ಪಟ್ಟಿಯನ್ನು ತಯಾರಿಸಿದ, ಅದೂ ಸಬ್ಜೆಕ್ಟುಗಳ ಮೇರೆಗೆ. ಎರಡು ವಿಷಯಗಳಿಗೆ ತನಗೆ ಟ್ಯೂಷನ್ನು ಸಾಕೆಂದು ಪವನ ಹೇಳಿ ಅಪ್ಪನ ಕೆಲಸ ಕಡಿಮೆ ಮಾಡಿದ್ದ. ಜೊತೆಗೆ ಲಿಸ್ಟು ತಯಾರಿಸಲು ಪವನ ಮತ್ತು ವಿಶ್ವನ ಸಹೋದ್ಯೋಗಿಗಳು ಸಹಾಯ ಮಾಡಿದರು. ಅವರ ಸಲಹೆ ಮತ್ತು ಮಾಹಿತಿಯ ಮೇಲೆ ಪಟ್ಟಿ ತಯಾರಾಯಿತು. ರ‍್ಯಾಂಕುಗಳನ್ನು ಗಳಿಸಿದ ವಿದ್ಯಾರ್ಥಿಗಳು ಹೋಗುತ್ತಿದ್ದ ಲೆಕ್ಚರರುಗಳನ್ನು 'ಎ' ಪಟ್ಟಿಗೂ, ಎಂಬತ್ತು ಪರ್ಸೆಂಟ್ ತೆಗೆದ ವಿದ್ಯಾರ್ಥಿಗಳಿಗೆ ಟ್ಯೂಷನ್ ಹೇಳುತ್ತಿದ್ದ ಲೆಕ್ಚರರುಗಳನ್ನು 'ಬಿ' ಪಟ್ಟಿಗೂ ಸೇರಿಸಿದ. ಅವರುಗಳ ಫೀಸಿನ ಮಾಹಿತಿ, ಅವರು ನಡೆಸುವ ಬ್ಯಾಚುಗಳನ್ನು ಕೂಡ ಪಟ್ಟಿ ಮಾಡಿ ಕೊನೆಗೆ ಅವುಗಳಲ್ಲಿ ಕೆಲವರನ್ನು ಆಯ್ಕೆ ಮಾಡಿ ಸಂಪರ್ಕಿಸುವ ಯೋಜನೆ ಹಾಕಿಕೊಂಡು ಪಟ್ಟಿಯಲ್ಲಿದ್ದ ಮೊದಲನೆಯ ಲೆಕ್ಚರರ್ 'ಜೆಬಿ' ಎನ್ನುವವರಿಗೆ ಫೋನಾಯಿಸಿದ. ಸಾಮಾನ್ಯವಾಗಿ ಟ್ಯೂಷನ್ ಹೇಳಿಕೊಡುವ ಲೆಕ್ಚರರು ಗಳನ್ನು ಅವರವರ ಇನಿಷಿಯಲ್ ಮೂಲಕ ಕರೆಯುತ್ತಾರೆ. ಅದಕ್ಕೆ ಕಾರಣ ಖಂಡಿತ ಆದಾಯ ತೆರಿಗೆ ಇಲಾಖೆಯ ಗಮನದಿಂದ ಬಚಾವಾಗುವುದಲ್ಲ. ಬೇರೇನು ಕಾರಣವೋ ವಿಶ್ವನಿಗೆ ಗೊತ್ತಾಗಲಿಲ್ಲ.

"ಎಸ್.ಎಸ್.ಎಲ್.ಸಿ.ಯಲ್ಲಿ ಎಷ್ಟು ಮಾರ್ಕ್ಸ್ ತೆಗೆದಿದ್ದಾನೆ ?" ಇದು ಜೆಬಿಯವರು ವಿಶ್ವನಿಗೆ ಕೇಳಿದ ಮೊದಲ ಮತ್ತು ಕೊನೆಯ ಪ್ರಶ್ನೆ !

"ಎಂಬತ್ತು ಪರ್ಸೆಂಟ್."

"ಸಾರಿ, ತೊಂಬತ್ತಕ್ಕಿಂತ ಮೇಲೆ ತೆಗೆದವರಿಗೆ ಮಾತ್ರ ನನ್ನ ಹತ್ರ ಪ್ರವೇಶ" ಎಂದು ಹೇಳಿ ವಿಶ್ವ ಉತ್ತರಿಸುವ ಮುಂಚೆಯೇ ಫೋನು ಕುಕ್ಕಿದ್ದ ! ವಿಶ್ವ ಸ್ತಂಭೀಭೂತನಾಗಿದ್ದ !! ಏನಾಗಿದೆ ಎಂದು ತಿಳಿಯಲು ಕೆಲವು ಕ್ಷಣಗಳೇ ಹಿಡಿದವು.

"ರೀ... ಏನಾಯ್ತು...? ಏನಾಯ್ತು ?" ವಿಶಾಲೂ ಗಾಬರಿಯಿಂದ ಕೇಳುತ್ತಿದ್ದಳು !

ವಿಶ್ವ ಸಾವರಿಸಿಕೊಂಡು ಪತ್ನಿಗೆ ನಡೆದದ್ದನ್ನು ಹೇಳಿದ. ಇನ್ನು 'ಬಿ' ಪಟ್ಟಿಯಲ್ಲಿನ ಲೆಕ್ಚರರುಗಳಿಗೆ ಫೋನಾಯಿಸುವುದೇ ಉಳಿದಿದ್ದ ದಾರಿಯೆನಿಸಿತು. 'ಬಿ' ಪಟ್ಟಿಯ 'ಜಿಕೆ'ಗೆ ಫೋನ್ ಮಾಡಿದ. ಪುಣ್ಯಕ್ಕೆ 'ಜಿಕೆ' ಮಾರನೆಯ ದಿನ ಮಗ, ಮಡದಿಯೊಂದಿಗೆ ಬರ ಬೇಕೆಂದರು. ಮಗನೇನೋ ಸರಿ, ಮಡದಿಯನ್ನೇಕೆ ಕರೆದೊಯ್ಯಬೇಕು ? ಅದು ವಿಶ್ವನಿಗೆ ಅರ್ಥವಾಗಲಿಲ್ಲ. ಹೇಗೋ ಮಗನನ್ನು ಟ್ಯೂಷನ್ನಿಗೆ ಸೇರಿಸಿದರಾಯಿತು ಎಂದು ಸುಮ್ಮನಾದ ವಿಶ್ವ.

'ಜಿಕೆ' ಹೇಳಿದ ದಿನಾಂಕ ಮತ್ತು ಸಮಯದಲ್ಲಿ ವಿಶ್ವ ಅವರ ಮನೆಗೆ ಮಗ ಮತ್ತು ಹೆಂಡತಿಯ ಜೊತೆಗೆ ಹೋದ. ವಿಶ್ವನಿಗೆ ಟ್ಯೂಷನ್ ಫೀಸು ಕೊಡುವ ಶಕ್ತಿ ಇದೆಯೋ ಎನ್ನುವುದನ್ನೂ, ವಿಶಾಲೂಗೆ ಟ್ಯೂಷನ್ನಿಗೆ ಹೋಗುವ ಮಗನಿಗೆ ಹೊತ್ತಿಗೆ ಸರಿಯಾಗಿ ತಿಂಡಿ, ತೀರ್ಥ ಮಾಡಿಕೊಡಲು ಸಾಧ್ಯವಿದೆಯೇ ಎಂಬುದನ್ನು ಖಾತ್ರಿ ಮಾಡಿಕೊಂಡ ನಂತರ ಪವನನಿಗೆ ಒಂದು ಸಬ್ಜೆಕ್ಟ್‌ಗೆ ಟ್ಯೂಷನ್ ಗಟ್ಟಿಯಾಯಿತು. ತಡಮಾಡದೆ ಇನ್ನೊಂದು ಸಬ್ಜೆಕ್ಟಿಗೂ ಟ್ಯೂಷನ್ನಿಗೆ ಸೇರಿಸಿ ಮಗ ರ‍್ಯಾಂಕ್ ಗಳಿಸುವನೆಂದು ಮನಸ್ಸಿನಲ್ಲಿಯೇ ಮಂಡಿಗೆ ತಿಂದರು ವಿಶ್ವ ಮತ್ತು ವಿಶಾಲೂ.

ಪವನನಿಗಿಂತ ಒಂದೂವರೆ ವರ್ಷ ಕಿರಿಯವಳಾದ ಪಿಂಕಿ ಮುಂದಿನ ವರ್ಷವೇ ಎಸ್.ಎಸ್.ಎಲ್.ಸಿ. ಮುಗಿಸುವುದರ ಅರಿವಿದ್ದ ದಂಪತಿಗಳು ಅತಿ

ಎಚ್ಚರಿಕೆಯಿಂದ ಸಮಾಜದಲ್ಲಿ ವ್ಯವಹರಿಸ ತೊಡಗಿದರು. ಯಾರ ಸಹಾಯ ಯಾವಾಗ ಬೇಕಾಗುವುದು ಎಂದು ತಿಳಿಯುವುದಿಲ್ಲ ಎಂಬ ಅನುಭವ ಈಗಾಗಲೇ ಅವರಿಗಾಗಿತ್ತು.

ಬೆಳಗ್ಗೆ ಮತ್ತು ಸಂಜೆ ಟ್ಯೂಷನ್ನಿಗೆ ಹೋಗಿ, ಮಧ್ಯದಲ್ಲಿ ಕಾಲೇಜಿಗೂ ಹೋಗಿಬರುವ ಮಗನ ಓಡಾಟ ಸುಮ್ಮನಾದೀತೇ...? ಒಂದು ಬಡಾವಣೆಯಲ್ಲಿ ಫಿಸಿಕ್ಸ್, ಮತ್ತೊಂದು ಬಡಾವಣೆಯಲ್ಲಿ ಮಾಥ್ಸ್ ಟ್ಯೂಷನ್; ಮನೆ ಮಗದೊಂದು ಬಡಾವಣೆ !! ಕನಿಷ್ಠ ದಿನಕ್ಕೆ ಐವತ್ತು ಕಿಲೋಮೀಟರುಗಳ ಪ್ರಯಾಣ !! ಸೈಕಲ್ಲಿನಲ್ಲಿ ಇದು ಸಾಧ್ಯವೇ ? ಊಹುಂ ಇಲ್ಲ ! ಅದಕ್ಕೆ ಪರಿಹಾರವೆಂದರೆ ಮಗನಿಗೊಂದು ಸ್ಕೂಟರ್ ಕೊಡಿಸುವುದು. ಸ್ಕೂಟರ್ ಎಂದಿದ್ದಕ್ಕೆ ಮುಖ ಕಿವಿಚಿಕೊಂಡು, ಎರಡು ದಿನ ಉಪವಾಸ ಸತ್ಯಾಗ್ರಹ ಹಿಡಿದ ಮಗನಿಗೆ ವಿಶ್ವ ಮೋಟಾರು ಸೈಕಲ್ ಕೊಡಿಸಬೇಕಾಯಿತು ! ಅದಕ್ಕೇನೋ ಲೋನ್ ತೆಗೆದು ಕೊಂಡು ಕೊಡಿಸಿದ್ದಾಯಿತು. ಮುಂದಿನ ವರ್ಷ ತನಗೆ ಯಾವ ವಾಹನ ಕೊಡಿಸುತ್ತೀರಿ ಎಂದು ಕೇಳಿದ ಪಿಂಕಿಯ ಪ್ರಶ್ನೆಗೆ ವಿಶ್ವ ಒಳಗೊಳಗೇ ಬೆವರಿ, "ಇನ್ನೂ ಒಂದು ವರ್ಷವಿದೆಯಲ್ಲ ಆಗ ನೋಡೋಣ" ಎಂದು ಹಾರಿಕೆಯ ಉತ್ತರ ಕೊಟ್ಟಿದ್ದ. "ಅಂತಿಂತಾದ್ದು ಕೊಡಿಸಿದರೆ ನಾನು ಸುಮ್ಮನಿರುವುದಿಲ್ಲ" ಎಂದು ಉಗ್ರ ಸಂದೇಶವನ್ನು ಆಗಲೇ ಮುಟ್ಟಿಸಿದ್ದಳು ಪಿಂಕಿ. ತಮ್ಮ ಎರಡು ಕರುಳಬಳ್ಳಿಗಳ ಬೆದರಿಕೆಗಳ ಜೊತೆಗೇ ಜೀವಿಸುವುದನ್ನು ಕಲಿತರು ದಂಪತಿಗಳು.

ವಿಶ್ವ ತನ್ನ ವಿದ್ಯಾಭ್ಯಾಸದ ದಿನಗಳನ್ನು ನೆನಪಿಸಿಕೊಂಡು ಈಗಿನ ಕಾಲಕ್ಕೆ ತುಲನೆ ಮಾಡಿ ವ್ಯಾಕುಲಗೊಂಡ. ವಿಶ್ವ ಯಾವ ಟ್ಯೂಷನ್ನಿಗೂ ಓದದೆ ಇಂಜಿನಿಯರಿಂಗಿಗೆ ಬೇಕಾಗುವಷ್ಟು ಅಂಕ ಗಳಿಸಿ ಇಂಜಿನಿಯರ್ ಆಗಿದ್ದ ; ಪ್ರಸಿದ್ಧ ಕಾರ್ಖಾನೆಯೊಂದರಲ್ಲಿ ಇಂಜಿನಿಯರ್ ಆಗಿದ್ದ. ಆಗಿನ ಅವನ ಇಂಜಿನಿಯರಿಂಗ್ ಕಾಲೇಜು ಫೀಸು ಆರುನೂರರಷ್ಟಿತ್ತು. ಈಗ ಹೈಸ್ಕೂಲಿಗೇ ಆರುನೂರು ತೆರಬೇಕು. ಡೊನೇಶನ್ ಎನ್ನುವ ಪದವನ್ನೇ ಅವನು ಕೇಳಿರಲಿಲ್ಲ. ಈಗ ಇಂಜಿನಿಯರಿಂಗ್ ಫೀಸು ಸುಮಾರು ಲಕ್ಷದ ಹತ್ತಿರ ಎಂಬ ಆತಂಕಕಾರಿ ವಿಷಯ ಬೇರೆ ಅವನ ಕಿವಿಗೆ ಬಿದ್ದಿತ್ತು. ಅದು ಅವನನ್ನು ಇನ್ನಷ್ಟು ದಿಗಿಲಿಗೆ ಹಚ್ಚಿತ್ತು. ಅದಕ್ಕೊಂದು ಪರಿಹಾರವೂ ಇದೆ ಎಂಬ ವಿಷಯವನ್ನು ಅವನ ಸ್ನೇಹಿತರು ತಿಳಿಸಿದ್ದು ಸ್ವಲ್ಪ ಸಮಾಧಾನಕ್ಕೆ ಕಾರಣವಾಯಿತು. ಬ್ಯಾಂಕುಗಳು ಇಂಜಿನಿಯರಿಂಗ್ ಮತ್ತು ಮೆಡಿಕಲ್ ಓದುಗಳಿಗೆ ಸುಲಭವಾಗಿ ಸಾಲ ನೀಡುತ್ತಾರೆ ಎಂದು ಸ್ನೇಹಿತರು ಹೇಳಿದ್ದರು.

ಪವನನ ಮಹತ್ತರವಾದ ಪಿ.ಯು.ಸಿ. ಓದಿನ ಒಂದು ದಿನ ವಿಶ್ವ ಎಂದಿನಂತೆ ಫ್ಯಾಕ್ಟರಿಗೆಂದು ಹೊರಡುವಾಗ ಕಂಡ ಒಂದು ದೃಶ್ಯ ಅವನನ್ನು ರೆಫ್ರಿಜರೇಟರಿನಲ್ಲಿಟ್ಟ ಐಸಿನಂತೆ ಫ್ರೀಜ್ ಮಾಡಿಬಿಟ್ಟಿತು ! ಪವನ ಟ್ಯೂಷನ್ನಿಗೆ ಹೊರಟಿದ್ದ. ಅದೂ ಬೆಳಗಿನ ಆರೂವರೆ ಸಮಯ. ಸರ್ವಶಸ್ತ್ರಭರಿತನಾಗಿ ಹೊರಟಿದ್ದ ಪವನ. ಅಂದರೆ ಕ್ಯಾಲುಕ್ಯುಲೇಟರ್, ಬ್ಯಾಕ್‌ಪ್ಯಾಕು, ಅದರಲ್ಲೊಂದು ನೀರಿನ ಬಾಟಲು, ಜರ್ಕಿನ್, ತಲೆಗೆ ಉಲ್ಲನ್ ಟೋಪಿ, ಕಾಲಿಗೆ ಶೂಸ್ – ಹೀಗೆ ಸಾಲಂಕೃತನಾಗಿ ಹೊರಟಿದ್ದ. ಅವನು ಬಹಳ ಆತುರದಲ್ಲಿದ್ದ. ಟ್ಯೂಷನ್ನಿಗೆ ತಡವಾಗುತ್ತಿತ್ತು !

"ಹೋಗ್ಬೇಡ ಪವ್ವಿ, ಒಂದ್ನಿಮಿಷ ಕಣೋ ಆಗೋಯ್ತು ..."

ಒಳಗಿಂದ ವಿಶಾಲೂ ಕೂಗುತ್ತಿದ್ದುದು ಕೇಳಿಸಿತು.

"ಇಲ್ಲಾಮ್ಮಾ, ನನಗೆ ಟೈಮಾಗುತ್ತೆ..." ಪವನ ಕೂಗಿ ತಾಯಿಗೆ ಹೇಳುತ್ತಿದ್ದ.

"ಪ್ಲೀಸ್ ಪವ್ವಿ , ಇನ್ನೊಂದೇ ನಿಮಿಷ ಕಣೋ..." ವಿಶಾಲೂ ಗೋಗರೆಯುತ್ತಿದ್ದಳು.

ಅವರ ಸಂಭಾಷಣೆಯಿಂದ ಅದು ಬೆಳಗಿನ ಉಪಾಹಾರಕ್ಕೆ ಸಂಬಂಧಿಸಿದ್ದು ಎಂದು ವಿಶ್ವನಿಗೆ ಅರಿವಾಯಿತು.

ಈ ಮಾತುಗಳ ನಡುವೆಯೇ ಹೊಗೆಯಾಡುತ್ತಿದ್ದ ಉಪ್ಪಿಟ್ಟನ್ನು ವಿಶಾಲೂ ಓಡೋಡುತ್ತಾ ತಂದಳು.

"ನಂಗೆ ಲೇಟಾಗುತ್ತೇಂತ ಎಷ್ಟು ಸಲ ಹೇಳ್ಲಿ ಮಮ್ಮಿ..."

"ತಂದಿದ್ದೀನಲ್ಲೋ... ತಿನ್ನು... ಮತ್ತೆ ಬರೋ ಹೊತ್ತಿಗೆ ಒಂಬತ್ತಾಗಿರುತ್ತೆ. ಆಗ್ಲೂ ನಿಂಗೆ ತಿನ್ನೋಕೆ ಟೈಮಿರೊಲ್ಲ..."

ವಿಶಾಲೂ ಅಲವತ್ತುಗೊಂಡಳು.

"ಪ್ಲೀಸ್ ಮಮ್ಮಿ, ಇಷ್ಟು ಬಿಸಿಯಾಗಿದ್ದನ್ನ ನಾನು ಹೇಗ್ತಿನ್ಲೀ ಹೇಳು..."

"ಒಂದೆರಡು ತುತ್ತು ತಿನ್ನೋ..."

ಚಿಕ್ಕ ಮಕ್ಕಳಿಗೆ ತಿನ್ನಿಸುವಂತೆ ವಿಶಾಲೂ ತನ್ನ ಕೈಯಾರೆ ಪವನನ ಬಾಯಿಗೆ ಉಪ್ಪಿಟ್ಟನ್ನು ತುರುಕಿದಳು.

ಚಿಕ್ಕ ಮಕ್ಕಳಂತೆ ಕೊಸರಾಡುತ್ತಾ ಪವನ ಉಪ್ಪಿಟ್ಟನ್ನು ಮನಸ್ಸಿಲ್ಲದ ಮನಸ್ಸಿನಿಂದ ತಿನ್ನತೊಡಗಿದ್ದ.

"ಇದೇನೇ ಇದು...? ಅವನೇನು ಇನ್ನೂ ಮಗೂನಾ...?" ವಿಶ್ವ ತನ್ನ ಕಣ್ಣನ್ನು ತಾನೇ ನಂಬಲಾರದೆ ಕೇಳಿದ.

"ನೋಡ್ರೀ... ಟ್ಯೂಷನ್ನು, ಕಾಲೇಜಿನ ಓಡಾಟದಲ್ಲಿ ಹೇಗಾಗಿದ್ದಾನೆ...? ಕಡ್ಡಿ ಪೈಲ್ವಾನ್ ಆಗಿದ್ದಾನೆ. ತಿಂಡಿ, ಊಟಕ್ಕೂ ಟೈಮಿಲ್ಲದ ಹಾಗಾಗಿದೆ. ಇನ್ನೇನು ಮಾಡೋದು...? ಹೀಗೆ ತಿನ್ನಿಸದಿದ್ರೆ ಆ ದರಿದ್ರ ನೂಡಲ್ಸೂ , ಗೋಬಿ ತಿಂದು ಹೊಟ್ಟೆ ಕೆಡಿಸ್ಕೋತಾನೆ, ಅಷ್ಟೆ."

ಸಹಜ ಕಕ್ಕುಲತೆಯಿಂದ ವಿಶಾಲೂ ನುಡಿದಳು.

"ನೋಡಿ ಡ್ಯಾಡ್, ಟೈಮಿಲ್ಲಾಂದ್ರೂ ಮಮ್ಮಿ ಹೇಗೆ ಬಲವಂತ ಮಾಡ್ತಿದ್ದಾರೆ...?"

ತುತ್ತಿನ ನಡುವೆ ಪವನ ಆಕ್ಷೇಪಿಸಿದ.

ಬದಲಾದ ಕಾಲದ ರೀತಿಗೆ ವಿಸ್ಮಯಗೊಂಡ ವಿಶ್ವ! ತನ್ನ ಅನುಭವವನ್ನು ಕುರಿತು ಒಂದು ಮಾರ್ಗದರ್ಶಿಯನ್ನು ಬರೆದರೆ ಅದು ಪೋಷಕರಿಗೆ ಅನುಕೂಲವಾಗಬಹುದು, ಜೊತೆಗೆ ಪವನನ ಟ್ಯೂಷನ್ನಿನ ಖರ್ಚಾದರೂ ಹುಟ್ಟಬಹುದು ಎಂಬ ಯೋಚನೆಯೊಂದಿಗೆ ಸ್ನಾನದ ಗೃಹಕ್ಕೆ ತೆರಳಿದ.



**ಎಸ್. ಜಿ. ಶಿವಶಂಕರ್**
ನಂ. ೫೧೭೭, 'ಶಿವಲತ'
ಹೆಚ್. ಟಿ. ಜೋಡಿ ರಸ್ತೆ
ವಿಜಯನಗರ ೨ನೇ ಹಂತ
ಮೈಸೂರು – ೫೭೦ ೦೧೭



## ಅರವಿಂದ ಮಳೆಬೆನ್ನೂರ ನಿಧನ

ಬಳ್ಳಾರಿಯ ಖ್ಯಾತ ನ್ಯಾಯವಾದಿಗಳೂ, ಹಟ್ಟಿಚಿನ್ನದ ಗಣಿ, ದೋಣಿಮಲೈ ಎನ್.ಎಂ.ಡಿ.ಸಿ.ಯ ಕಾರ್ಮಿಕ ಸಂಘಗಳ ನಾಯಕರೂ, ಭಾರತ ಕಮ್ಯುನಿಸ್ಟ್ ಪಕ್ಷದ ಹಿರಿಯ ಮುಖಂಡರೂ ಆಗಿದ್ದ ಅರವಿಂದ ಮಳೆಬೆನ್ನೂರ ದಿ. ೧೭.೮.೨೦೧೫ರಂದು ನಿಧನರಾಗಿದ್ದಾರೆ.

ವಿದ್ಯಾರ್ಥಿ ಜೀವನದಲ್ಲಿಯೇ ೧೯೪೨ರಲ್ಲಿ 'ಭಾರತ ಬಿಟ್ಟು ತೊಲಗಿ' ಚಳುವಳಿಯಲ್ಲಿ ಭಾಗವಹಿಸಿದ್ದ ಅರವಿಂದ ಮಳೆಬೆನ್ನೂರ ಅವರು ಅಖಿಲ ಭಾರತ ವಿದ್ಯಾರ್ಥಿ ಫೆಡರೇಶನ್ ಮೂಲಕ ತಮ್ಮ ಚಳುವಳಿಯ ಬದುಕನ್ನು ಆರಂಭಿಸಿದವರು. ಇವರ ತಂದೆ ಸತ್ಯವಂತರಾವ್ ಮಳೆಬೆನ್ನೂರ ಅವರೂ ಅಂದಿನ ಕಾಂಗ್ರೆಸ್ ಚಳುವಳಿಯ ನಿಷ್ಠಾವಂತ ಹೋರಾಟಗಾರರು, ಗಾಂಧೀಜಿಯವರಿಗೆ ಆಪ್ತರೂ ಆಗಿದ್ದವರು. ಅರವಿಂದ ಮಳೆಬೆನ್ನೂರ ಅವರು ಕರ್ನಾಟಕ ಹಾಗೂ ಆಂಧ್ರಪ್ರದೇಶದ ಕಮ್ಯುನಿಸ್ಟ್ ಪಕ್ಷದ ಚಳುವಳಿಗಳಲ್ಲಿ ಭೂಗತರಾಗಿ ಕೆಲಸ ಮಾಡಿದವರು. ಬದುಕಿನ ಕೊನೆಯ ಉಸಿರಿರುವವರೆಗೂ ಕಾರ್ಮಿಕ ವರ್ಗದ ಹಕ್ಕುಗಳಿಗಾಗಿ ಹೋರಾಡಿದವರು ಅರವಿಂದ ಮಳೆಬೆನ್ನೂರ ಅವರು. ಅವರ ನಿಧನದಿಂದ ದುಃಖಿತರಾದ ಕುಟುಂಬ, ಅಪಾರ ಕಾರ್ಮಿಕ ಬಂಧುಗಳ ನೋವಿನಲ್ಲಿ 'ಹೊಸತು' ಬಳಗ ಭಾಗಿಯಾಗಿದೆ.







**ಅವನು ಮಧು ಸಾವು**

**(ಬಿಡಿ ದ್ವಿಪದಿಗಳು)**

ಎಚ್. ಎಸ್. ಮುಕ್ತಾಯಕ್ಕ

**ಪುಟ : ೯೪**

**ಬೆಲೆ : ರೂ. ೧೦೦**

**ಸಂಕ್ರಮಣ ಪ್ರಕಾಶನ**

ನಂ. ೧೫, ಜ್ಯೋತಿ ಲೇ ಔಟ್
೨ನೇ ಮೇನ್
ಯಲಚೇನಹಳ್ಳಿ
ಜೆ. ಪಿ. ನಗರ, ಬೆಂಗಳೂರು – ೫೬೦ ೦೭೮

*ಎಂಬತ್ತರ ದಶಕದಲ್ಲಿ ಲಖನೌದಲ್ಲಿ ನಾಲ್ಕು ವರ್ಷಗಳ ಕಾಲ ಇದ್ದಾಗ ನನ್ನನ್ನು ಬಹಳವಾಗಿ ಆಕರ್ಷಿಸಿದ ವಿಷಯವೆಂದರೆ ಅಲ್ಲಿನ ನವಾಬರ 'ಲಖನೌವಿ' (ಹಿಂದಿ–ಉರ್ದು ಮಿಶ್ರಿತ) ಭಾಷೆ. ಬಹಳಷ್ಟು ಜನರು ಕುಳಿತರೆ ಒಂದು, ನಿಂತರೆ ಒಂದು ಶಾಯರಿ, ಗಝಲ್ ಹೇಳುತ್ತಿದ್ದರು. ಹೈದ್ರಾಬಾದ್ ಪ್ರಾಂತ್ಯದಲ್ಲಿ ನವಾಬರು ಅದೇ ಭಾಷೆಯನ್ನು 'ದಖ್ಖನಿ' ಎಂದು ಕರೆದರು. ಅದರ ವ್ಯಾಮೋಹಕ್ಕೆ ಸಿಲುಕಿದ ಶಾಂತರಸ ಅವರು ಕನ್ನಡದಲ್ಲಿ ಗಝಲ್‌ಗಳನ್ನು ರಚಿಸಿದವರಲ್ಲಿ ಮೊದಲಿಗರು. ಅವರ ಜಾಡಿನಲ್ಲಿ ಹೆಜ್ಜೆ ಹಾಕುತ್ತಿರುವ ಅವರ ಮಗಳು ಮುಕ್ತಾಯಕ್ಕ ಕನ್ನಡದಲ್ಲಿ ಮೊದಲಿಗೆ ಬಿಡಿ ದ್ವಿಪದಿಗಳನ್ನು ರಚಿಸಿದ್ದಾರೆ. 'ಇವು ಅಂತ್ಯ ಪ್ರಾಸವಿರುವ, ಪ್ರಾಸವಿಲ್ಲದಿರುವ ಬಿಡಿ ದ್ವಿಪದಿಗಳು. ಇವು ಬಿಡಿಬಿಡಿಯಾಗಿ ತನ್ನಷ್ಟಕ್ಕೆ ತಾನು ಅರ್ಥವುಳ್ಳ ಒಂದು ಸ್ವತಂತ್ರ ಘಟಕವಾಗಿರುತ್ತವೆ. ಎರಡೇ ಸಾಲುಗಳು ಮನ ಮಿಡಿಯುವಂತೆ ಹೃದಯದಾಳಕ್ಕೆ ಇಳಿಯುವಂತೆ ಇರಬೇಕು. ಇಂಥ ಒಂದು ಪ್ರಯತ್ನವನ್ನು ನಾನಿಲ್ಲಿ ಮಾಡಿದ್ದೇನೆ' ಎಂದಿದ್ದಾರೆ ಮುಕ್ತಾಯಕ್ಕ. ಈ ಕೃತಿಯಲ್ಲಿ ಎರಡು ಸಾಲುಗಳ ೫೦೦ ದ್ವಿಪದಿಗಳಿದ್ದು, ಅವುಗಳನ್ನೆಲ್ಲ ಓದಿ ಮುಗಿಸಿದಾಗ ಸ್ವಲ್ಪ ಅಚ್ಚರಿ ಮೂಡುತ್ತದೆ. ಮಹಿಳೆಯರು ಗಝಲ್ ಬರೆದಿರುವುದು ಅಪರೂಪ. ಇದು ಕನ್ನಡದಲ್ಲಿ ಮೊದಲ ಪ್ರಯತ್ನ ಎನ್ನುವುದು ಇನ್ನೂ ವಿಶೇಷ. 'ಅವನು ಮಧು ಸಾವು'ನಲ್ಲೂ ಬಹುತೇಕ ದ್ವಿಪದಿಗಳು ಅದೇ ವಿಷಯಗಳ ಕುರಿತಾಗಿವೆ.*

– ***ಡಾ॥ ಎಂ. ವೆಂಕಟಸ್ವಾಮಿ,*** *ಬೆಂಗಳೂರು*




**ಮೇಕ್ ಇನ್ ಇಂಡಿಯ – ಒಂದು ವಿಮರ್ಶೆ**

*ಸಿ. ಮುರಳಿಧರ, ಎಂ. ಸತ್ಯಾನಂದ*

**ಪುಟ : ೫೨** **ಬೆಲೆ : ರೂ. ೨೦**

**ಭಾರತ ಕಮ್ಯುನಿಸ್ಟ್ ಪಕ್ಷ,** ಬೆಂಗಳೂರು ಜಿಲ್ಲಾ ಮಂಡಳಿ

*ಭಾರತದಲ್ಲಿ ೧೯೯೦ರ ದಶಕದ ಮುಂಚಿನ ಅವಧಿಯಲ್ಲಿ ಅಧಿಕಾರದಲ್ಲಿದ್ದ ಸರ್ಕಾರಗಳು ಬಂಡವಾಳಶಾಹಿ ಚೌಕಟ್ಟಿನಲ್ಲಿಯೇ ತಮ್ಮ ಆರ್ಥಿಕ, ರಾಜಕೀಯ ಇತ್ಯಾದಿ ನೀತಿಗಳನ್ನು ರೂಪಿಸುತ್ತಿದ್ದರೂ ದೇಶದ ಸಾರ್ವಭೌಮತ್ವ, ಸ್ವಾವಲಂಬನೆ, ಸ್ವತಂತ್ರ ವಿದೇಶಾಂಗ ನೀತಿ ಇವುಗಳಿಗೆ ಪ್ರಾಶಸ್ತ್ಯ ನೀಡಿದ್ದವು. ಈ ನಿಟ್ಟಿನಲ್ಲಿ ಪಂಚವಾರ್ಷಿಕ ಯೋಜನೆಗಳು, ಸಾರ್ವಜನಿಕ ವಲಯದಲ್ಲಿ ಸ್ಥಾಪಿಸಿದ ಉದ್ಯಮಗಳು, ಅಲಿಪ್ತ ನೀತಿ ಇವು ಕೆಲವು ಉದಾಹರಣೆಗಳು ಮಾತ್ರ. ಆದರೆ ೧೯೯೦ರ ದಶಕದ ಪ್ರಾರಂಭದಲ್ಲಿ ಪ್ರಧಾನಿ ನರಸಿಂಹರಾವ್, ಮನಮೋಹನ್ ಸಿಂಗ್ ಮತ್ತು ಚಿದಂಬರಂ ಅವರ ನೇತೃತ್ವದಲ್ಲಿ ಜಾರಿಗೆ ಬಂದ ಜಾಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣ ನೀತಿಗಳಿಂದಾಗಿ ಭಾರತ ಕ್ರಮೇಣ ಅಮೆರಿಕನ್ ಸಾಮ್ರಾಜ್ಯಶಾಹಿಯ ಅಡಿಯಾಳಾಗುವತ್ತ ದಾಪುಗಾಲು ಹಾಕುತ್ತಿದೆ. ಅದರಲ್ಲೂ ಮುಖ್ಯವಾಗಿ ೨೦೧೪ರಲ್ಲಿ ಬಿಜೆಪಿ ನೇತೃತ್ವದ ಎನ್‌ಡಿಎ ಸರ್ಕಾರ ಅಧಿಕಾರಕ್ಕೆ ಬಂದ ನಂತರ ದೇಶದ ಆರ್ಥಿಕ ನೀತಿಗಳು ವಿಶ್ವ ಬ್ಯಾಂಕ್, ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆ, ವಿದೇಶಿ ಬಂಡವಳಿಗರು ಮತ್ತು ಕಾರ್ಪೊರೇಟ್ ಸಂಸ್ಥೆಗಳ ಆಣತಿಯಂತೆ ನಿರೂಪಿಸಲ್ಪಡುತ್ತಿವೆ. ಈ ಪ್ರಕ್ರಿಯೆಯಲ್ಲಿ ದೇಶಿ ಬಂಡವಳಿಗರ ಪಾತ್ರವೂ ಕಡಿಮೆಯೇನಿಲ್ಲ. ಅದರ ಮುಂದುವರಿಕೆಯೇ ಮೋದಿ ಪ್ರಣೀತ ಭೂಸ್ವಾಧೀನ ಕಾಯ್ದೆ, ಕಾರ್ಮಿಕ ಕಾನೂನುಗಳಿಗೆ ತರಲಿರುವ ತಿದ್ದುಪಡಿಗಳು, ಎಸ್.ಇ.ಜಡ್ ಕಾಯ್ದೆ ಮತ್ತು ದಿನೇ ದಿನೇ ಇತಿಮಿತಿಯಿಲ್ಲದ ಪ್ರಚಾರ ಪಡೆಯುತ್ತಿರುವ 'ಮೇಕ್ ಇನ್ ಇಂಡಿಯ' ಯೋಜನೆ. ಈ ಯೋಜನೆ ಅಭಿವೃದ್ಧಿಯ ಹೆಸರಿನಲ್ಲಿ ನಮ್ಮ ನೆಲದ ಎಲ್ಲ ಸಂಪನ್ಮೂಲಗಳನ್ನು ವಿದೇಶಿ ಬಂಡವಳಿಗರಿಗೆ, ಬೃಹತ್ ಕಾರ್ಪೊರೇಟ್ ಕಂಪನಿಗಳಿಗೆ ಒಪ್ಪಿಸಿ ದೇಶವನ್ನು ಇನ್ನಷ್ಟು ದಾರಿದ್ರ್ಯಕ್ಕೆ ಗುರಿಯಾಗಿಸುವ ವಂಚನೆಯಷ್ಟೆ. ಮಾಧ್ಯಮಗಳಂತೂ ಈ ಯೋಜನೆ ಭಾರತದ ಭವಿಷ್ಯವನ್ನು ಉಜ್ವಲಗೊಳಿಸುತ್ತದೆ, 'ಅಚ್ಚೆ ದಿನ್'ಗಳು ನನಸಾಗುವ ಕಾಲ ದೂರವಿಲ್ಲ ಎಂದೆಲ್ಲಾ ಇನ್ನಿಲ್ಲದ ವ್ಯಾಪಕ ಪ್ರಚಾರ ನೀಡಿ ಜನತೆಯನ್ನು ತಪ್ಪುದಾರಿಗೆಳೆಯಲು ಪ್ರಯತ್ನಿಸುತ್ತಿವೆ. ಇಂದು ದೇಶದ ಅಭಿವೃದ್ಧಿಗೆ, ಜನಸಾಮಾನ್ಯರ ಏಳಿಗೆಗೆ, ಅಗತ್ಯವಿರುವುದು 'ಮೇಡ್ ಇನ್ ಇಂಡಿಯ' ಯೋಜನೆಯೇ ಹೊರತು ಜನವಿರೋಧಿ 'ಮೇಕ್ ಇನ್ ಇಂಡಿಯ' ಅಲ್ಲ ಎಂಬುದನ್ನು ವೈಜ್ಞಾನಿಕವಾಗಿ ಅಂಕಿಅಂಶಗಳೊಂದಿಗೆ ವಿವರಿಸುವ ಹಾಗೂ 'ಮೇಕ್ ಇನ್ ಇಂಡಿಯ' ಯೋಜನೆಯ ಪೊಳ್ಳುತನವನ್ನು ಜನತೆಗೆ ತಿಳಿಯಪಡಿಸುವ ತುರ್ತು ಅಗತ್ಯವನ್ನು ಮನಗಂಡು ಭಾರತ ಕಮ್ಯುನಿಸ್ಟ್ ಪಕ್ಷ, ಬೆಂಗಳೂರು ಜಿಲ್ಲಾ ಮಂಡಳಿ 'ಮೇಕ್ ಇನ್ ಇಂಡಿಯ – ಒಂದು ವಿಮರ್ಶೆ' ಎಂಬ ಕಿರುಹೊತ್ತಗೆಯನ್ನು ಹೊರತಂದಿರುವುದು ಸಂದರ್ಭೋಚಿತವಾಗಿದೆ. ಈ ಯೋಜನೆ ದೇಶವನ್ನು ವಿದೇಶಿ ಬಂಡವಾಳಕ್ಕೆ ಒತ್ತೆ ಇಡುತ್ತದೆ ಎಂಬುದರಲ್ಲಿ ಯಾವ ಸಂಶಯವೂ ಇಲ್ಲ. ಇದರಿಂದಾಗಿ ಸಂಭವಿಸಲಿರುವ ನಿರುದ್ಯೋಗ, ಆರ್ಥಿಕ ಮತ್ತು ಸಾಮಾಜಿಕ ಅಸಮಾನತೆ, ಶ್ರಮಿಕರ ಗುಲಾಮೀಕರಣ, ಪರಿಸರ ನಾಶ ಇವೇ ಮುಂತಾದ ಸಮಸ್ಯೆಗಳನ್ನು ಆಧಾರಸಹಿತ ವಿಮರ್ಶಿಸಿ ಜನತೆಯನ್ನು ಎಚ್ಚರಿಸುವಲ್ಲಿ, ಅಂತೆಯೇ ಈ ಯೋಜನೆಗೆ ಪರ್ಯಾಯ ನೀತಿಗಳನ್ನು ಪ್ರತಿಪಾದಿಸುವಲ್ಲಿ ತಮ್ಮ ಪಕ್ಷ ನೀಡಿದ ಜವಾಬ್ದಾರಿಯನ್ನು ಸಮರ್ಥವಾಗಿ ನಿರ್ವಹಿಸಿದ್ದಾರೆ. ಈ ಹೊತ್ತಗೆಯ ಲೇಖಕರಾದ ಸಿ. ಮುರಳಿಧರ ಮತ್ತು ಎಂ. ಸತ್ಯಾನಂದ. ಡಾ॥ ಜಿ. ರಾಮಕೃಷ್ಣ ಅವರು ತಮ್ಮ ಮುನ್ನುಡಿಯಲ್ಲಿ ಕೃತಿಯ ಪ್ರಸ್ತುತತೆಯ ಕುರಿತು ಹೇಳಿರುವ ಮಾತುಗಳು ಅರ್ಥಪೂರ್ಣವಾಗಿವೆ. ಮೋದಿ ಸರ್ಕಾರದ ಬಂಡವಾಳಶಾಹಿ ಮತ್ತು ಸಾಮ್ರಾಜ್ಯಶಾಹಿ ಪರ ನೀತಿಗಳ ವಿರುದ್ಧ ವ್ಯಾಪಕ ಚಳುವಳಿಗಳನ್ನು ರೂಪಿಸಬೇಕಾದುದು ಎಲ್ಲ ಪ್ರಗತಿಪರ ಜನವಿಭಾಗಗಳ ಕರ್ತವ್ಯ ಎಂದು ಒತ್ತಿ ಹೇಳುತ್ತದೆ 'ಮೇಕ್ ಇನ್ ಇಂಡಿಯ – ಒಂದು ವಿಮರ್ಶೆ' ಕಿರುಹೊತ್ತಗೆ. ಈ ಹೊತ್ತಗೆಯ ಮೂಲ ಇಂಗ್ಲಿಷ್ ಕೃತಿಯೂ ಲಭ್ಯವಿದೆ.*

– ***ಎಸ್. ಸುರೇಂದ್ರ,*** *ಜಯನಗರ, ಬೆಂಗಳೂರು*




**ಸಾಕಾರದತ್ತ ಸಮಾನತೆಯ ಕನಸು** **(ಮಹಿಳಾ ಪ್ರತಿರೋಧದ ನೆಲೆಗಳು)** *ಸಂಪಾದನೆ : ಡಾ॥ ಪ್ರೀತಿ ಶುಭಚಂದ್ರ, ಎಂ. ಎನ್. ಸುಮನಾ*

**ಪುಟ : ೧೬೮ + ೧೬** **ಬೆಲೆ : ರೂ. ೧೨೦**

**ಲಡಾಯಿ ಪ್ರಕಾಶನ,** ನಂ. ೨೧, ಪ್ರಸಾದ್ ಹಾಸ್ಟೆಲ್, ಗದಗ – ೫೮೨ ೧೦೧

*ಡಾ॥ ಪ್ರೀತಿ ಶುಭಚಂದ್ರ ಮತ್ತು ಎಂ. ಎನ್. ಸುಮನಾ ಅವರ ಸಂಪಾದನೆಯ 'ಸಾಕಾರದತ್ತ ಸಮಾನತೆಯ ಕನಸು' – ಮಹಿಳಾ ದೌರ್ಜನ್ಯವನ್ನು ವಿರೋಧಿಸುವ ನಿಟ್ಟಿನಲ್ಲಿ ಹಮ್ಮಿಕೊಂಡ ವಿಚಾರ ಸಂಕಿರಣ ಮತ್ತು ಮಹಿಳಾ ಸಮಾವೇಶ ಸಂದರ್ಭದ ನುಡಿಗಳನ್ನು ಬರಹ ರೂಪದಲ್ಲಿ ಸಂಕಲಿಸಿ ದಾಖಲಿಸಿರುವ ಕೃತಿ. ವರ್ತಮಾನ ಸಂದರ್ಭದಲ್ಲಿ ಪುರುಷಕೇಂದ್ರಿತ ಅಧಿಕಾರ ಮತ್ತು ಯಾಜಮಾನ್ಯ ಜಾರಿಯಲ್ಲಿರುವ ನಮ್ಮ ವ್ಯವಸ್ಥೆಯಲ್ಲಿ ಮಹಿಳಾ ದೌರ್ಜನ್ಯವನ್ನು ಪ್ರತಿರೋಧಿಸುವ, ಮಹಿಳಾ ಸಬಲೀಕರಣವು ರಾಜಕೀಯ, ಸಾಮಾಜಿಕ ಮತ್ತು ಸಾಂಸ್ಕೃತಿಕ ನೆಲೆಯಲ್ಲಿ ಸಮಾನತೆಯ ಪಾತಳಿಯ ಮೇಲೆ ರೂಪುಗೊಳ್ಳಬೇಕಾದ ಅನಿವಾರ್ಯತೆ ಕುರಿತಾದ ಕಾಳಜಿಯನ್ನು ವ್ಯಕ್ತಪಡಿಸುವ ನಾಡಿನ ಹೆಸರಾಂತ ಲೇಖಕರ, ಲೇಖಕಿಯರ ಚಿಂತಕರ ನುಡಿಗಳು ಲೇಖನ ರೂಪದಲ್ಲಿವೆ. ಮಹಿಳೆ ಕುಟುಂಬ ಜೀವನದ ಜತೆಜತೆಗೆ ಕುಟುಂಬದ ಹೊರಗಿನ ರಾಜಕೀಯ, ಆರ್ಥಿಕ, ಸಾಮಾಜಿಕ ಕ್ರಿಯೆಗಳಲ್ಲೂ ಪಾಲ್ಗೊಳ್ಳುವಂಥ ಪರಿಸರ ಈಗ ಸೃಷ್ಟಿಯಾಗಬೇಕಿದೆ. ಆದರೆ, ಪಿತೃಪ್ರಧಾನ ಕುಟುಂಬ ವ್ಯವಸ್ಥೆಯಿಂದಾಗಿ ಮಹಿಳೆಯ ಶೋಷಣೆ ಅನಾದಿಕಾಲದಿಂದಲೂ ನಡೆದುಕೊಂಡು ಬಂದಿದೆ. ಈ ಶೋಷಣೆಯ ಸಂಕೋಲೆಯಿಂದ ಮುಕ್ತಗೊಳಿಸಿ ಮಹಿಳಾ ಬದುಕನ್ನು ಮುನ್ನಡೆಸುತ್ತಲೇ ಸಮಾನತೆಯ ಕನಸನ್ನು ನನಸು ಮಾಡುವುದು ಮಹಿಳಾ ಹೋರಾಟದ ಗುರಿಯೂ ಆಗಿದೆ. ಅಂತೆಯೇ, ಮಹಿಳಾ ದೌರ್ಜನ್ಯವನ್ನು ವಿರೋಧಿಸುವ ದಿಕ್ಕಿನಲ್ಲಿ ಮಹಿಳೆಯರ ಸಮಸ್ಯೆಗಳನ್ನು ಗುರುತಿಸುವ, ವಿಶ್ಲೇಷಿಸುವ ಮತ್ತು ಅವುಗಳಿಗೆ ಪರಿಹಾರ ಕಂಡುಕೊಳ್ಳುವ ನೆಲೆಯಲ್ಲಿ ಅರ್ಥಪೂರ್ಣವಾಗಿ ಧ್ವನಿಸುವ ಲೇಖನಗಳನ್ನು ಹೊಂದಿರುವ ಈ ಕೃತಿ ಗಮನಾರ್ಹವಾಗಿದೆ.*

– ***ಕಲ್ಲೇಶ್ ಕುಂಬಾರ್,*** *ಹಾರೂಗೇರಿ, ಬೆಳಗಾವಿ*

ಸ್ವಾತಂತ್ರ್ಯಾನಂತರದ ಭಾರತ – ೨೧

# ಕೇಂದ್ರದಲ್ಲಿ ಯುಪಿಎ, ಪಶ್ಚಿಮ ಬಂಗಾಳದಲ್ಲಿ ಕಮ್ಯುನಿಸ್ಟ್ ಆಡಳಿತ ಅಂತ್ಯ

ಸಿ. ಆರ್. ಕೃಷ್ಣರಾವ್

ಭ್ರಷ್ಟಾಚಾರ ಮತ್ತು ಹಗರಣಗಳ ಸುಳಿಯಲ್ಲೇ ಐದು ವರ್ಷದ ಅಧಿಕಾರಾವಧಿ ಮುಗಿಸಿದ ಯುಪಿಎ ಸರಕಾರ ಅಭಿವೃದ್ಧಿ ಯೋಜನೆಗಳ ಕಡೆಗೆ ಗಮನ ಹರಿಸಿದ್ದು ಕಡಿಮೆ. ಅಭಿವೃದ್ಧಿ ಹೊಂದಿದ್ದ ದೇಶಗಳಲ್ಲೂ ಕೂಡ ಒಂದಲ್ಲ ಒಂದು ರೀತಿಯ ಆರ್ಥಿಕ ಮುಗ್ಗಟ್ಟು ಮುಂದುವರಿದಿದ್ದರಿಂದ ನಮ್ಮ ದೇಶದ ಮೇಲೂ ಅದು ಪರಿಣಾಮ ಬೀರಿತ್ತು. ಸರಕಾರ ಹೆಚ್ಚು ಹೆಚ್ಚಾಗಿ ಕಾರ್ಪೊರೇಟ್ ವಲಯದ ಮರ್ಜಿಗೆ ಅನುಸಾರವಾಗಿ ನಡೆದುಕೊಳ್ಳಲು ತೊಡಗಿತು. ಬಂಡವಳಿಗಾರರ ಪರವಾಗಿ ಸರಕಾರಗಳಿರುವುದು ಹೊಸದೇನಲ್ಲ. ಆದರೆ ಜನಪರ ಯೋಜನೆಗಳನ್ನು ಬದಿಗಿರಿಸಿ ಬಂಡವಳಿಗರಿಗೆ ಮಣೆಹಾಕುವ ಪ್ರವೃತ್ತಿ ಹೆಚ್ಚಾದಾಗ ಅದನ್ನೇ 'ಕ್ರೋನಿಕ್ಯಾಪಿಟಲಿಸಂ' ಅಥವಾ ಬಂಡವಾಳದ ಭಟ್ಟಂಗಿತನ ಎನ್ನುತ್ತಾರೆ. ಹಾಗೆ ಕಾರ್ಪೊರೇಟ್ ವಲಯವನ್ನು ತೃಪ್ತಿಗೊಳಿಸಲು ತಯಾರಾದದ್ದೇ ವಿಶೇಷ ಆರ್ಥಿಕ ವಲಯದ ಯೋಜನೆ. ಇಂಗ್ಲಿಷಿನಲ್ಲಿ 'ಸ್ಪೆಷಲ್ ಎಕನಾಮಿಕ್ ಜೋನ್'. ಪ್ರಧಾನವಾಗಿ ಇದು ಹೂಡಿಕೆದಾರರ ಭೂದಾಹವನ್ನು ತಣಿಸುವ ಯೋಜನೆ. ಸಾರ್ವಜನಿಕ ಉಪಯೋಗದ ಹೆಸರಿನಲ್ಲಿ ಕಡ್ಡಾಯವಾಗಿ ರೈತರ ಜಮೀನನ್ನು ವಶಪಡಿಸಿಕೊಳ್ಳುವ ಹುನ್ನಾರ. ಇದೂ ಕೂಡ ಹಿಂದಿನಿಂದ ಬಂದದ್ದು. ವಿಸ್ತರಣೆ, ವಸತಿ ಸೌಲಭ್ಯ, ಕಚೇರಿಗಳ ವ್ಯವಸ್ಥೆಗಳಿಗಾಗಿ ನೂರಾರು ಎಕರೆ ಪ್ರದೇಶವನ್ನು ಬ್ರಿಟಿಷರ ಆಡಳಿತ ಕಾಲದಲ್ಲಿ ಕಾರ್ಖಾನೆ ಮಾಲಿಕರಿಗೆ ನೀಡಲಾಗುತ್ತಿತ್ತು. ಅದು ನಗರದ ದಟ್ಟಣೆ ಹೆಚ್ಚಾಗಿಲ್ಲದಿದ್ದ ಕಾಲದಲ್ಲಿ ನಡೆದದ್ದು. ಶಿಕ್ಷಣಕ್ಕಾಗಿ, ಆಸ್ಪತ್ರೆ ನಿರ್ಮಾಣಕ್ಕಾಗಿ ಹಿಂದೆ ಸಾಕಷ್ಟು ಭೂಮಿಯನ್ನು ಒದಗಿಸಲಾಗುತ್ತಿತ್ತು. ಆದರೆ ವಿಸ್ತಾರಗೊಳ್ಳುತ್ತಿರುವ ನಗರೀಕರಣದ ಈಗಿನ ಪರಿಸ್ಥಿತಿಯೇ ಬೇರೆ. ಮೂರು ನಾಲ್ಕು ದಶಕಗಳಿಂದ ತಲೆ ಎತ್ತಿರುವ ರಿಯಲ್ ಎಸ್ಟೇಟ್ ದಂಧೆ ನಗರಗಳ ಸುತ್ತಮುತ್ತ ಭೂಮಿಯ ಬೆಲೆಯನ್ನು ಗಗನಕ್ಕೇರಿಸಿದೆ. ಅಗತ್ಯಕ್ಕಿಂತ ಹೆಚ್ಚು ಭೂಮಿಯನ್ನು ಪಡೆದುಕೊಳ್ಳುವುದು, ಅದನ್ನೇ ಬಂಡವಾಳವಾಗಿ ಮಾಡಿಕೊಳ್ಳುವುದು ಈಗಿನ ಚಾಳಿ. ಸರಕಾರದ ಈ ಯೋಜನೆಗೆ ರೈತರ ತೀವ್ರ ವಿರೋಧ ವ್ಯಕ್ತಗೊಂಡಿದೆ. ಪಶ್ಚಿಮ ಬಂಗಾಳದ ಸಿಂಗೂರಿನಲ್ಲಿ ದೇಶದ ಪ್ರಸಿದ್ಧ ಕಾರ್ಪೊರೇಟ್ ಸಂಸ್ಥೆ ಟಾಟಾ ಕಂಪೆನಿ ಪಡೆದುಕೊಳ್ಳಲು ಬಯಸಿದ್ದ ಜಮೀನಿನ ವಿರುದ್ಧವಾಗಿ ರೈತರು ನಡೆಸಿದ ಹೋರಾಟ ಅದಕ್ಕೆ ಉದಾಹರಣೆ. ಇತರ ರಾಜ್ಯಗಳಲ್ಲೂ ತೀವ್ರ ವಿರೋಧ ವ್ಯಕ್ತವಾದ್ದರಿಂದ ಎಸ್‌ಇಜೆಡ್ ಯೋಜನೆ ಮೇಲೇಳಲಿಲ್ಲ.

ಈ ವಿರೋಧದಿಂದಾಗಿ ಸರಕಾರ ಭೂಸ್ವಾಧೀನಕ್ಕೆ, ಬ್ರಿಟಿಷ್ ಆಡಳಿತದ ಕಾಲದಲ್ಲಿದ್ದ ಕಾನೂನಿಗೆ ಬದಲಾಗಿ ಹೊಸ ಕಾನೂನು ಒಂದನ್ನು ರೂಪಿಸಬೇಕಾಯಿತು. ೨೦೧೩ರಲ್ಲಿ ಅನುಮೋದನೆಯಾದ ಈ ಕಾಯಿದೆಯ ಪ್ರಕಾರ ಮುಖ್ಯವಾಗಿ ರೈತರ ಸಮ್ಮತಿಯಿಲ್ಲದೆ ಸರಕಾರ ಕಡ್ಡಾಯವಾಗಿ ಜಮೀನನ್ನು ರೈತರಿಂದ ಕಸಿದುಕೊಳ್ಳುವಂತಿಲ್ಲ. ಶೇಕಡ ೮೦ರಷ್ಟು ಮಂದಿ ರೈತರ ಸಮ್ಮತಿ ಇಲ್ಲದೆ ಒಂದು ಪ್ರದೇಶದ ರೈತರನ್ನು ಒಕ್ಕಲೆಬ್ಬಿಸುವಂತಿಲ್ಲ. ಹಾಗೆಯೇ ಪರಿಹಾರ ನೀಡಿಕೆಯಲ್ಲೂ ಕೂಡ ಮಾರುಕಟ್ಟೆಯ ಬೆಲೆಗೆ ಅನುಗುಣವಾಗಿರಬೇಕು ಎಂದು ನಿಗದಿಮಾಡಲಾಗಿತ್ತು. ಈಗ ಅಧಿಕಾರದಲ್ಲಿ ಭಾಜಪ ನೇತೃತ್ವದ ಮೋದಿ ಸರಕಾರ ಈ ಕಾನೂನಿಗೆ ತಿದ್ದುಪಡಿ ತಂದು ಮೊದಲಿನಂತೆ ಬೇಕಾಬಿಟ್ಟಿಯಾಗಿ ರೈತರ ಜಮೀನನ್ನು ಕಬಳಿಸಿ, ಕಾರ್ಪೊರೇಟ್ ಧಣಿಗಳಿಗೆ ನೀಡಲು ಹರಸಾಹಸ ಮಾಡುತ್ತಿದೆ. ಅದನ್ನು ನಂತರ ಪರಿಶೀಲಿಸೋಣ. ಔದ್ಯೋಗೀಕರಣ, ಬೃಹತ್ ನೀರಾವರಿ ಯೋಜನೆಗಳು, ಹೆದ್ದಾರಿ ಅಗಲೀಕರಣದ ಹೆಸರಿನಲ್ಲಿ ರೈತರಿಂದ ಅಗ್ಗ ದರದಲ್ಲಿ ಜಮೀನನ್ನು ಕಬಳಿಸಿದ್ದಲ್ಲದೆ, ಪರಿಹಾರ ನೀಡಿಕೆಯಲ್ಲೂ ಮಂದಗತಿಯಿಂದ ಸಾಗುತ್ತಿರುವ ನಿದರ್ಶನಗಳು ಬೇಕಾದಷ್ಟಿವೆ. ಔದ್ಯೋಗೀಕರಣ, ಪ್ರಗತಿಯ ಘೋಷಣೆ ಅಡಿಯಲ್ಲಿ ರೈತರು ಕಂಗಾಲಾಗಿದ್ದಾರೆ. ಜಮೀನನ್ನು ಕಳೆದುಕೊಂಡು ಪರದೇಶಿಗಳಾದ ರೈತರು ತಮ್ಮ ಹೋರಾಟವನ್ನು ಮುಂದುವರಿಸಿದ್ದಾರೆ. ದಿವಾಳಿಯಾಗಿರುವ ರೈತರು ಆತ್ಮಾಹುತಿಯ ಮಾರ್ಗ ಹಿಡಿದಿದ್ದಾರೆ. ಗುಜರಾತಿನ ನರ್ಮದಾ ಬಚಾವೋ ಆಂದೋಳನ ಇದಕ್ಕೊಂದು ಉದಾಹರಣೆ. ಇಂಥದೇ ಹೋರಾಟಗಳು ಅಸ್ಸಾಮ್, ಚತ್ತೀಸ್‌ಗಢ ಮುಂತಾದ ರಾಜ್ಯಗಳಲ್ಲೂ ನಡೆದಿದೆ. ಈಗ ಎಸ್‌ಇಜೆಡ್ ಹೊಸ ರೂಪದಲ್ಲಿ 'ಒಳ್ಳೆ ದಿನಗಳ' ಭರಾಟೆಯಲ್ಲಿ ತಲೆಎತ್ತಿದೆ.

ಪಾರ್ಲಿಮೆಂಟ್ ಕಲಾಪಗಳ ವ್ಯರ್ಥ ಕಾಲಕ್ಷೇಪಕ್ಕೆ ಭಾರತ ದಾಖಲೆ ನಿರ್ಮಿಸಿದೆ ಎನ್ನಬಹುದು. ಚರ್ಚೆಗಿಂತ ಇತ್ತೀಚೆಗೆ ದೊಂಬಿಯೇ ಹೆಚ್ಚಾಗಿದೆ. ಸರಕಾರ ಮತ್ತು ಸಾರ್ವಜನಿಕರ ಗಮನ ಸೆಳೆಯಲು ಸದನದಲ್ಲಿ ಪ್ರತಿಪಕ್ಷಗಳ ಸದಸ್ಯರು ಪ್ರದರ್ಶನ ನಡೆಸುವುದು, ಕಲಾಪವನ್ನು ಅಡ್ಡಿಪಡಿಸುವುದು ಪ್ರತಿಭಟನೆಯ ವಿಧಾನಗಳಲ್ಲಿ ಒಂದು. ಅದು ಪ್ರತಿಪಕ್ಷಗಳ ಹಕ್ಕು ಕೂಡ. ಆದರೆ ಅದು ಇಡೀ



ಅಧಿವೇಶನವನ್ನೇ ನುಂಗಿಹಾಕಿದರೆ ಹೇಗೆ ? ಸಾರ್ವಜನಿಕರ ಕೋಟಿಗಟ್ಟಳೆ ಹಣದ ವ್ಯರ್ಥವಲ್ಲವೆ ? ಇದು ಪ್ರಶ್ನೆಯಾಗಿಯೇ ಉಳಿದಿದೆ. ಪ್ರತಿಪಕ್ಷದಲ್ಲಿದ್ದ ಭಾಜಪ ಮತ್ತು ಎನ್‌ಡಿಎ ಅಂಗ ಪಕ್ಷಗಳು ಯುಪಿಎ ಸರಕಾರದ ಅವಧಿಯಲ್ಲಿ ಅನುಸರಿಸಿದ ತಂತ್ರ ಇದು. ಹಾಗಾಗಿ ಯುಪಿಎ ಅಧಿಕಾರಾವಧಿಯಲ್ಲಿ ಕಲಾಪಗಳು ನಡೆದದ್ದೇ ಕಮ್ಮಿ. ಈಗ ಅಧಿಕಾರದಲ್ಲಿ ಇರುವ ಎನ್‌ಡಿಎ ಸರಕಾರಕ್ಕೆ ಕಾಂಗ್ರೆಸ್ ವಿರೋಧ ಪಕ್ಷವಾಗಿ ಅದನ್ನೇ ತಿರುಮಂತ್ರವಾಗಿ ಬಳಸುತ್ತಿದೆ ಕಡಿಮೆ ಸಂಖ್ಯೆ ಇದ್ದಾಗ್ಯೂ.

ಶಿಕ್ಷಣದ ಹಕ್ಕು ಕಾಯಿದೆಗೆ ಅಂಗೀಕಾರ ಪಡೆದುಕೊಂಡ ಯುಪಿಎ ಅದನ್ನು ಕಾರ್ಯಗತ ಮಾಡುವುದರಲ್ಲಿ ಅಷ್ಟೇನೂ ಆಸ್ಥೆ ವಹಿಸಲಿಲ್ಲ. ಶಿಕ್ಷಣ ಕ್ಷೇತ್ರದಲ್ಲಿ ತಾರತಮ್ಯ ನೀಗಿಸಲು, ಬಡಜನರಿಗೂ ಪ್ರತಿಷ್ಠಿತ ಶಾಲೆಗಳಲ್ಲಿ ಪ್ರವೇಶ ದೊರಕಿಸಲು ತಂದ ಈ ಕಾಯಿದೆ ಪ್ರಮುಖವಾದ್ದು. ಹಾಗೆಯೇ ಲೋಕಪಾಲ ಮಸೂದೆಯನ್ನು ತಂದಿದ್ದಾಗ್ಯೂ ಅದು ಈವರೆಗೆ ಅನುಷ್ಠಾನಕ್ಕೆ ಬಂದಿಲ್ಲ. ರೈತರಿಗೆ ಕನಿಷ್ಠ ೧೦೦ ದಿನಗಳ ಉದ್ಯೋಗದ ಭರವಸೆ ನೀಡಿರುವ ಮಹಾತ್ಮ ಗಾಂಧಿ ಗ್ರಾಮ ಉದ್ಯೋಗ ಭರವಸೆ ಕಾಯಿದೆ ಅನುಷ್ಠಾನ ಕೂಡ ಅಸಮರ್ಪಕ. ಸಾಕಷ್ಟು ಹಣ ಮೀಸಲಾಗಿರಿಸಿದ್ದರೂ ಅದು ಸರಿಯಾಗಿ ವಿನಿಯೋಗವಾಗುತ್ತಿಲ್ಲ. ಎನ್‌ಡಿಎ ಸರಕಾರ ಬಜೆಟ್ಟಿನಲ್ಲಿ ಇದಕ್ಕಾಗಿ ಕಾದಿರಿಸುವ ಹಣದ ಮೊತ್ತವನ್ನು ಕಡಿಮೆ ಮಾಡಿದೆ.

ಒಟ್ಟಿನಲ್ಲಿ ಯುಪಿಎ ಸರಕಾರ ಹತ್ತು ವರ್ಷಗಳ ಅಧಿಕಾರವನ್ನು ಪೂರೈಸಿದ ದಾಖಲೆ ಬಿಟ್ಟರೆ ಹೇಳಿಕೊಳ್ಳುವಂಥ ಹೆಚ್ಚಿನದೇನೂ ಇಲ್ಲ. ಸಾಕಷ್ಟು ವಿರೋಧದ ನಡುವೆಯೂ ಆಂಧ್ರಪ್ರದೇಶದ ವಿಭಜನೆಯಾದ್ದು ಮನಮೋಹನ್ ಸಿಂಗ್ ಪ್ರಧಾನಿಯಾಗಿದ್ದಾಗಲೇ. ತೆಲಂಗಾಣ ಹೋರಾಟಕ್ಕೆ ಸಂದ ಜಯ ಅದು. ಭಾಷಾವಾರು ಪ್ರಾಂತ ರಚನೆಗಾಗಿ, ತೆಲುಗು ಭಾಷಿಕರ ನಾಡಿಗಾಗಿ ಹೋರಾಟದ ಮುಂಚೂಣಿಯಲ್ಲಿದ್ದುದು, ಮದರಾಸು ಪ್ರಾಂತದಿಂದ ಆಂಧ್ರಪ್ರದೇಶದ ಪ್ರತ್ಯೇಕ ರಾಜ್ಯಸ್ಥಾಪನೆಗೆ ಮುಂದಾದದ್ದು ಆಂಧ್ರದ ಜನತೆ ದಕ್ಷಿಣ ಭಾರತದಲ್ಲಿ. ಪ್ರತ್ಯೇಕತೆಯಲ್ಲೂ ಅದು ಮುಂದಾದ್ದು ದುರಂತ. ತೆಲುಗು ಭಾಷೆ ಮಾತಾಡುವ ಜನ ಇಬ್ಭಾಗವಾಗಿ ಆಂಧ್ರ ತೆಲಂಗಾಣ ರಾಜ್ಯಗಳು ಸೃಷ್ಟಿಯಾಗಿವೆ. ಸದ್ಯಕ್ಕೆ ಎರಡೂ ರಾಜ್ಯಗಳಿಗೆ ರಾಜಧಾನಿ ಹೈದರಾಬಾದ್.



ಬುದ್ಧದೇವ ಭಟ್ಟಾಚಾರ್ಯ

ಚುನಾವಣೆಗಳನ್ನು ಗಮನದಲ್ಲಿರಿಸಿಕೊಂಡು ತರಾತುರಿಯಲ್ಲಿ ಕಾಂಗ್ರೆಸ್ ತೆಲಂಗಾಣ ಹೋರಾಟಕ್ಕೆ ಮನ್ನಣೆ ನೀಡಿದ್ದಾಗ್ಯೂ ಅದರಿಂದ ಪ್ರಯೋಜನವೇನಾಗಲಿಲ್ಲ. ಎರಡೂ ರಾಜ್ಯಗಳಲ್ಲೂ ಕಾಂಗ್ರೆಸ್ ಅಧಿಕಾರ ಕಳೆದುಕೊಂಡಿದ್ದಲ್ಲದೆ, ಲೋಕಸಭಾ ಚುನಾವಣೆಗಳಲ್ಲೂ ಮಣ್ಣುಮುಕ್ಕಿತು. ಪಶ್ಚಿಮ ಬಂಗಾಳದಲ್ಲಿ ಎಡಪಕ್ಷಗಳು ಅಧಿಕಾರ ಕಳೆದುಕೊಂಡದ್ದು, ಕರ್ನಾಟಕದಲ್ಲಿ ಕಾಂಗ್ರೆಸ್ ಭಾಜಪವನ್ನು ಸೋಲಿಸಿ ಮತ್ತೆ ಅಧಿಕಾರಕ್ಕೆ ಬಂದದ್ದು ಪ್ರಮುಖ ಬೆಳವಣಿಗೆ.

ಸುಮಾರು ಮೂವತ್ತೈದು ವರ್ಷಗಳು ಪಶ್ಚಿಮ ಬಂಗಾಳದಲ್ಲಿ ಅಧಿಕಾರ ನಡೆಸಿದ ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಾರ್ಟಿ ನೇತೃತ್ವದ ಎಡರಂಗದ ಸರಕಾರ ಅಧಿಕಾರ ಕಳೆದುಕೊಂಡಿತು. ೨೦೧೧ರಲ್ಲಿ ಚುನಾವಣೆಗಳ ಮೂಲಕ ಪ್ರಪಂಚದಲ್ಲಿ ಅಧಿಕಾರಕ್ಕೆ ಬಂದ ದಾಖಲೆ ಭಾರತ ಕಮ್ಯುನಿಸ್ಟ್ ಪಾರ್ಟಿಗೆ ಸಲ್ಲುತ್ತದೆ. ಕೇರಳ ರಾಜ್ಯದಲ್ಲಿ ಇ. ಎಂ. ಎಸ್. ನಂಬೂದಿರಿಪಾದ್ ನೇತೃತ್ವದಲ್ಲಿ ೧೯೫೭ರಲ್ಲಿ ಕಮ್ಯುನಿಸ್ಟ್ ಪಾರ್ಟಿ ಅಧಿಕಾರಕ್ಕೆ ಬಂದಿತು. ಅದು ಅಧಿಕಾರದಲ್ಲಿದ್ದುದು ಅಲ್ಪಾವಧಿ. ಕೇಂದ್ರ ಸರಕಾರದ ಕಮ್ಯುನಿಸ್ಟ್ ವಿರೋಧಿ ಧೋರಣೆಯಿಂದಾಗಿ ಶಾಸನಸಭೆಯಲ್ಲಿ ಬಹುಮತ ಹೊಂದಿದ್ದಾಗ್ಯೂ ಸರಕಾರವನ್ನು ವಜಾ ಮಾಡಲಾಯಿತು. ಭಾರತದಲ್ಲಿ ಪ್ರತಿಪಕ್ಷವೊಂದು ರಾಜ್ಯದಲ್ಲಿ ಅಧಿಕಾರಕ್ಕೆ ಬಂದದ್ದು ಅದೇ ಮೊದಲು. ಮುಂದೆ ಸರ್ವೋಚ್ಚ ನ್ಯಾಯಾಲಯ ಶಾಸನಸಭೆಯಲ್ಲಿ ಬಹುಮತ ಹೊಂದಿರುವ ಸರಕಾರವನ್ನು ಕೇಂದ್ರ ಸರಕಾರ ವಜಾ ಮಾಡುವ ಹಾಗಿಲ್ಲ ಎಂಬ ತೀರ್ಪು ನೀಡಿತು. ಹಾಗೆಯೇ ಪಶ್ಚಿಮ ಬಂಗಾಳದಲ್ಲಿ ಸುದೀರ್ಘ ಕಾಲ ಕಮ್ಯುನಿಸ್ಟ್ ಸರಕಾರ ಅಧಿಕಾರದಲ್ಲಿದ್ದುದೂ ಒಂದು ದಾಖಲೆ.

೧೯೬೪ರಲ್ಲಿ ಭಾರತ ಕಮ್ಯುನಿಸ್ಟ್ ಪಾರ್ಟಿ ಇಬ್ಭಾಗಗೊಂಡಾಗ ಅಸ್ತಿತ್ವಕ್ಕೆ ಬಂದದ್ದು ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷ. ಭಾರತ ಕಮ್ಯುನಿಸ್ಟ್ ಪಾರ್ಟಿ (ಮಾರ್ಕ್ಸ್‌ವಾದಿ) ಅಥವಾ ಹ್ರಸ್ವವಾಗಿ ಇಂಗ್ಲಿಷಿನಲ್ಲಿ ಸಿಪಿಐ(ಎಂ). ಕಮ್ಯುನಿಸ್ಟ್ ಚಳವಳಿಯಲ್ಲಿ ಸಂಭವಿಸಿದ ಈ ಒಡಕು ಕ್ರಾಂತಿಕಾರಿ ಚಳವಳಿಯ ಹಿನ್ನಡೆ. ಅನಂತರ ಹಲವು ಕಮ್ಯುನಿಸ್ಟ್ ಚಳವಳಿಗಳು ಅಸ್ತಿತ್ವಕ್ಕೆ ಬಂದಿವೆ. ಇವೆಲ್ಲ ಒಂದಾದರೆ ಎಡಪಂಥೀಯರ ಪ್ರಗತಿಗೆ ಅನುಕೂಲವಾಗುತ್ತದೆ ಭಾರತದಲ್ಲಿ. ಆದರೆ ಸದ್ಯಕ್ಕಂತೂ ಅದು ಕೈಗೂಡುವ ಸೂಚನೆ ಇಲ್ಲ. ೧೯೭೭ರಲ್ಲಿ ಪಶ್ಚಿಮ ಬಂಗಾಳದಲ್ಲಿ ಸಿಪಿಎಂ ನಾಯಕ ಜ್ಯೋತಿಬಸು ನಾಯಕತ್ವದಲ್ಲಿ ಎಡಪಕ್ಷದ ಸರಕಾರ ಅಧಿಕಾರಕ್ಕೆ ಬಂದಿತು. ೨೦೧೧ರವರೆಗೆ ಅದು ಅಧಿಕಾರದಲ್ಲಿತ್ತು. ೨೦೧೧ರ ಮೇ ತಿಂಗಳಲ್ಲಿ ತೃಣಮೂಲ ಕಾಂಗ್ರೆಸ್ ನಾಯಕಿ ಮಮತಾ ಬ್ಯಾನರ್ಜಿ ಮುಖ್ಯಮಂತ್ರಿಯಾದರು. ಅನಾರೋಗ್ಯದಿಂದಾಗಿ ಜ್ಯೋತಿಬಸು ಅಧಿಕಾರವನ್ನು ತ್ಯಜಿಸಿದರು ೨೦೦೦ದಲ್ಲಿ. ಒಂದು ಸಂದರ್ಭದಲ್ಲಿ ದೇಶದ ಪ್ರಧಾನಿಯಾಗಲು ಪಕ್ಷದ ತೀರ್ಮಾನದಂತೆ ಒಪ್ಪದ ಜ್ಯೋತಿಬಸು ಪಶ್ಚಿಮ ಬಂಗಾಳದ ಅತ್ಯಂತ ಜನಪ್ರಿಯ ನಾಯಕ. ವಿರೋಧ ಪಕ್ಷದ ನಾಯಕನಾಗಿ, ಮುಖ್ಯಮಂತ್ರಿಯಾಗಿ ದೀರ್ಘಕಾಲ ಸೇವೆ ಸಲ್ಲಿಸಿದವರು. ೨೦೧೦ರ ಜನವರಿಯಲ್ಲಿ ಜ್ಯೋತಿಬಸು ನಿಧನರಾದರು. ಅವರ



ಮಮತಾ ಬ್ಯಾನರ್ಜಿ

ನಂತರ ಅಧಿಕಾರ ವಹಿಸಿಕೊಂಡಿದ್ದು ಸಿಪಿಎಂ ನಾಯಕ ಬುದ್ಧದೇವ ಭಟ್ಟಾಚಾರ್ಯ. ಹೆಚ್ಚು ಕಡಿಮೆ ಹತ್ತು ವರ್ಷ ಅಧಿಕಾರದಲ್ಲಿದ್ದ ಬುದ್ಧದೇವ ಸರಕಾರಕ್ಕೆ ಯುಪಿಎ ಸರಕಾರದ ವಿಶೇಷ ಆರ್ಥಿಕ ವಲಯ ಯೋಜನೆಯೇ ಮುಳುವಾಯಿತು. ಪಶ್ಚಿಮ ಬಂಗಾಳದ ಔದ್ಯೋಗೀಕರಣದ ಹೆಬ್ಬಯಕೆಯಿಂದ ಎಸ್‌ಇಜೆಡ್ ಯೋಜನೆಗಾಗಿ ೧೪ ಗ್ರಾಮಗಳನ್ನಾವರಿಸಿದ ಹತ್ತು ಸಾವಿರ ಎಕರೆ ಭೂಮಿಯನ್ನು ವಶಪಡಿಸಿಕೊಳ್ಳಲು ಎಡಪಕ್ಷಗಳ ಸರಕಾರ ಮುಂದಾಯಿತು. ಇದರಲ್ಲಿ ಟಾಟಾ ಕಂಪೆನಿಗೆ ನೀಡಲು ನಿರ್ಧರಿಸಿದ್ದ ಭೂಮಿಯೂ ಸೇರಿತ್ತು. ಪಶ್ಚಿಮ ಬಂಗಾಳದ ಇತಿಹಾಸದಲ್ಲಿ ನಂದೀಗ್ರಾಮ ಹೋರಾಟ ಎಂದೇ ಹೆಸರಾಗಿರುವ ರೈತರ ಈ ಹೋರಾಟದ ನೇತೃತ್ವವನ್ನು ತೃಣಮೂಲ ಕಾಂಗ್ರೆಸ್ಸಿನ ನಾಯಕಿ ಮಮತಾ ಬ್ಯಾನರ್ಜಿ ವಹಿಸಿದ್ದರು. ಭೂಕಬಳಿಕೆ ವಿರುದ್ಧ ರೈತರು ನಡೆಸಿದ ಯಶಸ್ವೀ ಹೋರಾಟ ಇದು. ನಂದೀ ಗ್ರಾಮ ಹೋರಾಟ ಎಂದೇ ಅದು ಪ್ರಸಿದ್ಧವಾಯಿತು. ಕಾರು ತಯಾರಿಕೆಗಾಗಿ ಕಾರ್ಖಾನೆ ಸ್ಥಾಪನೆಗೆ ಜಮೀನು ಪಡೆದಿದ್ದ ಟಾಟಾ ಕಂಪೆನಿ ಮುಂದೆ ಗುಜರಾತಿಗೆ ಸ್ಥಳಾಂತರಗೊಂಡಿತು. ಎಸ್‌ಇಜೆಡ್ ಯೋಜನೆಯೂ ನೆಲಕಚ್ಚಿತು, ಅದರೊಂದಿಗೆ ಸಿಪಿಎಂ ನೇತೃತ್ವದ ಸರಕಾರವೂ ಅಧಿಕಾರ ಕಳೆದುಕೊಂಡಿತು. ೨೦೧೧ರಲ್ಲಿ ಜರುಗಿದ ಚುನಾವಣೆಗಳಲ್ಲಿ ಪಶ್ಚಿಮ ಬಂಗಾಳದ ೨೯೪ ಶಾಸನಸಭಾ ಸ್ಥಾನಗಳಲ್ಲಿ ೧೮೪ ಸ್ಥಾನಗಳನ್ನು ಪಡೆದ ತೃಣಮೂಲ ಕಾಂಗ್ರೆಸ್ ಅಧಿಕಾರಕ್ಕೆ ಬಂತು. ಕೇಂದ್ರ ಸರಕಾರದ ರೈಲ್ವೆ ಸಚಿವೆಯಾಗಿದ್ದ ಮಮತಾ ಬ್ಯಾನರ್ಜಿ ಮುಖ್ಯಮಂತ್ರಿಯಾಗಿ ಅಧಿಕಾರ ವಹಿಸಿಕೊಂಡರು. ಸಿಪಿಎಂ ನೇತೃತ್ವದ ಎಡರಂಗ ೬೦ ಸ್ಥಾನಗಳಿಗೆ ತೃಪ್ತಿಪಟ್ಟುಕೊಳ್ಳಬೇಕಾಯಿತು. ಈ ಚುನಾವಣೆ ೨೦೧೪ರ ಲೋಕಸಭಾ ಚುನಾವಣೆಗಳಲ್ಲಿ ಸಿಪಿಎಂ ಸೋಲಿಗೂ ಕಾರಣವಾಯಿತು. ಯುಪಿಎ ಆಡಳಿತವೂ ಅಂತ್ಯಗೊಂಡಿತು.

*(ಮುಂದುವರಿಯುವುದು)*

**ಸಿ. ಆರ್. ಕೃಷ್ಣರಾವ್**
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ , ಬೆಂಗಳೂರು – ೫೬೦ ೦೮೫

# ಕೈದಿಗಳಿಗೆ ಚಿತ್ರಹಿಂಸೆ: ಅಮೆರಿಕ ಮನಶ್ಶಾಸ್ತ್ರೀಯ ಸಂಘದ ಅನೈತಿಕ ನಡವಳಿಕೆ



ಇಂಗ್ಲಿಷ್ ಮೂಲ :
**ಜೆ. ವೆಸ್ಲಿ ಬಾಯ್ಡ್**
ಕನ್ನಡಕ್ಕೆ
**ಮ. ಶ್ರೀ. ಮುರಳಿ ಕೃಷ್ಣ**

ಅಮೆರಿಕದ ಮನಶ್ಶಾಸ್ತ್ರೀಯ ಸಂಘ ಎಪಿಎ ಸರ್ಕಾರಿ ಅಧಿಕಾರಿಗಳ ಜೊತೆ ಶಾಮೀಲಾಗಿ ಹಿಂಸಾತ್ಮಕ ತನಿಖಾ ವಿಧಾನಗಳನ್ನು ಬಳಸುವುದಕ್ಕೆ ಅನುಮತಿ ನೀಡಿದ ಆಪಾದನೆಗಳಿಗೆ ಗುರಿಯಾಗಿತ್ತು. ಈ ಗಹನವಾದ ಹಾಗೂ ಆತಂಕಕಾರಿ ಬೆಳವಣಿಗೆಯ ಕುರಿತು ಸ್ವತಂತ್ರ ಪರಾಮರ್ಶೆಯನ್ನು ತಮ್ಮ ನಾಯಕತ್ವದಲ್ಲಿ ನಡೆಸಿ ಕೊಡಬೇಕೆಂದು ಆ ಸಂಘದ ಆಡಳಿತ ಮಂಡಲಿಯ ನಿರ್ದೇಶಕರು ನವೆಂಬರ್ ೨೦೧೪ರಲ್ಲಿ ಮಾಜಿ ಫೆಡರಲ್ ಪ್ರಾಸಿಕ್ಯೂಟರ್ ಡೇವಿಡ್ ಹಾಫ್‌ಮನ್ ಅವರನ್ನು ಕೇಳಿಕೊಂಡಿತು.

ಈ ಸಂಘ ಡೇವಿಡ್ ಹಾಫ್‌ಮನ್‌ರಿಗೆ ಪರಾಮರ್ಶೆಯ ಜವಾಬ್ದಾರಿಯನ್ನು ವಹಿಸಿದ ಕೆಲವು ವಾರಗಳ ಮುನ್ನ ಅಮೆರಿಕದ ಬೇಹುಗಾರಿಕೆ ಸಂಸ್ಥೆಯಾದ ಸಿಐಎ ಬಳಸುತ್ತಿದ್ದ ಹಿಂಸಾತ್ಮಕ ವಿಧಾನಗಳ ಕುರಿತ ಒಂದು ವರದಿಯನ್ನು ಸೆನೆಟ್ ಬೇಹುಗಾರಿಕಾ ಸಮಿತಿ ಬಿಡುಗಡೆ ಮಾಡಿತ್ತು. ವಿಚಾರಣಾ ಅವಧಿಯಲ್ಲಿ ಮನಶ್ಶಾಸ್ತ್ರಜ್ಞರ ಭಾಗ ವಹಿಸುವಿಕೆಗೆ ಸಂಬಂಧಿಸಿದಂತೆ ಆ ವರದಿಯಲ್ಲಿ ಪ್ರಶ್ನೆಗಳನ್ನು ಎತ್ತಲಾಗಿತ್ತು. ರಾಷ್ಟ್ರೀಯ ಭದ್ರತಾ ವಿಚಾರಣೆಗಳಲ್ಲಿ ಮನಶ್ಶಾಸ್ತ್ರಜ್ಞರು ಯಾವ ಸಂದರ್ಭದಲ್ಲಿ ನೈತಿಕವಾಗಿ ಭಾಗವಹಿಸಬಹುದು ಎಂಬ ವಿಷಯದ ಬಗೆಗೆ ಎಪಿಎ ೨೦೦೨ ಹಾಗೂ ೨೦೦೫ರಲ್ಲಿ ಕೆಲವು ನೈತಿಕ ಮಾರ್ಗದರ್ಶಿ ಸೂತ್ರಗಳನ್ನು ಪ್ರಕಟಿಸಿತ್ತು. ಇದಕ್ಕೆ ಸಂಬಂಧಿಸಿದಂತೆ ಪ್ರಶ್ನೆಗಳಿದ್ದವು. ಹಾಫ್‌ಮನ್‌ರ ತನಿಖಾ ವ್ಯಾಪ್ತಿ ಈ ವಿಚಾರವನ್ನು ಒಳಗೊಂಡಿತ್ತು. ೨೦೧೫ರ ಜುಲೈ ೧೦ರಂದು ಹಾಫ್‌ಮನ್ ವರದಿಯ ವಿವರಗಳು ಸೋರಿಕೆಯಾದವು ! ಅವು ನನ್ನನ್ನೂ ಸೇರಿದಂತೆ ಅನೇಕರ ಗುಮಾನಿಗಳನ್ನು ದೃಢೀಕರಿಸಿದವು ! ರಕ್ಷಣಾ ಇಲಾಖೆಗೆ ಸಹಾಯ ನೀಡುವ ನಿಟ್ಟಿನಲ್ಲಿ ಇಡೀ ದೇಶದಲ್ಲೇ ಬಹಳ ದೊಡ್ಡದಾದ ಮನಶ್ಶಾಸ್ತ್ರಜ್ಞರ ಈ ಸಂಸ್ಥೆ ತನ್ನ ನೈತಿಕ ನೀತಿಗಳನ್ನು ರೂಪಿಸಿತ್ತು !

**ಅಮೆರಿಕದ ಮನಶ್ಶಾಸ್ತ್ರೀಯ ಸಂಘ ಮತ್ತು ರಕ್ಷಣಾ ಇಲಾಖೆ**

ಭಯೋತ್ಪಾದನೆ ವಿರುದ್ಧ ಯುದ್ಧ ಘೋಷಿಸಿದ ಪ್ರಾರಂಭದಿಂದಲೇ ಎಪಿಎಯ ಅಧಿಕಾರಿಗಳು ರಕ್ಷಣಾ ಇಲಾಖೆ ಮತ್ತು ಸಿಐಎ ಜೊತೆ ಶಾಮೀಲಾಗಿ ವಿಚಾರಣೆಗಳಲ್ಲಿ ಮನಶ್ಶಾಸ್ತ್ರಜ್ಞರು ಭಾಗಿಗಳಾಗಿದ್ದರು ಎಂಬುದಾಗಿ ಹಾಫ್‌ಮನ್ ಅವರ ವರದಿ ತಿಳಿಸುತ್ತದೆ. ಇದು ೨೦೦೯ರಲ್ಲಿ ಒಬಾಮ ಅಧಿಕಾರವನ್ನು ವಹಿಸಿಕೊಂಡವರೆಗೆ ಮುಂದುವರಿಯಿತು. ಈ ವಿಚಾರಣೆಗಳಲ್ಲಿ ವರ್ಧಿತ ವಿಚಾರಣಾ ವಿಧಾನಗಳನ್ನು ಅನುಸರಿಸಲು ಯಾವ ರೀತಿಯ ಪೂರ್ವಭಾವಿ ಅನುಮತಿಯನ್ನು ಪಡೆಯಬೇಕಾಗಿರಲಿಲ್ಲ ಎಂಬ ಅಂಶಗಳನ್ನೂ ಈ ವರದಿ ಅನಾವರಣಗೊಳಿಸಿದೆ !

ನಾನು ವೈದ್ಯಕೀಯ ನೈತಿಕತೆ ಕ್ಷೇತ್ರದಲ್ಲಿ ಇಪ್ಪತ್ತು ವರ್ಷಗಳಿಂದ ಕೆಲಸ ಮಾಡುತ್ತಿದ್ದೇನೆ. ಇರಾಕ್‌ನ ಅಬು ಘ್ರೈಬ್ ಬಂದೀಖಾನೆಯಲ್ಲಿ ನೀಡಿದ ಚಿತ್ರಹಿಂಸೆಯ ಕುರಿತ ಛಾಯಾಚಿತ್ರಗಳು ಸೋರಿಕೆ ಯಾದಾಗಲೇ ನನಗೆ ಆರೋಗ್ಯ ರಕ್ಷಣೆಯ ಹೊಣೆ ಹೊತ್ತಿರುವ ಸಿಬ್ಬಂದಿಯ ಭಾಗವಹಿಸುವಿಕೆಯ ಅರಿವಾಗಿತ್ತು. ಈ ವಿಷಯ ನನ್ನಲ್ಲಿ ಕಳವಳವನ್ನುಂಟು ಮಾಡಿತ್ತು. ಇದಕ್ಕೆ ಸಂಬಂಧಿಸಿದಂತೆ ನಾನು ಮತ್ತಷ್ಟು ವಿಷಯಗಳನ್ನು ಸಂಗ್ರಹಿಸಲು ಉದ್ಯುಕ್ತನಾದೆ. ಜಿನೀವಾ ಒಪ್ಪಂದದ ಅನ್ವಯ ಆರೋಗ್ಯ ಕ್ಷೇತ್ರದ ವೃತ್ತಿಪರರಿಗಿರುವ ಕಟ್ಟುಪಾಡುಗಳೇನು ಹಾಗೂ ವೈದ್ಯಕೀಯ ಮತ್ತು ಮನಃಶಾಸ್ತ್ರದ ವಿದ್ಯಾರ್ಥಿಗಳು ಮಿಲಿಟರಿ ವೈದ್ಯಕೀಯ ನೈತಿಕತೆಯ ಬಗೆಗೆ ಏನನ್ನು ಕಲಿಯುತ್ತಿದ್ದಾರೆ ಎಂಬ ವಿಚಾರಗಳ ಬಗೆಗೆ ಅಧ್ಯಯನ ನಡೆಸಲು ಮುಂದಾದೆ. ರಕ್ಷಣಾ ಇಲಾಖೆ ಮತ್ತು ಅಮೆರಿಕದ ಮನಶ್ಶಾಸ್ತ್ರೀಯಸಂಘದ ನಡುವೆ ಇರುವ ಗಾಢ ಸಂಬಂಧ ಕುರಿತಂತೆ ಹೆಚ್ಚಿನ ಮಾಹಿತಿಗಳನ್ನು ಸಂಗ್ರಹಿಸುವುದರಲ್ಲಿ ಆಸಕ್ತನಾದೆ.

**ಎಪಿಎ ತನ್ನ ನೈತಿಕ ಮಾರ್ಗದರ್ಶಿ ಸೂತ್ರಗಳನ್ನು ಹೇಗೆ ರೂಪಿಸುತ್ತಿತ್ತು ?**

ಎಪಿಎನ ಮುಖ್ಯ ಕರ್ತವ್ಯಗಳಲ್ಲಿ ಮನಶ್ಶಾಸ್ತ್ರಜ್ಞರಿಗೆ ನೀತಿಗಳು ಮತ್ತು ನೈತಿಕ ಮಾರ್ಗದರ್ಶಿ ಸೂತ್ರಗಳನ್ನು ರೂಪಿಸುವುದೂ ಒಂದು. ಇವುಗಳಿಗಾಗಿ ತಜ್ಞ ಮನಶ್ಶಾಸ್ತ್ರಜ್ಞರ ಸಮಿತಿಯನ್ನು ಈ ಸಂಘ

ಮೂಲ ಲೇಖಕರು ನಿರೂಪಿಸಿರುವಂತೆ ಅಮೆರಿಕದ ಮನಶ್ಶಾಸ್ತ್ರಜ್ಞರು ಅಥವಾ ಮಿಲಿಟರಿ ಮತ್ತು ಪೋಲೀಸರಿಂದ ನಡೆದ/ನಡೆಯುತ್ತಿರುವ ಈ ಚಿತ್ರಹಿಂಸೆಯ ಕಾರ್ಯಾಚರಣೆ ಅವರ ಅತ್ಯಂತ ಅತಿಶಯವಾದ ಚ್ಯುತಿಯಲ್ಲ. ಕಳೆದ ಎರಡು ಶತಮಾನಗಳಿಗೂ ಮೇಲ್ಪಟ್ಟು ಈ ಲೇಖಕರು ವಾಸವಿರುವ ಅಮೆರಿಕ ಅನೇಕ ದೇಶಗಳಲ್ಲಿ ವಿವಿಧ ಅಮಾನವೀಯ ಹಾಗೂ ಕರಾಳ ಅಪರಾಧಗಳನ್ನು ಎಸಗಿದೆ. ಲೇಖಕರ ಈ ಅತಿಯಾದ ನ್ಯಾಯಪರವಾದ ನಿರೂಪಣೆ ವಿಜ್ಞಾನಿಗಳು ಮತ್ತು ಇತರರು ವೈಟ್‌ಹೌಸ್ ಮತ್ತು ಪೆಂಟಗನ್ ಜೊತೆ ಶಾಮೀಲಾಗಿರುವುದಕ್ಕೆ ಯಾವ ಪರಿಹಾರವನ್ನೂ ನೀಡುವುದಿಲ್ಲ ! ಯಾವಾಗಲಾದರೂ ಒಮ್ಮೆ ವ್ಯಕ್ತವಾಗುವ ಇಂತಹ ನೀತಿಬೋಧೆಯನ್ನು ಯಾರೂ ನಂಬುವುದಿಲ್ಲ ಕೂಡ. ಅತ್ಯಂತ ಹೀನಾಯ ಕಾರ್ಯಗಳನ್ನು ಎಸಗಿದ ಮೇಲೆ, ಕೆಲವೊಮ್ಮೆ ಹಂತಕರೂ ತಮಗೆ ಅಂತಃಸ್ಸಾಕ್ಷಿ ಇದೆ ಎಂದು ತೋರ್ಪಡಿಸುತ್ತಾರೆ ! ಇವರಿಗಿಂತ ಕ್ರೂರಿಗಳೇ ಮೇಲು, ಏಕೆಂದರೆ ಅವರು ತಾವು ಎಸಗಿದ ಹೇಯಕೃತ್ಯಗಳಿಗೆ ತರ್ಕಬದ್ಧ ವಿವರಣೆಗಳನ್ನು ನೀಡಬೇಕಿಲ್ಲ. ಅಲ್ಲದೆ, ಅಮೆರಿಕದ ಮನಶ್ಶಾಸ್ತ್ರಜ್ಞರ ಇಂತಹ ಕುಟಿಲ ಕಾರ್ಯಾಚರಣೆಗಳನ್ನು ದೀರ್ಘಕಾಲ ಸಮರ್ಥಿಸಲು ಸಾಧ್ಯವಾಗುವುದಿಲ್ಲ. ಇಷ್ಟೆಲ್ಲ ಸಂಗತಿಗಳು ಸಾರ್ವಜನಿಕವಾಗಿ ತಿಳಿದುಬಂದರೂ, ಆಂತರಿಕ ತನಿಖೆಗಳಲ್ಲಿ ಮನಶ್ಶಾಸ್ತ್ರಜ್ಞರ ವಿವಾದಾಸ್ಪದ ಪಾತ್ರ ಮುಂದುವರಿಯುತ್ತಲೇ ಇದೆ ! ಅಲ್ಲಿನ ಅಧಿಕಾರಸ್ಥರು ಇಂತಹ ಕೃತ್ಯಗಳಿಗೆ ಕುಮ್ಮಕ್ಕು ನೀಡುತ್ತಲೇ ಇದ್ದಾರೆ !

– ಸಾಕ್ಷಿ

ಬಳಸಿಕೊಳ್ಳುತ್ತದೆ. ಈ ತರಹದ ಸಮಿತಿಯ ರಚನೆ ಮತ್ತು ಅದು ನೀಡುವ ಘೋಷಣೆಗಳು / ಹೇಳಿಕೆಗಳು ಎಪಿಎ ಹಾಗೂ ಸರ್ಕಾರದ ನಡುವಿನ ಹುನ್ನಾರದಂತೆ ಸಿದ್ಧಗೊಳ್ಳುತ್ತವೆ ಎಂಬ ಆತಂಕಕಾರಿ ಮಾಹಿತಿಯನ್ನು ಹಾಫ್‌ಮನ್ ವರದಿ ಬಹಿರಂಗಗೊಳಿಸಿದೆ. ಇಂತಹ ಘೋಷಣೆಗಳು / ಹೇಳಿಕೆಗಳ ಆಧಾರದ ಮೇಲೆ ಎಪಿಎಯ ನೀತಿಗಳು ರಚಿಸಲ್ಪಡುತ್ತವೆ ಹಾಗೂ ಅವು ಮನಶ್ಶಾಸ್ತ್ರಜ್ಞರ ನೈತಿಕ ನಡವಳಿಕೆಯನ್ನು ನಿರ್ದೇಶಿಸುತ್ತವೆ. ಇದಕ್ಕೊಂದು ಉದಾಹರಣೆ : ೨೦೦೫ರಲ್ಲಿ ಹೊರಬಿದ್ದ ಮನಶ್ಶಾಸ್ತ್ರೀಯ ನೈತಿಕತೆ ಮತ್ತು ರಾಷ್ಟ್ರೀಯ ಭದ್ರತಾ ಕಾರ್ಯ ಪಡೆಯ ವರದಿ (ಪಿಇಎನ್‌ಎಸ್); ಅದರಲ್ಲಿ ಮನಶ್ಶಾಸ್ತ್ರಜ್ಞರು ವಿಚಾರಣೆಗಳಲ್ಲಿ ಭಾಗವಹಿಸಬಹುದೆಂಬ ಪ್ರಸ್ತಾಪವಿತ್ತು. ಈ ಪಿಇಎನ್‌ಎಸ್ ವರದಿ ಭಾಗಶಃ ಗೋಪ್ಯವಾಗಿ ರಚಿಸಲ್ಪಟ್ಟಿತ್ತು. ಎಪಿಎ ಜಾಗರೂಕತೆಯಿಂದ ಆಯ್ಕೆಮಾಡಿದ ತಜ್ಞರ ಸಮಿತಿ ಈ ವರದಿಯನ್ನು ಅನುಮೋದಿಸಿತು. ಈ ಸಮಿತಿಯಲ್ಲಿದ್ದ ಬಹುತೇಕ ಮಂದಿಗೆ ರಕ್ಷಣಾ ಇಲಾಖೆಯ ಜೊತೆ ಗಾಢವಾದ ಸಂಬಂಧವಿತ್ತು. ಹಾಫ್‌ಮನ್ ಬಹಿರಂಗಗೊಳಿಸದಂತೆ ಪಿಇಎನ್‌ಎಸ್ ಕಾರ್ಯಪಡೆಯ ರಚನೆಯೇ ರಕ್ಷಣಾ ಇಲಾಖೆಯ ಕೆಲವು ಅಧಿಕಾರಿಗಳ ಜೊತೆಗಿನ ಎಪಿಎ ಅಧಿಕಾರಿಗಳ ನಿಕಟ ಮತ್ತು ರಹಸ್ಯ ಸಹಯೋಗದ ಫಲಶ್ರುತಿ. ಅಮೆರಿಕದ ಕಾನೂನುಗಳನ್ನು ಪಾಲಿಸಿದರೆ ಮಾತ್ರ ಮನಶ್ಶಾಸ್ತ್ರಜ್ಞರು ವಿಚಾರಣೆಗಳಲ್ಲಿ ಭಾಗವಹಿಸಬಹುದೆಂಬುದು ಪಿಇಎನ್‌ಎಸ್ ನೀಡಿದ ಪರವಾನಗಿಯಾಗಿತ್ತು. ಆದರೆ ಇಂತಹ ಮನಶ್ಶಾಸ್ತ್ರಜ್ಞರು ಅಂತರರಾಷ್ಟ್ರೀಯ ವೈದ್ಯಕೀಯ ನೈತಿಕತೆಯ ಸಂಹಿತೆಯನ್ನು ಸಾರಾಸಗಟಾಗಿ ಉಲ್ಲಂಘಿಸುತ್ತಿದ್ದರು !

ಈ ನಿಟ್ಟಿನಲ್ಲಿ ವೈದ್ಯಕೀಯ ನೈತಿಕತೆಯನ್ನು ಬದಿಗೊತ್ತಿ ತಮಗೆ ಅನುಕೂಲವಾಗುವಂತೆ ಕಾನೂನನ್ನು ಬುಷ್ ಸರ್ಕಾರ ರಚಿಸಿತು. ಅದರಂತೆ ಬಂಧಿತರನ್ನು ಹಿಂಸೆಗೆ ಗುರಿಮಾಡಲಾಯಿತು. ಈ ಬಂಧಿತರು ಯುದ್ಧದ ಕೈದಿಗಳಾಗಿರಲಿಲ್ಲ. ಆದುದರಿಂದ ಅವರಿಗೆ ಜಿನೀವಾ ಒಪ್ಪಂದದಂತೆ ರಕ್ಷಣೆ ಸಿಗಲೇ ಇಲ್ಲ ! ಎಪಿಎ ೨೦೧೩ರವರೆಗೂ ವಿಚಾರಣೆಗಳಿಗೆ ಸಂಬಂಧಿಸಿದ ಮಾರ್ಗದರ್ಶಿ ಸೂತ್ರಗಳನ್ನು ಬದಲಾಯಿಸಲಿಲ್ಲ. ಅದು ನೀಡಿದ ಪರವಾನಗಿಯ ಆಧಾರದ ಅನ್ವಯ ಮನಶ್ಶಾಸ್ತ್ರಜ್ಞರು ವಿಚಾರಣೆಗಳಲ್ಲಿ ಭಾಗವಹಿಸಿದರು. ಅಲ್ಲದೆ, ವಿಚಾರಣೆಗಳಲ್ಲಿ ಪ್ರಯೋಗಿಸುತ್ತಿದ್ದ ಸಂಶಯಾಸ್ಪದ ವಿಧಾನಗಳಿಗೆ 'ವರ್ಧಿತವಾದವುಗಳೆಂದು' ಹಣೆಪಟ್ಟಿ ಕಟ್ಟಿದರು. ಇಡೀ ಅಮೆರಿಕದಲ್ಲಿ ಆರೋಗ್ಯ ವೃತ್ತಿಪರರ ಸಂಸ್ಥೆಗಳ ಪೈಕಿ ಈ ರೀತಿಯ ಕುಟಿಲ ಕಾರ್ಯಚರಣೆಗಳನ್ನು ನಡೆಸಿದ್ದು ಎಪಿಎ ಮಾತ್ರ. ೨೦೦೬ರ ಸಮಯದಲ್ಲಿ ಅಮೆರಿಕದ ವೈದ್ಯಕೀಯ ಸಂಘ ಮತ್ತು ಮನಶ್ಶಾಸ್ತ್ರೀಯಸಂಘ ಇವೆರಡೂ ತಮ್ಮ ಸದಸ್ಯರು ವಿಚಾರಣೆಗಳಲ್ಲಿ ಭಾಗವಹಿಸಬಾರದೆಂದು ಆಜ್ಞೆಯಿತ್ತವು. ಆದರೆ ನಂತರ ಎಪಿಎ ಆಡಳಿತದ ಜೊತೆ ಕೈಜೋಡಿಸಿದ್ದರಿಂದ ತನ್ನ ಆಜ್ಞೆಯನ್ನು ತಾನೇ ಉಲ್ಲಂಘಿಸಿತು. ಎಪಿಎ ತನ್ನ ಆಜ್ಞೆಯನ್ನು ಎತ್ತಿ ಹಿಡಿದಿದ್ದರೆ ವಿಚಾರಣೆಗಳಲ್ಲಿ ಜರುಗಿದ ಹಿಂಸಾತ್ಮಕ ಪ್ರಕರಣಗಳು ಜರಗುತ್ತಲೇ ಇರಲಿಲ್ಲ. ಇಂತಹ ವಿಚಾರಣೆಗಳಲ್ಲಿ ಮನಶ್ಶಾಸ್ತ್ರಜ್ಞರು ಭಾಗವಹಿಸುತ್ತಿದ್ದುದರಿಂದ ಅವುಗಳಿಗೆ ಔರಸತ್ವ (ಕಾನೂನು ಸಮ್ಮತತೆ) ದೊರಕಿತು. ಅಲ್ಲದೆ, ಮುಂದೆ ವಿಚಾರಣೆ ನಡೆಸಿದವರು ಕಾನೂನು ಕ್ರಮಗಳನ್ನು ಎದುರಿಸಬೇಕಾದ ಸಂದರ್ಭ ಬಂದರೆ ಮನಶ್ಶಾಸ್ತ್ರಜ್ಞರ ಇರುವಿಕೆ ಒಂದು ರೀತಿಯ ರಕ್ಷಣಾ ಕವಚವಾಗುವ ಸಾಧ್ಯತೆಯೂ ಇತ್ತು ! ಈ ವಿಷಯಕ್ಕೆ ಸಂಬಂಧಿಸಿದಂತೆ ವಿಚಾರಣೆ ನಡೆಸಿದವರು ಪ್ರಶ್ನೆಗಳಿಗೆ ತುತ್ತಾದಾಗ, ಅವರು ಮನಶ್ಶಾಸ್ತ್ರಜ್ಞರ ಇರುವಿಕೆಯನ್ನು ಪ್ರಸ್ತಾಪಿಸಿ, ತಾವು ಬಳಸಿದ ವಿಧಾನಗಳೆಲ್ಲವೂ ನೈತಿಕವಾದವು ಹಾಗೂ ಕಾನೂನುಬದ್ಧವಾಗಿದ್ದವು ಎಂಬ ವಿಚಾರವನ್ನು ಮುಂದಿಡಬಹುದಿತ್ತು. ವಾಸ್ತವವಾಗಿ, ೨೦೦೫ರಲ್ಲಿ ಮಂಡಿಸಲ್ಪಟ್ಟ ಪಿಇಎನ್‌ಎಸ್ ವರದಿಯನ್ನು ೨೦೧೩ರವರೆಗೆ ಎಪಿಎ ಬಳಸುತ್ತಲೇ ಇತ್ತು. ಇದನ್ನು ರದ್ದುಗೊಳಿಸಿದ ತರುವಾಯ ಕೂಡ, ಮನಶ್ಶಾಸ್ತ್ರಜ್ಞರು ವಿಚಾರಣೆಗಳಲ್ಲಿ ಭಾಗವಹಿಸುವ ತಂತ್ರಗಳು ಜಾರಿಯಲ್ಲಿದ್ದವು ! ಈ ಪರಿಯ ಮನಶ್ಶಾಸ್ತ್ರಜ್ಞರ ಅನೈತಿಕ ನಡವಳಿಕೆಗೆ ಸಂಬಂಧಿಸಿದಂತೆ ವೃತ್ತಿಪರ ನೈತಿಕ ದೂರುಗಳು ದಾಖಲಾದರೆ, ಎಪಿಎ ಅಂತಹ ಮನಶ್ಶಾಸ್ತ್ರಜ್ಞರಿಗೆ ರಕ್ಷಣೆಯನ್ನು ಒದಗಿಸುತ್ತಿತ್ತು. ಎಪಿಎಯ ಇಂತಹ ಪ್ರಶ್ನಾರ್ಹ ನಡವಳಿಕೆಗೆ ಅದರ ನೈತಿಕತೆಯ ವ್ಯವಸ್ಥಾಪಕನಾಗಿದ್ದ ಸ್ಟೀಫನ್ ಬೆಹ್ನಕೆಯ ಕೃಪಾಕಟಾಕ್ಷವಿತ್ತು ! ಇವಕ್ಕೆಲ್ಲ ಕಲಶಪ್ರಾಯವಾಗಿ ಎಪಿಎಯ ಆಡಳಿತ ಮಂಡಲಿಯ ಗಮನಕ್ಕೆ ಬಾರದ ಒಂದು ಸಂಗತಿಯೂ ಇತ್ತು. ಅದೇ ಬೆಹ್ನಕೆ ವಿಚಾರಣೆ ನಡೆಸುವವರಿಗೆ ತರಬೇತಿ ನೀಡಲು ಪೆಂಟಗನ್‌ನಿಂದ ಪಡೆದ ಗುತ್ತಿಗೆ ! ಇಷ್ಟೆಲ್ಲ ಆಟಗಳು ತೆರೆಯಮರೆಯಲ್ಲಿ ಜರಗುತ್ತಿದ್ದರೂ ಎಪಿಎಯ ನಾಯಕತ್ವ ಮಾತ್ರ ಅದರ ಸದಸ್ಯರು ಗ್ವಾಂಟನಾಮೊದಲ್ಲಿದ್ದ ಕೈದಿಗಳ ಆರೋಗ್ಯ ಮತ್ತು ಕಲ್ಯಾಣವನ್ನು ರಕ್ಷಿಸುವ ಗುರಿಯನ್ನು ಹೊಂದಿದ್ದಾರೆ ಎಂದು ಸಾರುತ್ತಿತ್ತು.

**ಯುವ ಮನಶ್ಶಾಸ್ತ್ರಜ್ಞರು ಮಿಲಿಟರಿ ವೈದ್ಯಕೀಯ ನೈತಿಕ ಶಿಕ್ಷಣದಿಂದ ವಂಚಿತರಾಗಿದ್ದಾರೆ**

ಯುವ ಮನಶ್ಶಾಸ್ತ್ರಜ್ಞರಿಗೆ ಸೂಕ್ತವಾದ ಮಿಲಿಟರಿ ವೈದ್ಯಕೀಯ ಶಿಕ್ಷಣ ನೀಡಲಾಗುತ್ತಿಲ್ಲ. ಇದರ ಹಿಂದೆಯೂ ಒಂದು ಸಂಚಿದೆ ! ಈ ರೀತಿಯ ಶಿಕ್ಷಣದಿಂದ ವಂಚಿತರಾದ ಅನೇಕ ಯುವ ಮನಶ್ಶಾಸ್ತ್ರಜ್ಞರಿಗೆ ಈ ಕ್ಷೇತ್ರಕ್ಕೆ ಸಂಬಂಧಿಸಿದ ವಿವಿಧ ಸೂಕ್ಷ್ಮ ವಿಚಾರಗಳ ಅರಿವೇ ಇಲ್ಲ. ಕಳೆದ ವರ್ಷ ನನ್ನ ಸಹೋದ್ಯೋಗಿಗಳ ಜೊತೆ ಸೇರಿ ನಾನು ಒಂದು ನಿಬಂಧವನ್ನು ಪ್ರಕಟಿಸಿದೆ. ಅದರಲ್ಲಿ ಮನಃಶಾಸ್ತ್ರದಲ್ಲಿ ಪದವಿ ಪಡೆದವರ ವಿಷಯವಿತ್ತು. ಅಂತಹವರಲ್ಲಿ ಶೇ. ೭೪ರಷ್ಟು ಮಂದಿಗೆ ಮಿಲಿಟರಿ ವೈದ್ಯಕೀಯ ನೈತಿಕತೆ ಕುರಿತಂತೆ ಒಂದು ಗಂಟೆಗೂ ಕಡಿಮೆ ಅವಧಿಯ ಬೋಧನೆ ದೊರಕಿತ್ತು ! ಅಲ್ಲದೆ ಜಿನೀವಾ ಒಪ್ಪಂದದಂತೆ ಯಾವ ಸಂದರ್ಭಗಳಲ್ಲಿ ಅವರು ಒಂದು ಅನೈತಿಕ ಆದೇಶವನ್ನು ಪಾಲಿಸಬಾರದೆಂಬ ಪ್ರಶ್ನೆಗೆ ಕೇವಲ ಮೂರನೇ ಒಂದು ಭಾಗದಿಂದ ಅರ್ಧ ಭಾಗದಷ್ಟು ವಿದ್ಯಾರ್ಥಿಗಳು ಮಾತ್ರ ಸಮರ್ಪಕವಾಗಿ ಉತ್ತರಿಸಿದ್ದರು. ಇವು ನಾವು ಕಂಡುಕೊಂಡ ಸತ್ಯಗಳು !

ಜಿನೀವಾ ಒಪ್ಪಂದದಂತೆ ಕೈದಿಗಳು ತಮ್ಮ ಹೆಸರು, ಪದವಿ, ಕೆಲಸ ಮಾಡುತ್ತಿರುವ ವಿಭಾಗ, ಕ್ರಮಸಂಖ್ಯೆಯನ್ನು ಮಾತ್ರ ವಿಚಾರಣೆ ನಡೆಸುವವರಿಗೆ ನೀಡಬೇಕು. ಜೊತೆಗೆ ಕೈದಿಗಳಿಗೆ ಆಹಾರ, ವಸತಿ ಮತ್ತು ವೈದ್ಯಕೀಯ ಚಿಕಿತ್ಸೆಯನ್ನು ಒದಗಿಸಬೇಕು. ಅವರನ್ನು ಯಾವ ರೀತಿಯಲ್ಲೂ ಬೆದರಿಸಬಾರದು, ಹಿಂಸೆಗೆ ಗುರಿಮಾಡಬಾರದು ಹಾಗೂ ಅವಮಾನ ಮಾಡಬಾರದು. ಆದರೆ ಇವು ಎಷ್ಟರಮಟ್ಟಿಗೆ ಜಾರಿಯಲ್ಲಿವೆ ?

ಹಾಫ್‌ಮನ್ ವರದಿ ಪ್ರಕಟವಾದ ತರುವಾಯ ಎಪಿಎನ ನೈತಿಕತೆಯ ವ್ಯವಸ್ಥಾಪಕ ಸ್ಟೀವ್ ಎಂಬಾತ ಬೆಹ್ನಕೆ ಸಂಸ್ಥೆಯನ್ನು ತೊರೆದಿದ್ದಾರೆ. ಇದು ಅವರ ಸ್ವಯಂ ನಿರ್ಧಾರವಾಗಿತ್ತೋ ಅಥವಾ ಇಲ್ಲವೋ ಎಂಬುದು ಸ್ಪಷ್ಟವಾಗಿಲ್ಲ. ಆದರೆ ಎಪಿಎ ಒಂದು ಅಧಿಕೃತ ಹೇಳಿಕೆಯಲ್ಲಿ ಈ ವರದಿ ಬಹಿರಂಗಗೊಳಿಸಿದ ಕಳವಳಕಾರಿ ಮಾಹಿತಿಗಳು/ತೀರ್ಮಾನಗಳನ್ನು ಗುರುತಿಸಿ, ಅವು ತಮ್ಮ ಸಂಸ್ಥೆ ಮೂಲ ಮೌಲ್ಯಗಳನ್ನು ಎತ್ತಿ ಹಿಡಿಯುವುದರಲ್ಲಿ ವಿಫಲವಾಗಿದೆ ಎಂಬುದನ್ನು ತೋರಿಸಿವೆ ಎಂದು ಒಪ್ಪಿಕೊಂಡಿದೆ. ಜೊತೆಗೆ ಸಂಸ್ಥೆ ಈ ನಿಟ್ಟಿನಲ್ಲಿ ಹಲವು ಶಿಫಾರಸುಗಳನ್ನು ನೀಡಿದೆ ಎಂದು ಈ ಹೇಳಿಕೆಯಲ್ಲಿ ತಿಳಿಸಲಾಗಿದೆ. ಅಲ್ಲದೆ, ಸಂಸ್ಥೆಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯಾಗಿದ್ದ ನಾರ್ಮನ್ ಆ್ಯಂಡರ್‌ಸನ್ ಉಪ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯಾಗಿದ್ದ ಮೈಖೆಲ್ ಹೋನಕೆರ್ ಮತ್ತು ಸಾರ್ವಜನಿಕ ಹಾಗೂ ಸದಸ್ಯರ ಸಂವಾಹನಾ ಕಾರ್ಯನಿರ್ವಾಹಕ ನಿರ್ದೇಶಕರಾಗಿದ್ದ ರಿಯ ಫಾರ್ಬರ್‌ಮನ್ ನಿರ್ಗಮಿಸಿದ್ದಾರೆ ಎಂದು ಎಪಿಎ ಘೋಷಿಸಿದೆ.

ಈ ವಿಷಯಕ್ಕೆ ಸಂಬಂಧಿಸಿದಂತೆ, ಎಪಿಎ ಇನ್ನೊಂದು ಮಹತ್ವದ ತೀರ್ಮಾನವನ್ನು ತೆಗೆದುಕೊಳ್ಳಬೇಕು. ಅದೆಂದರೆ ಈ ಸಂಸ್ಥೆ ಛೀಮಾರಿ ಹಾಕಿದಾಗಲೂ, ಅದು ವಿಚಾರಣೆಗಳಿಗೆ ಮತ್ತು ಹಿಂಸಾಕೃತ್ಯಗಳಿಗೆ ಸಹಕಾರ ನೀಡುವುದನ್ನು (ಕಳೆದ ಒಂದು ದಶಕದಿಂದ) ಗಟ್ಟಿಯಾಗಿ ಪ್ರತಿಭಟಿಸುತ್ತಿದ್ದ ಭಿನ್ನಮತೀಯ ಮನಶ್ಶಾಸ್ತ್ರಜ್ಞರನ್ನು ಸಾರ್ವಜನಿಕವಾಗಿ ಹೊಗಳಬೇಕು. ಜೊತೆಗೆ, ವೃತ್ತಿನಿರತ ಮನಶ್ಶಾಸ್ತ್ರಜ್ಞರಿಗೆ ಮತ್ತು ಶಿಕ್ಷಣ ಪಡೆಯುತ್ತಿರುವ ಮನಃಶಾಸ್ತ್ರ ವಿದ್ಯಾರ್ಥಿಗಳಿಗೆ ನೈತಿಕ ಶಿಕ್ಷಣವನ್ನು ನೀಡುವ ನಿಟ್ಟಿನಲ್ಲಿ ಎಪಿಎ ಸರ್ಕಾರಕ್ಕೆ ಸೂಕ್ತವಾಗಿ ಮನವರಿಕೆ ಮಾಡಿಕೊಡಬೇಕು.

ಅಮೆರಿಕ ಅನೇಕ ಅಮಾಯಕ ಕೈದಿಗಳಿಗೆ ಚಿತ್ರಹಿಂಸೆ ನೀಡಿದೆ. ಸೆನೇಟ್ ನೀಡಿದ ವರದಿಯೂ ಸಹ, ತಪ್ಪಾಗಿ ಬಂಧಿಸಲ್ಪಟ್ಟ ವ್ಯಕ್ತಿಗಳಿಗೆ ಹಿಂಸೆ ನೀಡಿರುವುದನ್ನು ಪ್ರಸ್ತಾಪಿಸಿದೆ. ಈ ಸಂಗತಿ ನಮ್ಮ ದೇಶದ ಅತ್ಯಂತ ಮಹೋನ್ನತ ನೈತಿಕ ಚ್ಯುತಿಗಳಲ್ಲಿ ಒಂದಾಗಿದೆ. ಇದರಲ್ಲಿ ಒಂದು ಪ್ರಮುಖ ಆರೋಗ್ಯ ರಕ್ಷಣಾ ಸಂಘ ಶಾಮೀಲಾದದ್ದು ಅನ್ಯಾಯದ ಪರಮಾವಧಿಯ ವಿಷಯವೇ ಸರಿ.

*(ಜೆ. ವೆಸ್ಲಿ ಬಾಯ್ಡ್ 'ದಿ ಕಾನ್ವರ್ಸೇಷನ್'ನಲ್ಲಿ ಬರೆದ ಲೇಖನ)*


ಇಂಗ್ಲಿಷ್ ಮೂಲ : **ಜೆ. ವೆಸ್ಲಿ ಬಾಯ್ಡ್**
ಕನ್ನಡಕ್ಕೆ : **ಮ. ಶ್ರೀ. ಮುರಳಿ ಕೃಷ್ಣ**
ನಂ. ೩೮, ೩ನೇ ಅಡ್ಡರಸ್ತೆ, ರಾಜಾ ಗಾರ್ಡನಿಯಾ ಬಡಾವಣೆ
ತುರಹಳ್ಳಿ, ಸುಬ್ರಹ್ಮಣ್ಯಪುರ ಅಂಚೆ, ಬೆಂಗಳೂರು – ೫೬೦ ೦೬೧

# ಭಾರತದ ಹಣೆಬರಹ ಇಂಥಾ ಶಿಕ್ಷಕರಿಂದ ರೂಪಿಸಲ್ಪಡುತ್ತಿದೆಯೇ?



ಎಲ್ಲರನ್ನೂ ಒಳಗೊಳ್ಳುವ ಶಿಕ್ಷಣ ಎಂಬ ಪರಿಕಲ್ಪನೆ ಕೇಂದ್ರದ ಹೊಸ ಶಿಕ್ಷಣ ಹಕ್ಕು ಕಾಯ್ದೆಯ ಪ್ರಧಾನ ಆಶಯಗಳಲ್ಲೊಂದು. ಈ ಕಾರಣಕ್ಕೋಸ್ಕರವೇ ಸರಕಾರೇತರ ಶಾಲೆಗಳಲ್ಲಿ ತಳವರ್ಗದ ಮಕ್ಕಳಿಗೆ ಶೇಕಡ ೨೫ರಷ್ಟು ಪ್ರವೇಶ ನೀಡಬೇಕೆಂಬ ನಿಯಮ ಕಾಯ್ದೆಯಲ್ಲಿ ಸೇರ್ಪಡೆಗೊಂಡಿದೆ. ಅಂದರೆ ಸ್ಥಿತಿವಂತರ ಮತ್ತು ಬಡವರ ಮಕ್ಕಳು ಯಾವುದೇ ಭೇದಭಾವ ಇಲ್ಲದೆ ತರಗತಿಯಲ್ಲಿ ಜೊತೆಯಾಗಿಯೇ ಕುಳಿತು ಕಲಿಯಬೇಕೆಂದು ಸರಕಾರ ಉದ್ದೇಶಿಸಿದೆ.

**ಸಿ. ಎಚ್. ಕೃಷ್ಣಶಾಸ್ತ್ರಿ ಬಾಳಿಲ**
**ಸುರೇಶ ಭಟ್ ಬಾಕ್ರಬೈಲು**

**ಬೆಂ**ಗಳೂರು ಮೂಲದ 'ಚಿಲ್ಡ್ರನ್ಸ್ ಮೂವ್‌ಮೆಂಟ್ ಫಾರ್ ಸಿವಿಕ್ ಅವೇರ್‌ನೆಸ್' ಎಂಬ ಸ್ವಯಂಸೇವಾ ಸಂಸ್ಥೆ ದೇಶದ ೧೧ ನಗರಗಳಲ್ಲಿ ನಡೆಸಿದ ಶಿಕ್ಷಕರ ಸಮೀಕ್ಷೆಯೊಂದು ತುಂಬ ಆಘಾತಕಾರಿ ಹಾಗೂ ಆತಂಕಕಾರಿ ಅಂಶಗಳನ್ನು ಹೊರಹಾಕಿದೆ. ೩೩೦ ಪ್ರೌಢಶಾಲೆಗಳ ೭೫೭ ಸಮಾಜವಿಜ್ಞಾನ ಶಿಕ್ಷಕರನ್ನು ಒಳಗೊಂಡಿದ್ದ ಈ ಸಮೀಕ್ಷೆಯ ವರದಿ ಪ್ರಕಾರ ಸುಮಾರು ೬೦ ಪ್ರತಿಶತ ಶಿಕ್ಷಕರು ಸಮಾಜದ ವಿಭಿನ್ನ ವರ್ಗಗಳಿಗೆ ಸೇರಿದವರಿಗಿಂತ ಒಂದೇ ಸಾಮಾಜಿಕ ಮತ್ತು ಆರ್ಥಿಕ ವರ್ಗದ ಮಕ್ಕಳು ತರಗತಿಯಲ್ಲಿದ್ದರೆ ಉತ್ತಮವೆಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ! ಇನ್ನು ಶೇಕಡ ೪೭ರಷ್ಟು ಶಿಕ್ಷಕರು ಕೆಲವು ಸಂದರ್ಭಗಳಲ್ಲಿ ಸರ್ವಾಧಿಕಾರಿ ವ್ಯವಸ್ಥೆಯ ದೇಶವನ್ನು ಉತ್ತಮವಾಗಿ ಮುನ್ನಡೆಸಬಹುದೆಂದು ಹೇಳಿದ್ದಾರೆ ಮತ್ತು ಶೇಕಡ ೩೫ರಷ್ಟು ಮಂದಿ ಇದಕ್ಕೆ ತುಸುಮಟ್ಟಿನ ಸಮ್ಮತಿಯನ್ನು ಸೂಚಿಸಿದ್ದಾರೆ! ಶಿಕ್ಷಕರ ಈ ನಿಲುವುಗಳನ್ನು ಅತ್ಯಂತ ಗಂಭೀರವಾಗಿ ಪರಿಗಣಿಸಿ ಶೈಕ್ಷಣಿಕ ಮತ್ತು ಸಾಮಾಜಿಕ ದೃಷ್ಟಿಯಿಂದ ವಿಶ್ಲೇಷಿಸುವ ಅಗತ್ಯ ಇದೆ. ಏಕೆಂದರೆ ಇವರ ಇಂತಹ ನಿರ್ಣಯಗಳ ಹಿಂದೆ ಅನೇಕ ತಪ್ಪು ತಿಳಿವಳಿಕೆಗಳಿರುವಂತೆ ತೋರುತ್ತದೆ.

**ವರ್ಗಭೇದಕ್ಕೆ ಒಲವು**

ಸ್ಥಿತಿವಂತ ವರ್ಗಗಳ ಮಕ್ಕಳು ಕಲಿಕೆಯಲ್ಲಿ ಹೆಚ್ಚು ಬುದ್ಧಿವಂತರು, ತಳವರ್ಗಗಳ ಮಕ್ಕಳು ನಿಧಾನಕಲಿಕೆಯವರು ಎಂಬ ಭಾವನೆ ಹಲವು ಶಿಕ್ಷಕರಲ್ಲಿ ಮನೆಮಾಡಿದೆ. ಆದರೆ ವಾಸ್ತವವಾಗಿ ಕಲಿಕಾಸಕ್ತಿ, ಬುದ್ಧಿಶಕ್ತಿ, ಕೌಶಲ, ಸಾಮರ್ಥ್ಯ ಇವ್ಯಾವುವೂ ಮೇಲ್ವರ್ಗದವರ ಏಕಸ್ವಾಮ್ಯವಲ್ಲ. ಮೇಲ್ನೋಟಕ್ಕೆ ಇವೆಲ್ಲವುಗಳಲ್ಲಿ ವರ್ಗ ವ್ಯತ್ಯಾಸಗಳಿರುವಂತೆ ತೋರಿದರೂ ಅದರ ಕಾರಣಗಳು ಸಮಾಜೋ-ಆರ್ಥಿಕ ಮೂಲಗಳಲ್ಲಿವೆ. ಉದಾಹರಣೆಗೆ ಆರ್ಥಿಕ ಮತ್ತು ಸಾಮಾಜಿಕ ಹಿಂದುಳಿದಿರುವಿಕೆ, ಮೂಲಸೌಲಭ್ಯಗಳ ಕೊರತೆ, ಅನಕ್ಷರಸ್ಥ ಕೌಟುಂಬಿಕ ಹಿನ್ನೆಲೆ, ಕಲಿಕಾ ವಾತಾವರಣ ಇಲ್ಲದಿರುವಿಕೆ ಮತ್ತು ಕೆಲವೊಮ್ಮೆ ಪೋಷಕರ ಪ್ರೋತ್ಸಾಹದ ಅಭಾವ ಇತ್ಯಾದಿ. ಸೂಕ್ತ ವಾತಾವರಣವಿದ್ದಲ್ಲಿ ಹಿಂದುಳಿದ ವರ್ಗಗಳ ಮಕ್ಕಳೂ ಉತ್ತಮ ಕಲಿಕಾ ಸಾಮರ್ಥ್ಯವನ್ನು ತೋರಬಲ್ಲರು ಎಂಬುದಕ್ಕೆ ಇತ್ತೀಚಿನ ಎಸ್.ಎಸ್.ಎಲ್.ಸಿ. ಮತ್ತು ಪಿ.ಯು.ಸಿ. ಪರೀಕ್ಷೆಗಳಲ್ಲಿ ಸರ್ಕಾರಿ ಶಿಕ್ಷಣಸಂಸ್ಥೆಗಳ ಗಣನೀಯ ಸಾಧನೆಯೂ ಸೇರಿದಂತೆ ಅನೇಕ ನಿದರ್ಶನಗಳನ್ನು ಕೊಡಬಹುದು. ಎಲ್ಲರಿಗೂ ಗೊತ್ತಿರುವ ಹಾಗೆ ಇವತ್ತು ಸರ್ಕಾರಿ ಶಾಲೆಗಳಲ್ಲಿ ಕಲಿಯುವ ಮಕ್ಕಳಲ್ಲಿ ಹೆಚ್ಚೂಕಡಿಮೆ ಎಲ್ಲರೂ ತಳವರ್ಗಗಳಿಂದ ಬಂದವರು. ಇಲ್ಲಿ ಪಾಠ ಏನೆಂದರೆ, ಸದ್ಯ ನಮ್ಮ ಸಮಾಜದಲ್ಲಿ ಇರುವ ಅಗಾಧ ಅಸಮಾನತೆಯನ್ನು ಹೋಗಲಾಡಿಸಿದರೆ ಅಥವಾ ಕನಿಷ್ಠ ಮಟ್ಟಕ್ಕೆ ಇಳಿಸಿದರೆ ತಳವರ್ಗಗಳ ಮಕ್ಕಳೂ ಇತರರಂತೆ ಚೆನ್ನಾಗಿ ಕಲಿತು ಮೇಲ್ವರ್ಗದವರಿಗೆ ಸಮಾನರಾಗಿ ನಿಲ್ಲಬಲ್ಲರು. ಘನತೆಯಿಂದ ಬಾಳಬಲ್ಲರು.

ಸಹಜ ಜೀವನಾನುಭವವೇ ಶಿಕ್ಷಣದ ಜೀವಾಳ. ಒಂದರ್ಥದಲ್ಲಿ ಬದುಕೇ ಶಿಕ್ಷಣ. ಈ ದೃಷ್ಟಿಯಿಂದ ನೋಡಿದಾಗ ಈ ನೆಲದ ಸುಖ ದುಃಖ, ನೋವು ನಲಿವು, ಸಂತಸ, ಸಂಕಟ ಇವೆಲ್ಲವೂ ವೈಯಕ್ತಿಕ ಅನುಭವಗಳಾಗಿ ಬದುಕು ಅರ್ಥಪೂರ್ಣ ಎನಿಸಬೇಕಾದರೆ ಸಮಾಜದ ವಿಭಿನ್ನ ಗುಂಪುಗಳ ಮಕ್ಕಳೆಲ್ಲ ತರಗತಿಯಲ್ಲಿ ಕಲೆತು ಕಲಿಯಬೇಕು. ಸಿರಿವಂತರ ಮಕ್ಕಳು, ಚಮ್ಮಾರ, ಕಮ್ಮಾರ, ಕುಂಬಾರ, ನೇಕಾರ, ಬಡಗಿ, ಬೆಸ್ತ, ರೈತ, ಕೂಲಿ ಮೊದಲಾದ ನೂರಾರು ವೃತ್ತಿಕಾರರ ಮಕ್ಕಳು, ವಿವಿಧ ವರ್ಗ, ಜಾತಿ, ಧರ್ಮಗಳಿಗೆ ಸೇರಿದ ಮಕ್ಕಳೆಲ್ಲರೂ ಒಟ್ಟಾಗಿ ಕಲಿತು ಸಾಮಾಜಿಕೀಕರಣಗೊಳ್ಳಬೇಕು. ಪ್ರೊ॥ ಡಿ. ಎಸ್. ಕೊಠಾರಿಯವರ ಅಧ್ಯಕ್ಷತೆಯ ಶಿಕ್ಷಣ ಆಯೋಗವನ್ನೂ (೧೯೬೪-೬೬) ಒಳಗೊಂಡಂತೆ ದೇಶಾದ್ಯಂತ ಶಿಕ್ಷಣತಜ್ಞರು ಜಾರಿಗೆ ತರಲು ಆಗ್ರಹಿಸುತ್ತಿರುವ ಸಮಾನ ಶಿಕ್ಷಣ ನೀತಿಯ ತಳಹದಿ ಇದೇ ಆಗಿದೆ. ಇದನ್ನು ೨೦೦೫ರಲ್ಲಿ ಸರ್ವೋಚ್ಚ ನ್ಯಾಯಾಲಯವೂ ಪರೋಕ್ಷವಾಗಿ ಹೇಳಿದೆ. "ಸಂವಿಧಾನದ ಪೀಠಿಕೆಯಲ್ಲಿ ಹೇಳಲಾಗಿರುವ ಸಾಮಾಜಿಕ, ಆರ್ಥಿಕ, ರಾಜಕೀಯ ನ್ಯಾಯ; ಸ್ವಾತಂತ್ರ್ಯ; ಸಮಾನತೆ ಮತ್ತು ಸೋದರತೆಯ ಉತ್ಕೃಷ್ಟ ಗುರಿಗಳನ್ನು ಸಾಧಿಸಬೇಕಿದ್ದರೆ ಭಾರತೀಯ ಸಮಾಜಕ್ಕೆ ಅತ್ಯುತ್ತಮ ಶಿಕ್ಷಣವನ್ನು ಒದಗಿಸಬೇಕು ಎನ್ನುವುದನ್ನು ಚಿಂತಕರು, ದಾರ್ಶನಿಕರು, ವಿದ್ವಾಂಸರು



ಸಂಪೂರ್ಣವಾಗಿ ಒಪ್ಪಿಕೊಂಡಿದ್ದಾರೆ" (ಸು ಕೋ [೨೦೦೫] ೬ SCC ೫೩೭).

ಎಲ್ಲರನ್ನೂ ಒಳಗೊಳ್ಳುವ ಶಿಕ್ಷಣ ಎಂಬ ಪರಿಕಲ್ಪನೆ ಕೇಂದ್ರದ ಹೊಸ ಶಿಕ್ಷಣ ಹಕ್ಕು ಕಾಯ್ದೆಯ ಪ್ರಧಾನ ಆಶಯಗಳಲ್ಲೊಂದು. ಈ ಕಾರಣಕ್ಕೋಸ್ಕರವೇ ಸರಕಾರೇತರ ಶಾಲೆಗಳಲ್ಲಿ ತಳವರ್ಗದ ಮಕ್ಕಳಿಗೆ ಶೇಕಡ ೨೫ರಷ್ಟು ಪ್ರವೇಶ ನೀಡಬೇಕೆಂಬ ನಿಯಮ ಕಾಯ್ದೆಯಲ್ಲಿ ಸೇರ್ಪಡೆಗೊಂಡಿದೆ. ಅಂದರೆ ಸ್ಥಿತಿವಂತರ ಮತ್ತು ಬಡವರ ಮಕ್ಕಳು ಯಾವುದೇ ಭೇದಭಾವ ಇಲ್ಲದೆ ತರಗತಿಯಲ್ಲಿ ಜೊತೆಯಾಗಿಯೇ ಕುಳಿತು ಕಲಿಯಬೇಕೆಂದು ಸರಕಾರ ಉದ್ದೇಶಿಸಿದೆ. ಕೊಠಾರಿ ಆಯೋಗವೂ ಇದನ್ನೇ ಇನ್ನೊಂದು ರೀತಿಯಲ್ಲಿ ಹೇಳಿದೆ: "ಸ್ಥಿತಿವಂತ ಹೆತ್ತವರು ತಮ್ಮ ಮಕ್ಕಳನ್ನು ಪ್ರತ್ಯೇಕಿಸುವ ಮೂಲಕ ಅವರು ಬಡಮಕ್ಕಳ ಬದುಕು ಮತ್ತು ಅನುಭವಗಳನ್ನು ಹಂಚಿಕೊಳ್ಳದಂತೆ, ಅವರಿಗೆ ಬದುಕಿನ ವಾಸ್ತವಗಳ ಪರಿಚಯ ಆಗದಂತೆ ಮಾಡುತ್ತಾರೆ. ಅಂಥವರು ಸಾಮಾಜಿಕ ಒಗ್ಗಟ್ಟನ್ನು ದುರ್ಬಲಗೊಳಿಸುವುದರೊಂದಿಗೆ ತಮ್ಮ ಮಕ್ಕಳ ಶಿಕ್ಷಣವನ್ನು ಸತ್ವಹೀನವೂ ಅಪೂರ್ಣವೂ ಆಗಿಸುತ್ತಾರೆ" (೧.೩೭).

ತರಗತಿಗಳಲ್ಲಿ ಪ್ರತ್ಯೇಕತೆಗೆ ಸಂಬಂಧಪಟ್ಟ ಇನ್ನೊಂದು ಮುಖ್ಯ ವಿಷಯವನ್ನು ಇಲ್ಲಿ ಪ್ರಸ್ತಾಪಿಸಬೇಕು. ಅದು ಲಿಂಗಭೇದ. ಕೆಲವು ದಶಕಗಳ ಹಿಂದೆ ಹೆಣ್ಣು ಮತ್ತು ಗಂಡುಮಕ್ಕಳಿಗಾಗಿ ಪ್ರತ್ಯೇಕ ಶಾಲೆ, ಕಾಲೇಜುಗಳು ಸಾಮಾನ್ಯವಾಗಿತ್ತು. ಆದರೆ ಶಿಕ್ಷಣಶಾಸ್ತ್ರದಲ್ಲಾದ ಅಧ್ಯಯನ, ಸಂಶೋಧನೆಗಳಿಂದ ಉಭಯಲಿಂಗಿಗಳೂ ಒಟ್ಟಾಗಿ ಕಲಿಯುವುದೇ ಹೆಚ್ಚು ಪರಿಣಾಮಕಾರಿ ಎಂದು ತಿಳಿದುಬಂದುದರಿಂದ ಇಂದು ಇಂತಹ ಭೌತಿಕ ಪ್ರತ್ಯೇಕತೆಗಳು ತುಂಬ ವಿರಳ. ಸಾಮಾಜಿಕ ವರ್ಗಭೇದ ಮಾಡುವುದಷ್ಟೆ ಅಲ್ಲ, ವೇಗಕಲಿಕೆಯ ಮತ್ತು ನಿಧಾನಕಲಿಕೆಯ ಮಕ್ಕಳನ್ನು ಪ್ರತ್ಯೇಕಿಸಿ ಬೇರೆ ಬೇರೆ ಕೊಠಡಿಗಳಲ್ಲಿ ಕೂರಿಸಿ ತರಗತಿ ನಡೆಸುವುದೂ ವಿಹಿತವಲ್ಲ ಎಂದು ಶಿಕ್ಷಣತಜ್ಞರು ಪ್ರತಿಪಾದಿಸುತ್ತಾರೆ. ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು ೨೦೦೫ ಕೂಡ, "ಭಿನ್ನ ವರ್ಗಗಳ, ಭಿನ್ನ ಸಾಮರ್ಥ್ಯಗಳ ಮಕ್ಕಳೆಲ್ಲ ತರಗತಿಯಲ್ಲಿ ಸಮ್ಮಿಶ್ರಗೊಂಡು ಕಲಿಕಾಂಶಗಳಲ್ಲಿ ಪರಸ್ಪರ ಸಹಕಾರ ಮತ್ತು ಸಹಯೋಗಭಾವ ಕಂಡುಬರಬೇಕಾದುದು ಶಿಕ್ಷಣದ ಮುಖ್ಯ ಲಕ್ಷಣಗಳಲ್ಲೊಂದು. ಇದರ ಹೊರತಾದ ಸ್ಪರ್ಧಾತ್ಮಕ ಮನೋಭಾವವನ್ನೆಂದೂ ತರಗತಿಯ ಕಲಿಕೆಯಲ್ಲಿ ಪ್ರೋತ್ಸಾಹಿಸ ಬಾರದು" ಎಂದು ಸ್ಪಷ್ಟವಾಗಿ ಹೇಳಿದೆ. ಶಿಕ್ಷಣದ ಮೂಲ ಉದ್ದೇಶ ಎಲ್ಲೋ ಮರೆಯಾಗಿ ಅದು ಕೇವಲ ಅಂಕ ಗಳಿಕೆ, ಬಹುಮಾನ ಗೆಲ್ಲುವಿಕೆ, ನೌಕರಿ ಗಿಟ್ಟಿಸುವಿಕೆಯಂತಹ ಅಪ್ರಾಮುಖ್ಯ ಗುರಿಗಳಿಗಷ್ಟೇ ಸೀಮಿತಗೊಂಡಿರುವ ಇಂದಿನ ದಿನಗಳಲ್ಲಿ ಕೊಠಾರಿ ಆಯೋಗ ತನ್ನ ಅಂತಿಮ ವರದಿಯಲ್ಲಿ (೧.೦೧) ಹೇಳಿರುವ 'ಇಂದು ಭಾರತದ ಹಣೆಬರಹ ಅದರ ತರಗತಿಗಳಲ್ಲಿ ರೂಪಿಸಲ್ಪಡುತ್ತಿದೆ' ಎಂಬ ಮುತ್ತಿನಂಥ ಮಾತು ಎಂದೆಂದಿಗೂ ಪ್ರಸ್ತುತ. ತರಗತಿಯಲ್ಲಿ ಮಾಡುವ ವರ್ಗಭೇದ ಮುಂದೆ ಸಮಾಜದಲ್ಲಿಯೂ ಮುಂದುವರಿದು ಎಲ್ಲಾ ಬಗೆಯ ಅಸಮಾನತೆಗಳ ಹೆಚ್ಚಳಕ್ಕೆ ಕಾರಣವಾಗಿ ಸಾಮಾಜಿಕ ನ್ಯಾಯ ಎಂಬುದು ಎಲ್ಲ ಕಾಲಗಳಿಗೂ ಕನಸಾಗಿ ಉಳಿಯಬಹುದು. ಭಾರತದ ಸಂವಿಧಾನದ ಪ್ರಧಾನ ಆಶಯವೆ ಮರೀಚಿಕೆ ಯಾಗಬಹುದು. ಶಿಕ್ಷಣ ಯಾವತ್ತೂ ಸಾಮಾಜಿಕ ಬದಲಾವಣೆಯ ಸಾಧನ ವಾಗಬೇಕೇ ಹೊರತು ಯಥಾಸ್ಥಿತಿ ಕಾಯ್ದುಕೊಳ್ಳಲು ಪೂರಕವಾಗಬಾರದು ಎಂಬುದನ್ನು ನಾವು ನೆನಪಿನಲ್ಲಿಡಬೇಕು.

**ಸರ್ವಾಧಿಕಾರಿ ಆಳ್ವಿಕೆಯ ಬಯಕೆ**

ಇತಿಹಾಸದ ಪುಟಗಳನ್ನು ತೆರೆದರೆ ಹಿಂದಿನ ಅನೇಕಾನೇಕ ಕುಖ್ಯಾತ ನಿರಂಕುಶ ಪ್ರಭುತ್ವಗಳು ಜನಸಾಮಾನ್ಯರ ಶೋಷಣೆ, ದಬ್ಬಾಳಿಕೆಯಲ್ಲಿ ನಿರತವಾಗಿದ್ದ ಹೇರಳ ಉದಾಹರಣೆಗಳು ಕಾಣಸಿಗುತ್ತವೆ. ಆದುದರಿಂದಲೇ, ಇತಿಹಾಸ ಓದಿ ಅದನ್ನೇ ಪಾಠ ಮಾಡುವ ಸಮಾಜವಿಜ್ಞಾನ ಅಧ್ಯಾಪಕರು ಸರ್ವಾಧಿಕಾರ ಬೇಕು ಎನ್ನುವಾಗ ಸಖೇದಾಶ್ಚರ್ಯವಾಗುತ್ತದೆ. ಇವರೆಲ್ಲ ರಾಜಪ್ರಭುತ್ವ, ಸರ್ವಾಧಿಕಾರ ಮುಂತಾದ ಜನಕಂಟಕ ಪ್ರಭುತ್ವಗಳು ಅಂತಿಮವಾಗಿ ವಿನಾಶವನ್ನಪ್ಪಿರುವ ಬಗ್ಗೆ ತಮ್ಮ ಪದವಿಯ ಓದು ಮತ್ತು ತದನಂತರದ ತರಬೇತಿಯ ಕಾಲದಲ್ಲಿ ಕಲಿತಿಲ್ಲವೆನ್ನಲು ಸಾಧ್ಯವೇ? ಅಂತಹ ಜನಪೀಡಕ ಪ್ರಭುತ್ವಗಳಡಿ ಪಡೆದ ಅನುಭವಗಳ ಹಿನ್ನೆಲೆಯಲ್ಲಿಯೆ ಹೆಚ್ಚಿನ ದೇಶಗಳು ತುಲನಾತ್ಮಕವಾಗಿ ತಕ್ಕಮಟ್ಟಿಗೆ ಉತ್ತಮವಾಗಿರುವ ಸಂಸದೀಯ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಆರಿಸಿಕೊಂಡಿವೆ. ವಿಶ್ವದ ಅನೇಕ ರಾಜಕೀಯ ಶಾಸ್ತ್ರಜ್ಞರು ವಿಶ್ಲೇಷಿಸಿರುವಂತೆ ಸಂಸದೀಯ ಪ್ರಜಾಪ್ರಭುತ್ವ ಒಂದು ಅತ್ಯುತ್ತಮ ಆಡಳಿತ ವ್ಯವಸ್ಥೆಯೇನೂ ಅಲ್ಲ. ಅದರಲ್ಲಿ ಹಲವು ಅರೆಕೊರೆಗಳಿವೆ. ಆದರೂ ಸದ್ಯ ನಮ್ಮ ಆಯ್ಕೆಯ ತಟ್ಟೆಯಲ್ಲಿ ಇದಕ್ಕಿಂತ ಉತ್ತಮವಾದ ಪರ್ಯಾಯ ವ್ಯವಸ್ಥೆ ಲಭ್ಯವಿಲ್ಲ (ನಮ್ಮಲ್ಲಿ ಅನೇಕರ ಕೊರಗೂ ಇದೇ ಆಗಿದೆ).

**ಗಂಭೀರ ಅಧ್ಯಯನ ಆಗಲೇಬೇಕು**

ಒಟ್ಟಿನಲ್ಲಿ ಸಮಾಜವಿಜ್ಞಾನ ಶಿಕ್ಷಕರೇ ಸಮತೆಯ ತತ್ವ ಹಾಗೂ ಸಾಮಾಜಿಕ ನ್ಯಾಯಕ್ಕೆ ಒಗ್ಗದ ವರ್ಗನೀತಿಯನ್ನು ಬೆಂಬಲಿಸಿ ಬಹುತ್ವವನ್ನು ಅಲ್ಲಗಳೆಯುತ್ತಾರೆ ಮತ್ತು ಸರ್ವಾಧಿಕಾರಿ ವ್ಯವಸ್ಥೆಗೆ ಒಲವು ತೋರುತ್ತಾರೆಂದರೆ ಈ ಪಾಠದ ಮೂಲ ಉದ್ದೇಶವೇ ಕಳೆದುಹೋದಂತೆ. ಇಂತಹ ಮನೋಧರ್ಮ ಬೆಳೆದುಬರುವಲ್ಲಿ ಅವರು ಪಡೆದ ಶಿಕ್ಷಕ ತರಬೇತಿಯ ಲೋಪದೋಷಗಳ ಪಾಲೂ ಸಾಕಷ್ಟಿದೆ. ಪ್ರಜಾಪ್ರಭುತ್ವದ ಆಶಯಗಳಿಗೆ, ಸದ್ಯದ ಸಾಮಾಜಿಕ ಸಂದರ್ಭಗಳಿಗೆ ಸ್ಪಂದಿಸದ ಹಳೇ ಮಾದರಿಯ ಪಠ್ಯಕ್ರಮವೂ ಇದಕ್ಕೆ ಇನ್ನೊಂದು ಕಾರಣ. ಇವೆಲ್ಲವೂ ಸೇರಿಕೊಂಡು ಶಿಕ್ಷಕರೂ ತರಗತಿ ಗಳಲ್ಲಿ ಇಂತಹ ವರ್ಗ ತಾರತಮ್ಯವನ್ನು ಬೆಂಬಲಿಸುವಂತೆ ಮತ್ತು ಸರ್ವಾಧಿಕಾರವನ್ನು ಬಯಸುವಂತೆ ಮಾಡಿವೆ ಎನ್ನಬಹುದು. ಶಿಕ್ಷಕರ ದೊಡ್ಡದೊಂದು ವರ್ಗ ಇಂತಹ ಅಸಂಗತ ವಿಚಾರಗಳನ್ನು ಬೆಂಬಲಿಸಿರುವ ಬೆಳವಣಿಗೆಯ ಜೊತೆ ೨೦೧೪ರ ಚುನಾವಣೆಗಳಲ್ಲಿ ವ್ಯಕ್ತವಾಗಿರುವಂತೆ ಇಂದಿನ ಯುವಪೀಳಿಗೆಯಲ್ಲಿಯೂ ಅನೇಕ ಮಂದಿ ಸರ್ವಾಧಿಕಾರದ ಆರಂಭಿಕ ಹಂತವಾದ ವ್ಯಕ್ತಿಪೂಜೆಗೆ ಒಲವು ತೋರುತ್ತಿರುವ ವಾಸ್ತವವೂ ನಮ್ಮ ಮುಂದಿದೆ. ಇಂತಹ ಪರಿಸ್ಥಿತಿಯಲ್ಲಿ ಪ್ರಸಕ್ತ ಶಿಕ್ಷಣವ್ಯವಸ್ಥೆ ಮತ್ತು ಶಿಕ್ಷಕರ ಶಿಕ್ಷಣದ ಕುರಿತು ಸಮಾಜಶಾಸ್ತ್ರಜ್ಞರಿಂದ ಗಂಭೀರ ಅಧ್ಯಯನ ಆಗಲೇಬೇಕಾಗಿದೆ.

೬೦ರ ದಶಕದ ಶಿಕ್ಷಣ ವ್ಯವಸ್ಥೆಯ ದುರವಸ್ಥೆ ಕುರಿತು ಕೊಠಾರಿ ಆಯೋಗದ ಟಿಪ್ಪಣಿಯೊಂದನ್ನು ಗಮನಿಸಿ : "ಭಾರತದಲ್ಲಿ ವಿಭಿನ್ನ ಸಾಮಾಜಿಕ ವರ್ಗಗಳು ಮತ್ತು ಗುಂಪುಗಳು ಅಸ್ತಿತ್ವದಲ್ಲಿರುವ ಪರಿಸ್ಥಿತಿ ಇದೆ. ಹೀಗಿರುವಾಗ ಅವರನ್ನೆಲ್ಲ ಒಂದುಗೂಡಿಸಿ ಒಂದು ಸಮಾನತೆಯ ಮತ್ತು ಸಂಘಟಿತ ಸಮಾಜದ ನಿರ್ಮಾಣಕ್ಕೆ ನೆರವಾಗುವುದು ಶಿಕ್ಷಣ ವ್ಯವಸ್ಥೆಯ ಹೊಣೆಗಾರಿಕೆಯಾಗಿದೆ. ಆದರೆ ಪ್ರಸಕ್ತವಾಗಿ ಹಾಗೆ ಮಾಡುವುದರ ಬದಲು ಶಿಕ್ಷಣವೇ ಸಾಮಾಜಿಕ ಪ್ರತ್ಯೇಕತೆಯನ್ನು ತೀವ್ರಗೊಳಿಸುತ್ತಾ ವರ್ಗಭೇದವನ್ನು ಶಾಶ್ವತವಾಗಿ ಮುಂದುವರಿಸುವುದರೊಂದಿಗೆ ಅದನ್ನು ಇನ್ನಷ್ಟು ವಿಸ್ತರಿಸುವ ದಿಕ್ಕಿನಲ್ಲಿ ಮುಂದುವರಿದಿದೆ" (೧.೩೬). ಕೊಠಾರಿ ಆಯೋಗದ ವೀಕ್ಷಣೆ ಇಂದಿಗೂ, ಈ ಕ್ಷಣಕ್ಕೂ ಅನ್ವಯಿಸುತ್ತಿಲ್ಲವೇ? ಹಾಗಾದರೆ ಇಲ್ಲಿಯ ತನಕ ನಾವೇನು ಪ್ರಗತಿ ಸಾಧಿಸಿದ್ದೇವೆ ಎಂಬ ಪ್ರಶ್ನೆಯನ್ನು ಕೇಳಲೇಬೇಕಾಗಿದೆ. ಆಯೋಗದ ವರದಿ ಸಲ್ಲಿಕೆಯಾಗಿ ಸುಮಾರು ಅರ್ಧ ಶತಮಾನ ಕಳೆದರೂ ಪರಿಸ್ಥಿತಿ ಮತ್ತಷ್ಟು ಬಿಗಡಾಯಿಸುತ್ತಲೇ ಸಾಗಿರುವುದೇಕೆ? ಕಳೆದ ಹತ್ತು ವರ್ಷಗಳಲ್ಲಿ ಶಿಕ್ಷಣ ಕ್ಷೇತ್ರಕ್ಕೆ ವ್ಯಯಿಸಿರುವ ಕೋಟ್ಯಂತರ ರೂಪಾಯಿಗಳಲ್ಲಿ ಶೇಕಡ ೮೦ರಷ್ಟು ಶಿಕ್ಷಕರ ವೇತನ ಮತ್ತು ತರಬೇತಿಗಳಿಗೆಂದೇ ಖರ್ಚಾಗಿದೆ ಎಂದು 'ಅಕೌಂಟಬಿಲಿಟಿ ಇನಿಷಿಯೇಟಿವ್' ಎಂಬ ಚಿಂತಕರ ಚಾವಡಿ ಆರು ರಾಜ್ಯಗಳಲ್ಲಿ ನಡೆಸಿರುವ ಸಮೀಕ್ಷೆಯಿಂದ ತಿಳಿದುಬಂದಿದೆ. ಆದರೆ ಬಹುಪಾಲು ಶಿಕ್ಷಕರ ಗುಣಮಟ್ಟದಲ್ಲಿ ಸುಧಾರಣೆಯಾಗುವ ಬದಲು ಇಳಿಕೆಯಾಗುತ್ತಿರುವ ವಾಸ್ತವ ನಮ್ಮ ಮುಂದಿದೆ. ಉದಾಹರಣೆಗೆ, ಸರಿಸುಮಾರು ಪ್ರತಿ ೨೫ ಮಕ್ಕಳಿಗೆ ಒಬ್ಬ ಶಿಕ್ಷಕರನ್ನು ಹೊಂದಿ ವಿಶ್ವ ಸರಾಸರಿಗೆ ಹತ್ತಿರವಿರುವ ಮಹಾರಾಷ್ಟ್ರದಲ್ಲಿ ರಾಜ್ಯ ಸರ್ಕಾರ ಪ್ರತಿವರ್ಷ ಪ್ರಾಥಮಿಕ ಶಾಲಾ ಶಿಕ್ಷಕರ ಮೌಲ್ಯಮಾಪನ (೨೦೦೯ರ ಶಿಕ್ಷಣ ಹಕ್ಕು ಕಾಯ್ದೆ ಜಾರಿಯಾದ ನಂತರ ಪ್ರಾರಂಭವಾದ ಉಪಕ್ರಮ) ನಡೆಸುತ್ತಿದ್ದು, ಅದರ ೨೦೧೫ರ ಪರೀಕ್ಷೆಯಲ್ಲಿ ಶೇಕಡ ೯೦ಕ್ಕೂ ಅಧಿಕ ಶಿಕ್ಷಕರು ಅನುತ್ತೀರ್ಣರಾಗಿದ್ದಾರೆ. ಇನ್ನುಳಿದ ರಾಜ್ಯಗಳ ಸ್ಥಿತಿಯೂ ಹೆಚ್ಚೂ ಕಡಿಮೆ ಇದೇ ರೀತಿ ಇರಬಹುದೆಂದು ಊಹಿಸಬಹುದು. 'ಚಿಲ್ಡ್ರನ್ಸ್ ಮೂವ್‌ಮೆಂಟ್ ಫಾರ್ ಸಿವಿಕ್ ಅವೇರ್‌ನೆಸ್' ಸಮೀಕ್ಷೆಯ ವರದಿ ತಿಳಿಸುವಂತೆ ಗಣನೀಯ ಸಂಖ್ಯೆಯ ಶಿಕ್ಷಕರ ಪ್ರವೃತ್ತಿಯಲ್ಲಿಯೂ ತೀರಾ ಅನಪೇಕ್ಷಣೀಯ ಬದಲಾವಣೆಗಳು ಕಂಡುಬಂದಿವೆ. ಇದಕ್ಕೆಲ್ಲ ಯಾರು ಹೊಣೆ? ಇದರ ಅಂತಿಮ ಪರಿಣಾಮಗಳ ಕುರಿತು ಯಾರಾದರೂ ಯೋಚಿಸಿ ದ್ದಾರೆಯೇ? ಸಮಾಜ ತಕ್ಷಣ ಕಾರ್ಯಪ್ರವೃತ್ತವಾಗಿ ಹಳ್ಳ ಹಿಡಿದಿರುವ ಶಿಕ್ಷಣ ವ್ಯವಸ್ಥೆಯನ್ನು ಸರಿಪಡಿಸದೆ ಹೋದರೆ ಒಂದಲ್ಲ ಒಂದು ದಿನ ಅಪಾಯ ಕಟ್ಟಿಟ್ಟ ಬುತ್ತಿ.

ಸಿ.ಎಚ್.ಕೃಷ್ಣಶಾಸ್ತ್ರಿ ಬಾಳಿಲ
ಸುರೇಶ ಭಟ್ ಬಾಕ್ರಬೈಲು
'ಈಶ ವಾಸ್ಯಂ', ೨-೧೦-೭೭೬, ಬಿಜೈ, ಮಂಗಳೂರು – ೫೭೫ ೦೦೪

# ಹೆಣಗಳನ್ನುರುಳಿಸಿದವರು ಜೀವವುಳಿಸಿಯಾರೇ ?

ಡಾ॥ ಬಿ. ಶ್ರೀನಿವಾಸ ಕಕ್ಕಿಲ್ಲಾಯ

ಆರೋಗ್ಯವನ್ನು ಕೆಡಿಸುವ ವೈದ್ಯರು, ಜ್ಞಾನವನ್ನು ಕೆಡಿಸುವ ವಿದ್ಯಾಲಯಗಳು, ಸ್ವಾತಂತ್ರ್ಯವನ್ನು ಕೆಡಿಸುವ ಸರಕಾರಗಳು, ಮಾಹಿತಿಯನ್ನು ಕೆಡಿಸುವ ಮಾಧ್ಯಮಗಳು, ನೈತಿಕತೆಯನ್ನು ಕೆಡಿಸುವ ಮತಧರ್ಮಗಳು, ಆರ್ಥಿಕತೆಯನ್ನು ಕೆಡಿಸುವ ಬ್ಯಾಂಕುಗಳು ಎಂಬ ವಾಸ್ತವದೆಡೆಯಲ್ಲಿ ನಾವಿಂದು ಬದುಕುತ್ತಿದ್ದೇವೆ ಎನ್ನುತ್ತಾರೆ ಅಮೆರಿಕದ ಖ್ಯಾತ ಪತ್ರಕರ್ತ, ಲೇಖಕ ಕ್ರಿಸ್ ಹೆಜಸ್. ಕಳ್ಳರಾಗಿರುವ ಪೊಲೀಸರು, ಭ್ರಷ್ಟರಾಗಿರುವ ಲೋಕಾಯುಕ್ತ ಅಧಿಕಾರಿಗಳು, ನ್ಯಾಯವನ್ನು ಮರೆಯುವ ನ್ಯಾಯಾಧೀಶರುಗಳು, ಕಳ್ಳ ಲೆಕ್ಕ ಬರೆಯುವ ಲೆಕ್ಕ ಪರಿಶೋಧಕರು – ಹೀಗೆ ಈ ಪಟ್ಟಿಯನ್ನು ಇನ್ನೂ ಎಳೆಯುತ್ತಾ ಹೋಗಬಹುದು. ಒಟ್ಟಾರೆ ಕಳ್ಳತನ ಹೆಚ್ಚುತ್ತಿದೆ, ಇಂದಿನ ಮಕ್ಕಳನ್ನು, ಪರೀಕ್ಷೆಗಳಲ್ಲಿ ನಕಲು ಮಾಡುವುದರಿಂದ ತೊಡಗಿ, ಕಳ್ಳರನ್ನಾಗಿಯೇ ಬೆಳೆಸಲಾಗುತ್ತಿದೆ.

ಈ ಕಳ್ಳತನದ ಗೆದ್ದಲು ಪಂಚಾಯಿತಿಯಿಂದ ದಿಲ್ಲಿಯವರೆಗೆ, ಕೆಜಿಯಿಂದ ಪಿಜಿಯವರೆಗೆ, ಪೇದೆಯಿಂದ ಸೇನಾಧಿಪತಿಯವರೆಗೆ ಎಲ್ಲರಿಗೂ ಹತ್ತಿದೆ. ದೇಶದ ಸಂವಿಧಾನ, ಕಾನೂನು, ಭದ್ರತೆ ಎಲ್ಲವೂ ಈ ಗೆದ್ದಲಿನಲ್ಲಿ ಕುಸಿಯುತ್ತಿವೆ; ಸಾಮಾಜಿಕ ನ್ಯಾಯ, ಅರ್ಹತೆ, ಪ್ರಾಮಾಣಿಕತೆ, ಪರಿಶ್ರಮ ಎಲ್ಲವೂ ಗೌಣವಾಗುತ್ತಿವೆ.

ಹಣ ಕೊಟ್ಟರೆ ಜನನ–ಮರಣ–ಜಾತಿ–ಆದಾಯ ಪ್ರಮಾಣ ಪತ್ರಗಳು, ಹಣ ಕೊಟ್ಟರೆ ಶಾಲೆ–ಕಾಲೇಜುಗಳಲ್ಲಿ ಪ್ರವೇಶ, ಹಣ ಕೊಟ್ಟರೆ ಪರೀಕ್ಷೆಗಳಲ್ಲಿ ತೇರ್ಗಡೆ ಅಥವಾ ಯಾವುದೇ ಕಲಿಕೆ–ಪರೀಕ್ಷೆಗಳಿಲ್ಲದೆಯೇ ನಕಲಿ ಪದವಿಗಳು, ಹಣ ಕೊಟ್ಟರೆ ಕೆಲಸ–ವರ್ಗಾವಣೆ–ಪದೋನ್ನತಿ... ಹಣವಿದ್ದರೆ ಏನನ್ನಾದರೂ ಪಡೆಯಬಹುದೆನ್ನುವ ವ್ಯವಸ್ಥೆಯನ್ನು ಸರಕಾರವೇ ನಿರ್ಮಿಸುತ್ತಿದೆ.

ಸ್ವಾತಂತ್ರ್ಯ ಸಿಕ್ಕ ಕಾಲದಲ್ಲಿ ದೇಶದ ಶಿಕ್ಷಣ ಸಂಸ್ಥೆಗಳನ್ನು ಸರಕಾರವೂ, ಅನೇಕ ಸಾಮಾಜಿಕ–ಧಾರ್ಮಿಕ ದತ್ತಿಸಂಸ್ಥೆಗಳೂ ನಡೆಸುತ್ತಿದ್ದವು. ದೇಶದ ಮೊದಲ ಖಾಸಗಿ, ವ್ಯವಹಾರಿ ವೈದ್ಯಕೀಯ ಕಾಲೇಜು ೧೯೫೩ರಲ್ಲಿ ಆರಂಭಗೊಳ್ಳುವುದರೊಂದಿಗೆ ಶೈಕ್ಷಣಿಕ ಕ್ಷೇತ್ರದ ವ್ಯಾಪಾರೀಕರಣವೂ ಆರಂಭಗೊಂಡಿತು, ಶಾಲೆ–ಕಾಲೇಜುಗಳಲ್ಲಿ ಹಣಕ್ಕೆ ಪ್ರವೇಶಾತಿ ಆರಂಭಗೊಂಡಿತು. ತೊಂಭತ್ತರಲ್ಲಿ ಬೆಳೆಯತೊಡಗಿದ ಹೊಸ ಆರ್ಥಿಕ ನೀತಿಯಡಿಯಲ್ಲಿ ಶೇಕಡ ತೊಂಭತ್ತಕ್ಕೂ ಹೆಚ್ಚು ಉನ್ನತ ಶಿಕ್ಷಣ ಸಂಸ್ಥೆಗಳು ಖಾಸಗಿ ಹೂಡುವಿಕೆಯಿಂದಲೇ ಆರಂಭಗೊಂಡವು. ಈ ದಶಕದಲ್ಲಿ ಬಾಲವಾಡಿಯಿಂದ ಹಿಡಿದು ಹೆಚ್ಚಿನೆಲ್ಲ ಹೊಸ ವಿದ್ಯಾಲಯಗಳೂ ಖಾಸಗಿ ರಂಗದಲ್ಲೇ ತೆರೆಯುತ್ತಿವೆ.

ಈ ಖಾಸಗಿ ವಿದ್ಯಾಸಂಸ್ಥೆಗಳನ್ನು ತುಂಬಿಸುವುದಕ್ಕಾಗಿ ಸರಕಾರಿ ಶಾಲೆ–ಕಾಲೇಜುಗಳನ್ನು ವ್ಯವಸ್ಥಿತವಾಗಿ ಕೊಲ್ಲುವ ಪ್ರಕ್ರಿಯೆಯೂ ಬಿರುಸಾಗಿದೆ. ಮಾತ್ರವಲ್ಲ, ವಿದ್ಯಾರ್ಥಿಗಳನ್ನು ಖಾಸಗಿ ಶಾಲೆಗಳಿಗೆ ದೂಡಿ, ಅವರ ಖಾಸಗಿ ಶುಲ್ಕವನ್ನು ಬೊಕ್ಕಸದಿಂದ ಭರಿಸುವ ಹೊಸ ರಾಷ್ಟ್ರೀಯ ಶಿಕ್ಷಣ ನೀತಿಯೂ ಬಂದಿದೆ. ಹಾಗೆಯೇ, ಖಾಸಗಿ ಆಸ್ಪತ್ರೆಗಳನ್ನು ತುಂಬಿಸುವುದಕ್ಕಾಗಿ ಸರಕಾರಿ ಆಸ್ಪತ್ರೆಗಳನ್ನು ನಿರ್ನಾಮ ಮಾಡುವ ಕೆಲಸವೂ ಜೋರಾಗಿದೆ, ಖಾಸಗಿ ಆಸ್ಪತ್ರೆಗಳ ಹೊಟ್ಟೆಗೆ ಬೊಕ್ಕಸದ ಹಣವನ್ನು ತುಂಬಿಸುವುದಕ್ಕೆ ದಿನಕ್ಕೊಂದರಂತೆ ವಿಮಾ ಯೋಜನೆಗಳು ಬರತೊಡಗಿವೆ.

ಖಾಸಗಿ ಶಿಕ್ಷಣ ಸಂಸ್ಥೆಗಳು ಬಂದ ಬೆನ್ನಿಗೆ ಸೀಟುಗಳ ಹರಾಜು ಕೂಡ ಬಂತು. ಮೊದಮೊದಲು ವೈದ್ಯಕೀಯ ಸೀಟುಗಳಷ್ಟೇ ಹರಾಜಿಗಿದ್ದರೆ ಈಗೀಗ ಬಾಲವಾಡಿಗಳಲ್ಲೂ ಹರಾಜು ಕಟ್ಟೆಗಳು ತಲೆಯೆತ್ತಿವೆ. ವಿದ್ಯಾರ್ಥಿಯ ಅಂಕಗಳು ಕಡಿಮೆಯಿದ್ದಷ್ಟು, ಅನರ್ಹತೆ ಹೆಚ್ಚಿದ್ದಷ್ಟು ಹರಾಜಿನ ಮೊತ್ತವೂ ಹೆಚ್ಚುತ್ತಾ ಹೋಗುತ್ತದೆ. ಜಾತಿ–ಮತ–ಭಾಷೆಗಳನ್ನು ಉದ್ಧರಿಸುವ ಹೆಸರಲ್ಲಿ ತೆರೆಯಲಾಗಿರುವ ಕಾಲೇಜುಗಳಲ್ಲಿ ಅನ್ಯ ಜಾತಿ–ಮತ–ಭಾಷೆಗಳವರಿಗೆ ಸುಳ್ಳು ಪ್ರಮಾಣ ಪತ್ರಗಳನ್ನು ಮುದ್ರಿಸಿ ಪ್ರವೇಶ ನೀಡುವ ವ್ಯವಸ್ಥೆಯೂ ಬಂದಿದೆ. ಹೀಗೆ ಖಾಸಗಿ ಸಂಸ್ಥೆಗಳಲ್ಲಿ ಹಣದ ಬಲದಿಂದ ಎಂಥವರೂ ಪ್ರವೇಶ ಪಡೆಯಬಹುದೆನ್ನುವ ಸ್ಥಿತಿಯು ನಿರ್ಮಾಣಗೊಂಡಿದೆ.

ಇತ್ತ ಸರಕಾರದ ನಿರಾಸಕ್ತಿಯು ಹೆಚ್ಚಿದಂತೆ



AKSHAY SINGH
1977 - 2015













ಸರಕಾರಿ ಶಾಲೆ–ಕಾಲೇಜುಗಳು ಶಿಕ್ಷಕರಿಲ್ಲದೆ, ಮೂಲ ಸೌಕರ್ಯಗಳಿಲ್ಲದೆ, ಮುಚ್ಚಲ್ಪಡುವ ದುಸ್ಥಿತಿಗಿಳಿಯುತ್ತಿವೆ. ಪ್ರತಿಭೆ, ಅರ್ಹತೆಗಳ ಮೂಲಕವೇ ಉನ್ನತ ಶಿಕ್ಷಣವನ್ನು ಪಡೆಯಬಯಸುವ ವಿದ್ಯಾರ್ಥಿಗಳೂ, ಸಾಮಾಜಿಕವಾಗಿ, ಆರ್ಥಿಕವಾಗಿ ಮೊದಲೇ ವಂಚಿತರಾಗಿರುವವರೂ, ಎಲ್ಲ ರೀತಿಯ ಶಿಕ್ಷಣಾವಕಾಶಗಳನ್ನು ಕಳೆದುಕೊಳ್ಳುವಂತಹ ಸ್ಥಿತಿಯೊದಗಿದೆ. ಪ್ರತಿಭಾವಂತರನ್ನೂ, ತಳವರ್ಗಗಳವರನ್ನೂ ವಂಚಿಸಿ, ಹಣವಿದ್ದವರನ್ನು ಪೋಷಿಸುವ ಈ ಹುನ್ನಾರವು ಕಳೆದ ಮೂರು ದಶಕಗಳಿಂದ ಅತಿ ವೇಗವನ್ನು ಪಡೆದಿದೆ.

ಎಂಭತ್ತರ ದಶಕದಾದಿಯಲ್ಲಿ ವೃತ್ತಿಪರ ವ್ಯಾಸಂಗಕ್ಕೆ ಖಾಸಗಿ ಸಂಸ್ಥೆಗಳಲ್ಲಿ ಬೇಡಿಕೆಯು ಹೆಚ್ಚತೊಡಗಿದಂತೆ, ಸರಕಾರಿ ಸಂಸ್ಥೆಗಳಲ್ಲಿ ಪ್ರವೇಶ ಪಡೆಯುವುದಕ್ಕೆ ವಾಮಮಾರ್ಗಗಳೂ ಹೆಚ್ಚತೊಡಗಿದವು. ಪದವಿಪೂರ್ವ ಅಂಕಗಳ ಆಧಾರದಲ್ಲೇ ವೃತ್ತಿಪರ ಶಿಕ್ಷಣಕ್ಕೆ ಪ್ರವೇಶ ದೊರೆಯುತ್ತಿದ್ದುದರಿಂದ ಆ ಪರೀಕ್ಷೆಗಳಲ್ಲಿ ನಕಲು, ಮೌಲ್ಯಮಾಪನದಲ್ಲಿ ಮೋಸ, ಆಯ್ಕೆ ಪ್ರಕ್ರಿಯೆಯಲ್ಲಿ ಭ್ರಷ್ಟಾಚಾರ ಇತ್ಯಾದಿಗಳೆಲ್ಲ ವಿಪರೀತವಾದವು. ಆ ಕಾಲದಲ್ಲಿ ಅತಿ ಹೆಚ್ಚಿನ ಖಾಸಗಿ ವೃತ್ತಿಶಿಕ್ಷಣ ಸಂಸ್ಥೆಗಳು ಕರ್ನಾಟಕದಲ್ಲಿದ್ದವು, ಅವುಗಳಲ್ಲಿ ಶೇ. ೭೦ರಷ್ಟು ಸೀಟುಗಳನ್ನು ಸರಕಾರಿ ಆಯ್ಕೆ ಪ್ರಕ್ರಿಯೆಯಿಂದಲೇ ತುಂಬಲಾಗುತ್ತಿತ್ತು. ಇದೇ ಕಾರಣದಿಂದ ಈ ಮೋಸದಾಟಗಳೆಲ್ಲವೂ ನಮ್ಮ ರಾಜ್ಯದಲ್ಲೇ ಮೊದಲ್ಗೊಂಡು, ಅತಿ ಹೆಚ್ಚು ಇದ್ದಿರಬಹುದು.

ಉನ್ನತ ಶಿಕ್ಷಣದ ಪ್ರವೇಶಾತಿಯಲ್ಲಿ ನಡೆಯುತ್ತಿದ್ದ ಈ ಅಕ್ರಮಗಳನ್ನು ಪ್ರತಿಭಟಿಸಿ ಅಂದಿನ ವಿದ್ಯಾರ್ಥಿಗಳು ಬೀದಿಗಿಳಿದರು. ಅಂತಹ ಹೋರಾಟಗಳ ಫಲವಾಗಿ ವೃತ್ತಿ ಶಿಕ್ಷಣಕ್ಕೂ, ಸ್ನಾತಕೋತ್ತರ ಶಿಕ್ಷಣಕ್ಕೂ ರಾಜ್ಯ ಸರಕಾರದ ನಿಯಂತ್ರಣದಲ್ಲಿದ್ದ ಸೀಟುಗಳಿಗಾಗಿ ಪ್ರವೇಶ ಪರೀಕ್ಷೆಗಳು ಆರಂಭಗೊಂಡವು, ಮುಂದೆ ರಾಷ್ಟ್ರಮಟ್ಟದಲ್ಲೂ ಪ್ರವೇಶ ಪರೀಕ್ಷೆಗಳು ಬಂದವು.

ಆದರೆ ಈ ಪ್ರವೇಶ ಪರೀಕ್ಷೆಗಳೊಳಕ್ಕೂ ಹೆಗ್ಗಣಗಳು ಹೊಕ್ಕಿದವು. ಪ್ರಶ್ನೆ ಪತ್ರಿಕೆಗಳ ಸೋರಿಕೆ, ಉತ್ತರಗಳ ನಕಲಿ, ಬದಲಿ ವ್ಯಕ್ತಿಗಳಿಂದ ಬರೆಸುವುದು, ಉತ್ತರ ಪತ್ರಿಕೆಗಳನ್ನು ಖಾಲಿ ಬಿಟ್ಟು ಮಾಪನದ ವೇಳೆ ತುಂಬಿಸುವುದು, ಗಣಕೀಕರಣದ ವೇಳೆ ಅಂಕ ಸೇರಿಸುವುದು ಇತ್ಯಾದಿ ಹಲವು ತರಹದ ಮೋಸಗಳು ಹುಟ್ಟಿಕೊಂಡವು. ಪರೀಕ್ಷೆಗಳನ್ನು ನಡೆಸುವವರಿಂದ ಹಿಡಿದು ಇಲಾಖೆಯ ಸಚಿವರುಗಳವರೆಗೆ ಎಲ್ಲರೂ ಈ ಕುತಂತ್ರಗಳಲ್ಲಿ ಭಾಗಿಯಾಗತೊಡಗಿದರು. ಇವನ್ನೆಲ್ಲ ತಡೆದು ಈ ಪರೀಕ್ಷೆಗಳನ್ನು ಪಾರದರ್ಶಕಗೊಳಿಸಲು ವಿದ್ಯಾರ್ಥಿಗಳು ಪದೇ ಪದೇ ಬೀದಿಗಿಳಿದರು, ಗೆದ್ದರು.

ಆದರೂ ಈ ಪ್ರವೇಶ ಪರೀಕ್ಷೆಗಳಲ್ಲಿ ಮೋಸಗಳಾಗುವುದು ನಿಂತಿಲ್ಲ. ಇತ್ತೀಚಿನ ವರ್ಷಗಳಲ್ಲಿ ವಿದ್ಯಾರ್ಥಿ ಚಳುವಳಿಗಳು ಮೊನಚು ಕಳೆದುಕೊಂಡಿರುವುದರಿಂದ ಈ ಮೋಸಗಳು ಹೆಚ್ಚುವುದಕ್ಕೆ ಇಂಬು ದೊರೆತಂತಾಗಿದೆ. ಖಾಸಗಿ ಕಾಲೇಜುಗಳು ಪ್ರತೀ ವರ್ಷವೆಂಬಂತೆ ನ್ಯಾಯಾಲಯಗಳ ಮೆಟ್ಟಲೇರಿ ಸರಕಾರಿ ನಿಯಂತ್ರಣವನ್ನು ದುರ್ಬಲಗೊಳಿಸುವಲ್ಲಿ ಬಹಳಷ್ಟು ಯಶಸ್ವಿಯಾಗಿವೆ. ಖಾಸಗಿ ಕಾಲೇಜುಗಳು ಸರಕಾರಕ್ಕೆ ಬಿಟ್ಟುಕೊಡುವ ಸೀಟುಗಳ ಸಂಖ್ಯೆಯು ವರ್ಷದಿಂದ ವರ್ಷಕ್ಕೆ ಇಳಿಯುತ್ತಲೇ ಸಾಗಿದೆ. ತಮ್ಮ ನಿಯಂತ್ರಣದಲ್ಲಿರುವ ಸೀಟುಗಳಿಗೆ ಸರಕಾರವು ನಡೆಸುವ ಪ್ರವೇಶ ಪರೀಕ್ಷೆಗಳ ಅರ್ಹತೆಯನ್ನು ಈ ಖಾಸಗಿ ಕಾಲೇಜುಗಳು ಒಪ್ಪಿಕೊಳ್ಳದೆ, ತಮ್ಮದೇ ಪ್ರವೇಶ ಪರೀಕ್ಷೆಗಳನ್ನು ನಡೆಸುತ್ತಿವೆ (ಕರ್ನಾಟಕದಲ್ಲಿ ಕಾಮೆಡ್ ಕೆ, ಆಯಾ ಭಾವಿತ ವಿಶ್ವವಿದ್ಯಾಲಯಗಳ ಪರೀಕ್ಷೆ, ಮಧ್ಯಪ್ರದೇಶದಲ್ಲಿ ಡಿಮ್ಯಾಟ್ ಇತ್ಯಾದಿ). ಖಾಸಗಿ ಸಂಸ್ಥೆಗಳು ನಡೆಸುವ ಈ ಪ್ರವೇಶ ಪರೀಕ್ಷೆಗಳಲ್ಲಿ ಪಾರದರ್ಶಕತೆಯಿಲ್ಲದೆ, ಎಲ್ಲ ಬಗೆಯ ಮೋಸದಾಟಗಳಿಗೂ ಅವಕಾಶವಿರುತ್ತದೆ. ಒಟ್ಟಿನಲ್ಲಿ ವಿದ್ಯಾರ್ಥಿಗಳು ಹಲವು ಪ್ರವೇಶ ಪರೀಕ್ಷೆಗಳಿಗೆ ಹಣ ಕಟ್ಟಿ, ಬಗೆಬಗೆಯ ಸಿದ್ಧತೆಗಳನ್ನು ಮಾಡಿ, ಊರೂರು ಅಲೆದಾಡಿ ಪರೀಕ್ಷೆಗಳನ್ನು ಬರೆದು, ಕೊನೆಗೆ ಮೋಸಕ್ಕೊಳಗಾಗುವ ದುಸ್ಥಿತಿಯು ಎಲ್ಲೆಡೆ ಬೆಳೆಯುತ್ತಿದೆ.

ವೃತ್ತಿ ಶಿಕ್ಷಣ ಪ್ರವೇಶಾತಿಯಲ್ಲಿ ಆಗುತ್ತಿರುವ ಅಕ್ರಮಗಳ ಆಳ ಮತ್ತು ವ್ಯಾಪ್ತಿ ಎಷ್ಟಿದೆ ಎನ್ನುವುದಕ್ಕೆ ಮಧ್ಯಪ್ರದೇಶದಲ್ಲಿ ನಡೆದಿರುವ ಹಗರಣಗಳೇ ಸಾಕ್ಷಿ. ಕರ್ನಾಟಕದ ಸರಕಾರಿ ಪರೀಕ್ಷಾ ಪ್ರಾಧಿಕಾರದ ಮಾದರಿಯಲ್ಲೇ, ಮಧ್ಯಪ್ರದೇಶದಲ್ಲಿ ವೃತ್ತಿ ಶಿಕ್ಷಣ ಪ್ರವೇಶಾತಿಗೆ ಪರೀಕ್ಷೆಗಳನ್ನು ನಡೆಸುವುದಕ್ಕೆ ವ್ಯಾವಹಾರಿಕ ಪರೀಕ್ಷಾ ಮಂಡಲಿಯನ್ನು (ವ್ಯಾಪಮಂ) ೧೯೮೨ರಲ್ಲಿ ಸ್ಥಾಪಿಸಲಾಯಿತು; ೨೦೦೮ರಲ್ಲಿ ಆರಕ್ಷಕರು, ಶಿಕ್ಷಕರು, ಆಹಾರ ಪರೀಕ್ಷಕರು ಮುಂತಾದ ಸರಕಾರಿ ನೌಕರರ ನೇಮಕಾತಿಯ ಜವಾಬ್ದಾರಿಯನ್ನು ಇದೇ ಮಂಡಳಿಗೆ ವಹಿಸಲಾಯಿತು. ಅಲ್ಲಿನ ಖಾಸಗಿ ದಂತ ಹಾಗೂ ವೈದ್ಯಕೀಯ ಕಾಲೇಜುಗಳ ಸಂಘವು ೨೦೦೬ರಿಂದ ತನ್ನದೇ ಆದ ಡಿಮ್ಯಾಟ್ ಪರೀಕ್ಷೆಯನ್ನು (ನಮ್ಮ ಕಾಮೆಡ್ ಕೆಯಂತೆ) ಆರಂಭಿಸಿತು.

ವ್ಯಾಪಮಂ ಪರೀಕ್ಷೆಗಳಲ್ಲಿ ಅಕ್ರಮಗಳ ಬಗ್ಗೆ ಆರಂಭದಿಂದಲೇ ಒಂದೆರಡು ದೂರುಗಳಿದ್ದರೂ, ೨೦೦೪ರಲ್ಲಿ ಬಿಜೆಪಿ ಅಧಿಕಾರ ವಹಿಸಿಕೊಂಡ ಬಳಿಕ ಇವು ಬಹಳಷ್ಟು ಹೆಚ್ಚಿದವು. ಜುಲೈ ೨೦೦೯ರಲ್ಲಿ ಇವು ಇನ್ನಷ್ಟು ವ್ಯಾಪಕವಾದವು, ಅದೇ ವರ್ಷ ವೈದ್ಯಕೀಯ ಪರೀಕ್ಷೆಯ ಪ್ರಶ್ನೆಪತ್ರಿಕೆಗಳು ಸೋರಿಕೆಯಾದ ಬಗ್ಗೆ ದೂರುಗಳು ದಾಖಲಾದವು. ಡಿಸೆಂಬರ್ ೨೦೦೯ರಲ್ಲಿ ಮುಖ್ಯಮಂತ್ರಿ ಚೌಹಾಣ್ ತನಿಖಾ ಸಮಿತಿಯೊಂದನ್ನು ನೇಮಿಸಿದರಾದರೂ, ನಾಲ್ಕು ವರ್ಷ ಏನೂ ಆಗಲಿಲ್ಲ.

ಜುಲೈ ೨೦೧೩ರಲ್ಲಿ ಕೆಲವು ಸಾಮಾಜಿಕ ಕಾರ್ಯಕರ್ತರು ಮಾಹಿತಿಯನ್ನೆಲ್ಲ ಹೊರಗೆಳೆದು ಸಾರ್ವಜನಿಕ ಹಿತಾಸಕ್ತಿ ಅರ್ಜಿಯನ್ನು ಸಲ್ಲಿಸಿದಾಗ ಮುಖ್ಯ ನ್ಯಾಯಾಲಯದ ಇಂದೋರ್ ಪೀಠವು ಸರಕಾರಕ್ಕೆ ನೋಟೀಸು ನೀಡಿತು. ವಿಶೇಷ ತನಿಖಾ ದಳ ರಚನೆಯಾಗಿ ೧೯೦೦೦ಕ್ಕೂ ಹೆಚ್ಚು ಜನರು ಬಂಧಿತರಾದರು. ೬೦೦ಕ್ಕೂ ಹೆಚ್ಚು ಶಂಕಿತರು ತಲೆಮರೆಸಿಕೊಂಡರು. ಅಲ್ಲಿಂದೀಚೆಗೆ ಈ ಹಗರಣಕ್ಕೆ ಸಂಬಂಧಿಸಿದವರೆನ್ನಲಾದ ಅಲ್ಲಿನ ರಾಜ್ಯಪಾಲರ ಮಗ, ವೈದ್ಯಕೀಯ ಕಾಲೇಜುಗಳ ಪ್ರಾಂಶುಪಾಲರು, ಕೆಲ ವಿದ್ಯಾರ್ಥಿಗಳು ಸೇರಿದಂತೆ ಇದುವರೆಗೆ ४೫ಕ್ಕೂ ಹೆಚ್ಚು ಮಂದಿ ಸಾವನ್ನಪ್ಪಿದ್ದಾರೆ, ಹಗರಣದ ಕಬಂಧ ಬಾಹುಗಳು ಎಲ್ಲೆಲ್ಲಿ ಚಾಚಿವೆಯೋ ಎಂಬ ಭಯ ಹೆಚ್ಚತೊಡಗಿದೆ.

ಇವುಗಳಿಂದ ಒತ್ತಡ ಹೆಚ್ಚಿ, ಮಧ್ಯಪ್ರದೇಶದ ಸರಕಾರವು ಸಿಬಿಐ ತನಿಖೆಗೆ ಆದೇಶ ನೀಡಿದೆ. ಅದೇ ವೇಳೆಗೆ, ಸರಕಾರದ ವ್ಯಾಪಮಂ ಮಾತ್ರವಲ್ಲ, ಖಾಸಗಿ ಸಂಸ್ಥೆಗಳ ಡಿಮ್ಯಾಟ್ ಪರೀಕ್ಷೆಯಲ್ಲೂ ಹತ್ತು ಸಾವಿರ ಕೋಟಿಗೂ ಹೆಚ್ಚು ಅವ್ಯವಹಾರ ನಡೆದಿದೆಯೆಂದು, ಅದನ್ನೂ ತನಿಖೆಗೊಳಪಡಿಸಬೇಕೆಂದು ಸರ್ವೋಚ್ಚ ನ್ಯಾಯಾಲಯವೂ ಆದೇಶಿಸಿದೆ. ಆದರೆ ಈ ಹಗರಣಗಳು ಎಷ್ಟು ದೊಡ್ಡದಿವೆಯೆಂದರೆ, ಅವುಗಳನ್ನು ಭೇದಿಸಲು ಅಗತ್ಯವಿರುವ ಸಿಬ್ಬಂದಿ ತನ್ನ ಬಳಿ ಇಲ್ಲ ಎಂದು ಸಿಬಿಐ ಸರ್ವೋಚ್ಚ ನ್ಯಾಯಾಲಯಕ್ಕೆ ಇದೀಗ ತಿಳಿಸಿದೆ. ಒಟ್ಟಿನಲ್ಲಿ ಈ ಬೃಹತ್ ಹಗರಣದ ಸುದೀರ್ಘ ತನಿಖೆ ಯಾವಾಗ ಆರಂಭಗೊಂಡು ಯಾವಾಗ ಮುಗಿಯಲಿದೆಯೋ ಹೇಳಲಾಗದು. ಅದನ್ನು ಬಯಲಿಗೆಳೆದ ಪ್ರಮುಖ ಸಾಕ್ಷಿಗಳೆಲ್ಲರೂ ಅಲ್ಲಿಯವರೆಗೆ ಜೀವ ಭಯದಿಂದ ಪೊಲೀಸ್ ರಕ್ಷಣೆಯಲ್ಲಿರಬೇಕಾಗಿದೆ.

ಪತ್ರಕರ್ತ ರಾಕೇಶ್ ದೀಕ್ಷಿತ್ 'ದಿ ವೈರ್' ತಾಣದಲ್ಲಿ ಈ ಹಗರಣದ ಹುತ್ತವನ್ನು ತೆರೆದಿಟ್ಟಿದ್ದಾರೆ (ಇಲ್ಲಿದೆ: http://thewire.in/2015/07/01/vyapam-how-a-munnabhai-style-exam-scam-turned-into-a-macabre-thriller-5249/). ಸಂಘ ಪರಿವಾರ ನಡೆಸುವ ಸರಸ್ವತಿ ಶಿಶು ಮಂದಿರದಲ್ಲಿ ಶಿಕ್ಷಕನಾಗಿದ್ದ, ಈಗ ಪ್ರಮುಖ ಆರೋಪಿಯಾಗಿ ಜೈಲು ಪಾಲಾಗಿರುವ, ಸುಧೀರ್ ಶರ್ಮಾ ಎಂಬಾತನೇ ವ್ಯಾಪಮಂಅನ್ನು ನಿಯಂತ್ರಿಸುತ್ತಿದ್ದನೆಂದು ದೀಕ್ಷಿತ್ ಬರೆದಿದ್ದಾರೆ. ಈತನ ನಿಕಟವರ್ತಿ ಲಕ್ಷ್ಮೀಕಾಂತ್ ಶರ್ಮಾ ಮಧ್ಯಪ್ರದೇಶ ಸರಕಾರದಲ್ಲಿ ಗಣಿಗಾರಿಕೆಯ ಸಚಿವನಾದಾಗ ಈತ ತನ್ನ ಉದ್ಯೋಗವನ್ನು ಬಿಟ್ಟು ಗಣಿಗಾರಿಕೆಯಲ್ಲಿ ತೊಡಗಿಕೊಂಡು ಹತ್ತೇ ವರ್ಷಗಳಲ್ಲಿ ಬಲು ದೊಡ್ಡ ಕುಳವಾಗಿ ಬೆಳೆದನೆಂದು ದೀಕ್ಷಿತ್ ಹೇಳುತ್ತಾರೆ.

ಲಕ್ಷ್ಮೀಕಾಂತ್ ಶರ್ಮಾ ಹಾಗೂ ಸುಧೀರ್ ಶರ್ಮಾ ಸೇರಿಕೊಂಡು ಪಂಕಜ್ ತ್ರಿವೇದಿ ಎಂಬುವನನ್ನು ವ್ಯಾಪಮಂನ ಪರೀಕ್ಷಾ ಕುಲಸಚಿವನನ್ನಾಗಿ ನೇಮಿಸಿದರೆಂದೂ, ಈತನ ಚಾಣಾಕ್ಷತೆಯಿಂದಲೇ ವ್ಯಾಪಮಂ ಅಕ್ರಮಗಳು ಸಲೀಸಾಗಿ ನಡೆದವೆಂದೂ ರಾಕೇಶ್ ದೀಕ್ಷಿತ್ ಬರೆದಿದ್ದಾರೆ. ಲಕ್ಷ್ಮೀಕಾಂತ್ ಶರ್ಮಾ ತಾಂತ್ರಿಕ ಶಿಕ್ಷಣ ಸಚಿವನಾದುದು ಹಾಗೂ ಮುಖ್ಯಮಂತ್ರಿಗಳಿಗೆ ಆಪ್ತನಾದುದು ಪಂಕಜ್ ತ್ರಿವೇದಿಯ ಧೈರ್ಯವನ್ನು ಇನ್ನಷ್ಟು ಹೆಚ್ಚಿಸಿತು ಎಂದೂ ರಾಕೇಶ್ ದೀಕ್ಷಿತ್ ಹೇಳುತ್ತಾರೆ. ಈ ಪಂಕಜ್ ತ್ರಿವೇದಿಯ ಸಹೋದರನಾದ ಪಿಯುಷ್ ತ್ರಿವೇದಿ ಮಧ್ಯಪ್ರದೇಶದ ಏಕೈಕ ತಾಂತ್ರಿಕ ವಿಶ್ವವಿದ್ಯಾಲಯದ ಕುಲಪತಿಯಾಗಿದ್ದರೆ, ಆತನ ದಾಯಾದಿ ಸುಧಾಂಶು ತ್ರಿವೇದಿ ಭಾಜಪದ ರಾಷ್ಟ್ರೀಯ ವಕ್ತಾರ! ಪರಿವಾರದ ಇನ್ನೂ ಹಲವು ನಾಯಕರು ಸುಧೀರ್ ಶರ್ಮಾನಿಗೆ ಆಪ್ತರಾಗಿದ್ದರೆಂದು ರಾಕೇಶ್ ದಾಖಲಿಸಿದ್ದಾರೆ.

ಈಗ ಜೈಲಲ್ಲಿರುವ ಪಂಕಜ್ ತ್ರಿವೇದಿ ಒಬ್ಬೊಬ್ಬರ ಹೆಸರುಗಳನ್ನೂ ಹೇಳತೊಡಗಿದ್ದಾನೆ. ಇನ್ನೂ ಯಾರ ಹೆಸರುಗಳು ಹೊರಬರಲಿವೆಯೋ, ಯಾರ ಗಂಟಲುಗಳು ಕಟ್ಟಲಿವೆಯೋ ತಿಳಿಯದು. ಅಂತೂ ಸಾವಿರಗಟ್ಟಲೆ

ಕೋಟಿ ತಿಂದು ಸಾವಿರಾರು ಅನರ್ಹ ವಿದ್ಯಾರ್ಥಿಗಳಿಗೆ ವೈದ್ಯಕೀಯ / ದಂತ / ತಾಂತ್ರಿಕ ಸೀಟುಗಳನ್ನು ಕೊಟ್ಟು, ಸಾವಿರಾರು ಅನರ್ಹರಿಗೆ ಕೆಲಸಗಳನ್ನು ಕೊಡಿಸಿ, ಅಷ್ಟೇ ಸಾವಿರ ಪ್ರತಿಭಾವಂತರಿಗೂ, ತಳಸ್ತರದವರಿಗೂ ಅವಕಾಶ ವಂಚಿಸಿರುವುದಂತೂ ಸತ್ಯ. ದೇಶಪ್ರೇಮ, ನೈತಿಕತೆ, ಪಾರದರ್ಶಕತೆ, ಇತ್ಯಾದಿಗಳೆಲ್ಲ ಮೈಮೇಲೆ ಬಂದಂತೆ ಭಾಷಣ ಬಿಗಿಯುವ ಪರಿವಾರದವರು ಈ ಹಗರಣದಲ್ಲಿ ಕಳಂಕಿತರಾಗಿದ್ದಾರೆ ಎನ್ನುವುದೂ ಸುಳ್ಳಲ್ಲ.

ವೃತ್ತಿ ಶಿಕ್ಷಣದ ಸೀಟುಗಳನ್ನು ಹಣಕ್ಕೆ ಒತ್ತೆಯಿಡುತ್ತಿರುವುದು ಮಧ್ಯಪ್ರದೇಶ ರಾಜ್ಯಕ್ಕಷ್ಟೇ ಸೀಮಿತವಾಗಿಲ್ಲ. ಮೊದಲೇ ಹೇಳಿದಂತೆ, ಕರ್ನಾಟಕದಲ್ಲಿ ಇದು ಬಲು ಹಿಂದಿನಿಂದಲೇ ಪ್ರಚಲಿತವಿತ್ತು, ಈಗಲೂ ಅಂತಹ ಸುದ್ದಿ ಬರುತ್ತಿರುತ್ತದೆ. ಪ್ರವೇಶ ಪರೀಕ್ಷೆಯಲ್ಲಿ ಅಕ್ರಮಗಳು, ಸೀಟು ಹಂಚಿಕೆಯಲ್ಲಿ ಮೋಸಗಳು ಪ್ರತಿ ವರ್ಷ ಸುದ್ದಿ ಯಾಗುತ್ತವೆ. ನಾಲ್ಕೈದು ವರ್ಷಗಳ ಹಿಂದೆ ಆರೋಗ್ಯ ವಿವಿಯಲ್ಲಿ ಸ್ನಾತಕ ಹಾಗೂ ಸ್ನಾತಕೋತ್ತರ ಪರೀಕ್ಷೆಗಳಲ್ಲಿ ನಡೆದ ಅಕ್ರಮಗಳಿಗಾಗಿ ವೈದ್ಯಕೀಯ ಶಿಕ್ಷಕರೂ ಸೇರಿದಂತೆ ಕೆಲವರನ್ನು ಬಂಧಿಸಲಾಗಿತ್ತು; ಆದರೆ ಆ ತನಿಖೆ ಅಲ್ಲಿಗೇ ನಿಂತು, ಆಪಾದಿತರೆಲ್ಲರೂ ಮತ್ತೆ ತಮ್ಮ ಕೆಲಸಗಳಿಗೆ ಸೇರಿಕೊಂಡಿದ್ದಾರೆಂದು ಇದೀಗ ವರದಿಯಾಗಿದೆ. ಉಳಿದ ರಾಜ್ಯಗಳಲ್ಲೂ ವೃತ್ತಿ ಶಿಕ್ಷಣ ಪ್ರವೇಶಾತಿಯಲ್ಲಿ ಆಗುತ್ತಿರುವ ಅಕ್ರಮಗಳು ಆಗಾಗ ವರದಿಯಾಗುತ್ತಿರುತ್ತವೆ.

ಅಂದರೆ ನಮ್ಮ ದೇಶದಲ್ಲಿಂದು ಹಣವಿದ್ದವರ ಅನರ್ಹ ಮಕ್ಕಳು ಮೋಸದಿಂದ ವೈದ್ಯಕೀಯ ಹಾಗೂ ತಾಂತ್ರಿಕ ಶಿಕ್ಷಣಕ್ಕೆ ಪ್ರವೇಶ ಪಡೆಯುತ್ತಿದ್ದಾರೆ; ಆ ಬಳಿಕವೂ ನಕಲು ಮಾಡಿ, ಮೌಲ್ಯಮಾಪನದಲ್ಲೂ ಅಕ್ರಮಗಳನ್ನೆಸಗಿ ವೈದ್ಯರಾಗುತ್ತಿದ್ದಾರೆ, ತಂತ್ರಜ್ಞರಾಗುತ್ತಿದ್ದಾರೆ. ರೋಗಿಗಳನ್ನು ಮಾತನಾಡಿಸಲರಿಯದೆ, ನಾಡಿಬಡಿತವೇನು, ರಕ್ತದೊತ್ತಡವೇನೆಂದರಿಯದೆ ಮೋಸದಿಂದ ವೈದ್ಯರಾದವರು, ತಂತ್ರಜ್ಞಾನದ ಸುಳಿವಿಲ್ಲದೆ ತಂತ್ರಜ್ಞರಾದವರು ಚಿಕಿತ್ಸೆ ನೀಡಿದರೆ, ಕಟ್ಟಡಗಳನ್ನು, ಸೇತುವೆಗಳನ್ನು ಕಟ್ಟಿದರೆ ಏನಾದೀತು? ಹೆಣಗಳುರುಳಿದ ಹಗರಣಗಳಿಂದ ಸೀಟು ಪಡೆದವರು ಜೀವವುಳಿಸಲು ಸಾಧ್ಯವೇ? ಇನ್ನು ಮುಂದೆ ವೈದ್ಯಕೀಯ ಕಾಲೇಜುಗಳಲ್ಲೂ, ತಾಂತ್ರಿಕ ಸಂಸ್ಥೆಗಳಲ್ಲೂ ಇಂಥವರೇ ಶಿಕ್ಷಕರಾಗಿ, ತಮಗೆ ತಿಳಿದಿರುವುದೇ ಮಹಾಜ್ಞಾನ ಎಂದು ಮುಂದಿನ ವಿದ್ಯಾರ್ಥಿಗಳಿಗೆ ಅಷ್ಟನ್ನೇ ಕಲಿಸಿದಾಗ ಈ ಎಲ್ಲ ವೃತ್ತಿಗಳ ಗತಿ ಏನಾದೀತು?

ಈಗಾಗಲೇ ದೇಶದ ತಾಂತ್ರಿಕ ಕಾಲೇಜುಗಳಿಂದ ಹೊರಬರುತ್ತಿರುವವರಲ್ಲಿ ಶೇ. ೯೦ರಷ್ಟು ಪದವೀಧರರಿಗೆ ಇಂಗ್ಲಿಷ್ ಕೌಶಲ್ಯವಿಲ್ಲವೆಂದೂ, ಶೇ. ೭೦ರಷ್ಟು ತಂತ್ರಜ್ಞರು ನೌಕರಿಗೆ ಅರ್ಹರಲ್ಲವೆಂದೂ ಹೇಳಲಾಗಿದೆ. ಅರೆಬರೆ ತಿಳಿದ ವೈದ್ಯರಿಂದಾಗುತ್ತಿರುವ ಅನಾಹುತಗಳು ನಿತ್ಯವೂ ವರದಿಯಾಗುತ್ತಿವೆ. ಖಾಸಗಿ ಆಸ್ಪತ್ರೆಗಳು, ಖಾಸಗಿ ಶಿಕ್ಷಣ ಸಂಸ್ಥೆಗಳು, ಖಾಸಗಿ ಔಷಧ ಕಂಪೆನಿಗಳು, ಇತರ ಖಾಸಗಿ ಉದ್ದಿಮೆಗಳು ಈ ಅಜ್ಞಾನಿಗಳನ್ನು ಮನಬಂದಂತೆ ಬಳಸಿಕೊಳ್ಳುವುದು ಸುಲಭವಾಗುತ್ತದೆ, ಭ್ರಷ್ಟಾಚಾರದಿಂದ ಒಳಹೊಕ್ಕು ವೃತ್ತಿಗಿಳಿದವರು ಜೀವನ ಪರ್ಯಂತ ಭ್ರಷ್ಟರಾಗಿಯೇ ಹಣ ಗಳಿಸಿಕೊಳ್ಳುತ್ತಾರೆ. ಅಂಥವರಿಗೆ ಸಿಕ್ಕ ರೋಗಿಗಳೂ, ಅಂಥವರು ಕಟ್ಟಿದ ಕಟ್ಟಡಗಳೂ, ಸೇತುವೆಗಳೂ ನರಳುತ್ತಿದ್ದಂತೆ ಹಣ ತಿಂದ ಕುಳಗಳು ಇನ್ನಷ್ಟು ಮೆರೆಯುತ್ತಿರುತ್ತಾರೆ, ದೇಶಪ್ರೇಮದ ಬಗ್ಗೆ ಕೊರೆಯುತ್ತಿರುತ್ತಾರೆ.

ಈ ಅಕ್ರಮಗಳು ನಿಲ್ಲಬೇಕಿದ್ದರೆ ಪ್ರತಿಭಾವಂತರೂ, ಅರ್ಹತೆಯುಳ್ಳ ವಿದ್ಯಾರ್ಥಿಗಳೂ ಮತ್ತೆ ಬೀದಿಗಿಳಿಯಬೇಕಾಗಿದೆ. ಇದು ಇಡೀ ಸಮಾಜದ ಸ್ವಾಸ್ಥ್ಯದ ಪ್ರಶ್ನೆಯಾಗಿರುವುದರಿಂದ ಪ್ರಜ್ಞಾವಂತರೆಲ್ಲರೂ ಈ ಹೋರಾಟಕ್ಕೆ ಅಣಿನೆರೆಯಬೇಕಾಗಿದೆ. ಸರಕಾರಿ ಇರಲಿ, ಖಾಸಗಿ ಇರಲಿ, ಎಲ್ಲ ವೃತ್ತಿಶಿಕ್ಷಣ ಪ್ರವೇಶಕ್ಕೆ ಏಕೈಕ ಪರೀಕ್ಷೆಯನ್ನು ಅತ್ಯಂತ ಪಾರದರ್ಶಕವಾಗಿ ನಡೆಸುವಂತೆ ಒತ್ತಾಯಿಸಬೇಕಾಗಿದೆ.

**ಡಾ|| ಬಿ. ಶ್ರೀನಿವಾಸ ಕಕ್ಕಿಲ್ಲಾಯ**
'ಅಕ್ಷಯ', ಕದ್ರಿ ಕೈಬಟ್ಟಲ್, ಆಳ್ವಾರಿಸ್ ರಸ್ತೆ
ಮಂಗಳೂರು – ೫೭೫ ೦೦೨



## ನಾಡು–ನುಡಿಯ ದಿಟ್ಟ ಹೋರಾಟಗಾರ
## ಕೈಯ್ಯಾರ ಕಿಞ್ಞಣ್ಣ ರೈ (೮.೬.೧೯೧೫ – ೯.೮.೨೦೧೫)

*ಕನ್ನಡ ನಾಡಿನ ನೆಲ, ಜಲ, ಭಾಷೆಗಾಗಿ ಇಡೀ ಬದುಕನ್ನು ಮುಡಿಪಾಗಿಟ್ಟವರು ಕನ್ನಡ ಸಾಹಿತ್ಯದ ಮೇರು ಕವಿ ಕೈಯ್ಯಾರ ಕಿಞ್ಞಣ್ಣ ರೈ. ಬಹುಭಾಷಾ ವಿದ್ವಾಂಸರೂ, ಸಾಹಿತಿಯೂ ಆದ ರೈ ಅವರು ಸ್ವಾತಂತ್ರ್ಯ ಹೋರಾಟಗಾರರೂ, ಕರ್ನಾಟಕ ಏಕೀಕರಣ ಚಳವಳಿಯ ಮುಂಚೂಣಿ ಪ್ರಮುಖ ನಾಯಕರೂ ಆಗಿದ್ದರು. ಇತ್ತೀಚೆಗೆ ನಿಧನರಾದ ಕೈಯ್ಯಾರರಿಗೆ 'ಹೊಸತು' ಬಳಗ ನಮನ ಸಲ್ಲಿಸುತ್ತದೆ.*

ಕೈಯ್ಯಾರರು ಕಾಸರಗೋಡಿನ ಭಾಗದಲ್ಲಿ ಕನ್ನಡದ ಹಣತೆಯನ್ನು ನಿರಂತರವಾಗಿ ಪ್ರಜ್ವಲಿಸಲು ಕಾರಣೀಭೂತರಾದವರು. ಕನ್ನಡ ನುಡಿಯನ್ನೇ ಉಸಿರಾಗಿಸಿಕೊಂಡು ಬದುಕಿದ ಕೈಯ್ಯಾರರದು ತುಳು ಮಾತೃಭಾಷಾ ಕುಟುಂಬವಾದರೂ 'ಕನ್ನಡ'ದ ಕಸ್ತೂರಿಯನ್ನು ಅಪ್ಪಿಕೊಂಡೇ ಬೆಳೆದವರು. ಅಮೂಲ್ಯ ಕೊಡುಗೆಯನ್ನು ಕನ್ನಡ ಸಾಹಿತ್ಯ ಲೋಕಕ್ಕೆ ನೀಡಿ ಅದನ್ನು ಸಿರಿವಂತಗೊಳಿಸಿದ್ದಾರೆ. ಅದರಲ್ಲಿಯೂ ಗಡಿನಾಡ ಭಾಗದಲ್ಲಿ ಭಾಷೆಯ ಉಳಿವು–ಬೆಳವಣಿಗೆಗೆ ಸತತ ಹೋರಾಟ ಮಾಡುತ್ತ ಗಟ್ಟಿತನ ತಂದುಕೊಡುವಲ್ಲಿ ಅವಿರತವಾಗಿ ಹಿಂದಿನಿಂದಲೂ ದುಡಿಯುತ್ತಾ ಬಂದಂತಹ ಧೀಮಂತ ವ್ಯಕ್ತಿ.

ಹರಿಜನ ಸೇವಕ ಸಂಘಟನೆಯಲ್ಲಿ ಹಗಲಿರುಳು ದುಡಿದು ಆ ಜನಾಂಗದ ಶ್ರೇಯೋಭಿವೃದ್ಧಿಗಾಗಿ ಶ್ರಮಿಸಿದ್ದಾರೆ. ಸ್ವಾತಂತ್ರ್ಯ ಹೋರಾಟಗಾರ ಕೈಯ್ಯಾರರು ಸದಾ ಸಾಮಾಜಿಕ ಕಳಕಳಿಯ ಚಳವಳಿಗಳಲ್ಲಿ ಪಾಲ್ಗೊಂಡು ಸಮುದಾಯದ ಉನ್ನತಿಗಾಗಿ ದುಡಿಯುತ್ತಲೇ ಸಾಗಿ ಬಂದವರು.

ಸ್ಥಳೀಯ ಪಂಚಾಯತ್ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ ಕೈಯ್ಯಾರರು ಜನರ ಮೂಲಭೂತ ಸಮಸ್ಯೆಗಳನ್ನು ಪರಿಹರಿಸುವಲ್ಲಿ, ದೀನ–ದಲಿತರ ಏಳಿಗೆಗಾಗಿ ಅನೇಕ ಯೋಜನೆಗಳನ್ನು ಸಾಕಾರಗೊಳಿಸಿದ್ದಾರೆ. ಕೇರಳ ರಾಜ್ಯದ ಸಂಗೀತ ಅಕಾಡೆಮಿಯ ಸದಸ್ಯರೂ ಆಗಿದ್ದ ರೈ ಅವರು ಸಾಹಿತ್ಯವಷ್ಟೇ ಅಲ್ಲದೆ ಸಂಗೀತ ಕ್ಷೇತ್ರದ ಬೆಳವಣಿಗೆಗೂ ತಮ್ಮ ಅಮೂಲ್ಯ ಕೊಡುಗೆ ನೀಡಿದ್ದಾರೆ. ಕೈಯ್ಯಾರರು ಕಾಸರಗೋಡು ತಾಲ್ಲೂಕನ್ನು ಕರ್ನಾಟಕ ರಾಜ್ಯಕ್ಕೆ ಸೇರಿಸಲು ಅವಿರತ ಹೋರಾಟ ನಡೆಸಿದರು.

ಕನ್ನಡ ಸಾಹಿತ್ಯದ ಮಡಿಲಿಗೆ ಅಮೂಲ್ಯ ಕವನ ಸಂಕಲನಗಳನ್ನು ನೀಡಿದ್ದಾರೆ. ಅಲ್ಲದೆ, ಒಂದು ತುಳು ಕವನ ಸಂಕಲನವನ್ನು ಪ್ರಕಟಿಸಿದ್ದಾರೆ. ಕನ್ನಡದ ಮೊದಲ ರಾಷ್ಟ್ರಕವಿ ಗೋವಿಂದ ಪೈ ಅವರ ಕುರಿತಾಗಿ ಮೂರು ಕೃತಿಗಳನ್ನು ಹೊರತಂದಿದ್ದಾರೆ. ಮಕ್ಕಳ ಸಾಹಿತ್ಯಕ್ಕೆ ಕೈಯ್ಯಾರರ ಕೊಡುಗೆ ಅಪಾರ. ಇವರು ಕನ್ನಡ ಸಾಹಿತ್ಯ, ಜಾಗೃತಿ ಕುರಿತಾಗಿ ಸುಮಾರು ಐದು ಸಾವಿರಕ್ಕೂ ಹೆಚ್ಚು ಲೇಖನಗಳನ್ನು ವಿವಿಧ ಪತ್ರಿಕೆಗಳಿಗೆ ಬರೆದಿದ್ದಾರೆ. ಸಾಹಿತಿಯಾಗಿ ಎಷ್ಟು ಪರಿಚಿತರೋ ಕೈಯ್ಯಾರರು ಪತ್ರಿಕಾ ಮಾಧ್ಯಮದಲ್ಲೂ ಅಷ್ಟೇ ಪ್ರಸಿದ್ಧರು. ಇವರು ಪ್ರಭಾತ, ರಾಷ್ಟ್ರಬಂಧು, ಸ್ವದೇಶಾಭಿಮಾನಿ ಎನ್ನುವ ಕನ್ನಡ ದಿನ ಪತ್ರಿಕೆಗಳಲ್ಲಿ ಸಂಪಾದಕರಾಗಿ ಕಾರ್ಯ ನಿರ್ವಹಿಸಿದ್ದಾರೆ.

ಕೈಯ್ಯಾರರಿಗೆ ೨೦೦೫ರಲ್ಲಿ ಮಂಗಳೂರು ವಿ.ವಿ.ಯು ಗೌರವ ಡಾಕ್ಟರೇಟ್ ಪದವಿ ನೀಡಿ ಗೌರವಿಸಿದೆ. ಇವರು ೧೯೯೭ರಲ್ಲಿ ಮಂಗಳೂರಿನಲ್ಲಿ ನಡೆದ ೬೬ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. ಕನ್ನಡ ತುಳು ಸಾಂಸ್ಕೃತಿಕ ಬದುಕಿನ ಭಾವೈಕ್ಯತೆಯ ಪ್ರತಿಬಿಂಬವಾದ ಕೈಯ್ಯಾರರಿಗೆ ೨೦೧೫ ಜೂನ್ ೮ಕ್ಕೆ ನೂರು ವರ್ಷ ತುಂಬಿ ೧೦೧ಕ್ಕೆ ಕಾಲಿಟ್ಟಿದ್ದರು. ಈ ಶತಾಯುಷಿ ಸಾಹಿತಿಯು ಇನ್ನು ನೆನಪು ಮಾತ್ರ.

**ಕೊಟ್ರೇಶ್ ಎಸ್. ಉಪ್ಪಾರ್,** ಆಲೂರು, ತೇಜೂರು ರಸ್ತೆ, ಶಾಂತಿನಗರ, ಹಾಸನ – ೫೭೩ ೨೦೧




# ವಿಶೇಷ ಹುಣ್ಣಿಮೆ

**ಸಂ**ಜೆಯ ಆಕಾಶದಲ್ಲಿ ಸ್ಫುಟವಾಗಿ ಎದ್ದು ಕಾಣುವ ಪುಂಜಗಳು ವೃಶ್ಚಿಕ-ಧನು. ತಿಂಗಳ ಮೊದಲ ಅರ್ಧದಲ್ಲಿ ಚಂದ್ರನ ಬೆಳಕಿಲ್ಲದಾಗ ಇವನ್ನು ಗುರುತಿಸಲು ಪ್ರಯತ್ನಿಸಿ. ವೃಶ್ಚಿಕದಿಂದ ಸ್ವಲ್ಪ ಉತ್ತರಕ್ಕೆ ಉರಗಧರ (ಓಫಿಯೂಕಸ್), ಇನ್ನೂ ಸ್ವಲ್ಪ ಉತ್ತರಕ್ಕೆ ಭೀಮ (ಹರ್‌ಕ್ಯುಲಸ್) ಇವನ್ನು ಕಾಣಬಹುದು. ಭೀಮದ ಪೂರ್ವಕ್ಕೆ ಅಭಿಜಿತ್ (ವೇಗಾ, ವೀಣಾ ಪುಂಜದ್ದು), ಹಂಸಾಕ್ಷಿ (ದೆನ್‌ಬ್, ರಾಜಹಂಸ ಪುಂಜದ್ದು) ಮತ್ತು ಶ್ರವಣ (ಆಲ್ಟೇರ್, ಗರುಡ ಪುಂಜದ್ದು) ಇವುಗಳ ತ್ರಿಕೋಣ ಕಾಣುತ್ತದೆ. ಪೂರ್ವದ ಅಂಚಿನಲ್ಲಿ ಉದಯಿಸುತ್ತಿರುವ ನಕುಲ (ಪೆಗಸಸ್) ದಕ್ಷಿಣದ ಅಂಚಿನಲ್ಲಿ ಅಸ್ತಮಿಸುತ್ತಿರುವ ಕಿನ್ನರ (ಸೆಂಟಾರಸ್) ಇವು ಕಾಣುತ್ತವೆ.

ಸಂಜೆಯ ಆಕಾಶದಲ್ಲಿ ಕಾಣುವ ಏಕೈಕ ಗ್ರಹ ಶನಿ. ಇದು ವೃಶ್ಚಿಕದ ಅನುರಾಧಾ ನಕ್ಷತ್ರಕ್ಕೆ ಸಮೀಪವಾಗಿಯೇ ಇದೆ. ೧೯ರಂದು ಚಂದ್ರ ಶನಿಯಿಂದ ೩ ಡಿಗ್ರಿ ಅಂತರದಲ್ಲಿ ಕಾಣುವುದು.

ಬುಧ ಗ್ರಹ ತಿಂಗಳ ಮೊದಲ ವಾರ ಸಂಜೆ ಪಶ್ಚಿಮದಲ್ಲಿ ಸ್ವಲ್ಪ ಹೊತ್ತು ಮಾತ್ರ ಕಾಣುವುದು. ೪ರಂದು ಗರಿಷ್ಠ ಕೋನೋನ್ನತಿ; ನೋಡಿ ಗುರುತಿಸಲು ಅತ್ಯುತ್ತಮ ಅವಕಾಶ, ಇದಾದ ಮೇಲೆ ಕ್ರಮೇಣ ಕೆಳಗಿಳಿದು ತಿಂಗಳ ಕೊನೆಗೆ ಸೂರ್ಯನನ್ನು ಬಳಸಿಬರುವುದು. ೩೦ರಂದು ಸೋಹೋ ಚಿತ್ರಗಳನ್ನು ನೋಡಿದರೆ, ಬುಧ ಸೂರ್ಯನ ಸನಿಹದಲ್ಲಿ ಕಾಣುವುದು.




ಕಳೆದ ತಿಂಗಳು ಸೂರ್ಯನನ್ನು ದಾಟಿ ಬಂದ ಶುಕ್ರ ಈಗ ಬೆಳಗಿನಜಾವ ಕಾಣುವುದು. ೧೦ರಂದು ರೇಖಾಚಂದ್ರನ ಪಕ್ಕದಲ್ಲಿ ಇರುವುದು. ಮಂಗಳ ಗ್ರಹವು ಶುಕ್ರದ ಪೂರ್ವಕ್ಕೆ (ಅಂದರೆ ದಿಗಂತಕ್ಕೂ ಶುಕ್ರಕ್ಕೂ ಮಧ್ಯೆ) ಕಾಣುವುದು. ಅವೆರಡರ ನಡುವಿನ ಅಂತರವನ್ನು ತಿಂಗಳುದ್ದಕ್ಕೂ ಗಮನಿಸುತ್ತಾ ಬನ್ನಿ. ೨೪ರಂದು ಸಿಂಹರಾಶಿಯ ಮಘ ನಕ್ಷತ್ರದಿಂದ ಒಂದು ಡಿಗ್ರಿ ಅಂತರದಲ್ಲಿ ಮಂಗಳ ಹಾದುಹೋಗುವುದು. ತಿಂಗಳ ಕೊನೆಗೆ ಗುರುಗ್ರಹವನ್ನೂ ಬೆಳಗಿನ ಜಾವ ಕಾಣಬಹುದು. ಶುಕ್ರ, ಮಂಗಳ, ಗುರು – ಹೀಗೆ ಮೂರೂ ಪೂರ್ವ ದಿಗಂತದಲ್ಲಿ ಸಾಲಾಗಿ ಕಾಣುತ್ತವೆ.



ಶುಕ್ರ, ಮಂಗಳ, ಗುರು
೨೪ರಂದು
ಪೂರ್ವ ದಿಗಂತದಲ್ಲಿ

ಈ ತಿಂಗಳ ಹುಣ್ಣಿಮೆಯಲ್ಲಿ ಎರಡು ವಿಶೇಷ ಗಳಿವೆ. ಹುಣ್ಣಿಮೆ ಎಂಬ ಘಟನೆ ನಡೆಯುವುದು ೨೮ರ ಬೆಳಿಗ್ಗೆ ೦೮.೨೦ಕ್ಕೆ. ಚಂದ್ರ ಮತ್ತು ಭೂಮಿಯ ದೂರ ಕನಿಷ್ಠವಾಗುವುದು ೦೭:೧೭ಕ್ಕೆ. ಆದ್ದರಿಂದ ಚಂದ್ರನ ಗಾತ್ರ ದೊಡ್ಡದಾಗಿ ಕಾಣುವುದು. ಈ ದೂರ ಕಳೆದ ತಿಂಗಳುಗಳ ಕನಿಷ್ಠಗಳಲ್ಲಿ ಕನಿಷ್ಠ ಎನ್ನಬಹುದು. ೩೫೬,೮೮೨ ಕಿ.ಮೀ. ಇದಕ್ಕೆ ಇನ್ನೊಂದು ಕಾರಣವೂ ಇದೆ. ಭೂಮಿಯ ಕಕ್ಷೆಯ ತಲಕ್ಕೆ ಚಂದ್ರ ಕಕ್ಷೆ ಓರೆಯಾಗಿದೆ. ಆದ್ದರಿಂದ ಕನಿಷ್ಠ ಎಂಬುದರ ಮೌಲ್ಯ ತಿಂಗಳಿನಿಂದ ತಿಂಗಳಿಗೆ ಬದಲಾಗುತ್ತದೆ. ಈ ತಿಂಗಳಲ್ಲಿ ಚಂದ್ರ ಭೂಕಕ್ಷೆಯ ತಲದ ಮೇಲೆಯೇ ಇರುವುದರಿಂದ ಈ ಸಂಖ್ಯೆ ಕನಿಷ್ಠಗಳಲ್ಲಿ ಕನಿಷ್ಠವಾಗಿದೆ. ಅದು ಭೂಕಕ್ಷೆಯ ತಲದ ಮೇಲಿದೆ ಎಂದು ತಿಳಿಯುವುದು ಹೇಗೆ? ಇದಕ್ಕೊಂದು ಸರಳ ಉಪಾಯವೂ ಇದೆ. ಆ ದಿನ ಭೂಮಿಯ ನೆರಳು ಚಂದ್ರನ ಮೇಲೆ ಬೀಳುತ್ತದೆ. ಹೀಗಾಗಬೇಕಾದರೆ ಮೂರೂ ಒಂದೇ ತಲದಲ್ಲಿ ಇದ್ದರೆ ಮಾತ್ರ ಸಾಧ್ಯ. ಚಂದ್ರಗ್ರಹಣ ಆರಂಭವಾಗುವುದೇ ೬ ಗಂ. ೩೭ ನಿಮಿಷಕ್ಕೆ. ಅಷ್ಟು ಹೊತ್ತಿಗೆ ನಮಗೆ ಇಲ್ಲಿ ಭಾರತದಲ್ಲಿ ಚಂದ್ರಾಸ್ತವಾಗಿಹೋಗಿರುತ್ತದೆ. ಆದರೆ, ಗುಜರಾತ್‌ನ ಪೋರ್‌ಬಂದರ್ ಮುಂತಾದ ನಗರಗಳಲ್ಲಿ ಕೇವಲ ನಾಲ್ಕೈದು ನಿಮಿಷಗಳ ಕಾಲ ಗ್ರಹಣವನ್ನು ನೋಡಬಹುದು.

ಹುಣ್ಣಿಮೆಯ ಹದಿನೈದು ದಿನಗಳ ಹಿಂದೆಯೂ ಚಂದ್ರ, ಭೂಮಿ, ಸೂರ್ಯ ಒಂದೇ ಸಮತಲದಲ್ಲಿ ಇರುವುದರಿಂದ ೧೩ರಂದು ಸೂರ್ಯಗ್ರಹಣವೂ ಇದೆ. ಇದು ಪಾರ್ಶ್ವಗ್ರಹಣ. ಬೆಳಿಗ್ಗೆ ೧೦:೧೨ಕ್ಕೆ ಆರಂಭವಾಗಿ ೧೪:೩೬ಕ್ಕೆ ಮುಗಿಯುತ್ತದೆ. ಆದರೆ, ಭಾರತಕ್ಕೆ ಕಾಣುವುದಿಲ್ಲ. ಹಿಂದೂಸಾಗರದ ದಕ್ಷಿಣ ಭಾಗಕ್ಕೆ ಮತ್ತು ಅಂಟಾರ್ಕ್ಟಿಕಾಗೆ ಕಾಣುತ್ತದೆ.

ಈ ತಿಂಗಳ ೨೩ರಂದು ಶರದ್ ವಿಷುವ. ಅಂದರೆ ಹಗಲು ರಾತ್ರಿಗಳ ಅವಧಿ ಸಮ. ಆ ಮುಂದೆ ರಾತ್ರಿಯ ಅವಧಿ ಹೆಚ್ಚಾಗುತ್ತಾ ಹೋಗುವುದು.

### ಖಗೋಳ ದಿನಚರಿ

ಸೆಪ್ಟೆಂಬರ್ ೪ ಬುಧಗ್ರಹದ ಗರಿಷ್ಠ ಕೋನೋನ್ನತಿ (ಸಂಜೆ)
೫ ಚಾಂದ್ರಮಾಸದ ಕೊನೆಯ ಪಾದ
೧೦ ಶುಕ್ರ-ಚಂದ್ರ ನಡುವೆ ೩ ಡಿಗ್ರಿ ಅಂತರ
೧೧ ಮಂಗಳ-ಚಂದ್ರ ನಡುವೆ ೬ ಡಿಗ್ರಿ ಅಂತರ
೧೨ ಗುರು-ಚಂದ್ರ ನಡುವೆ ೩ ಡಿಗ್ರಿ ಅಂತರ
೧೩ ಅಮಾವಾಸ್ಯೆ ೧೨:೧೧ಕ್ಕೆ ಪಾರ್ಶ್ವ ಸೂರ್ಯಗ್ರಹಣ ಭಾರತಕ್ಕೆ ಕಾಣುವುದಿಲ್ಲ
೧೪ ಚಂದ್ರ-ಭೂಮಿ ನಡುವೆ ಗರಿಷ್ಠ ಅಂತರ
೧೫ ಬುಧ-ಚಂದ್ರ ನಡುವೆ ೬ ಡಿಗ್ರಿ ಅಂತರ
೧೭ ಬುಧಗ್ರಹದ ಹಿನ್ನಡೆ ಆರಂಭ
೧೯ ಶನಿ-ಚಂದ್ರ ನಡುವೆ ೪ ಡಿಗ್ರಿ ಅಂತರ
೨೧ ಚಾಂದ್ರಮಾಸದ ಮೊದಲ ಪಾದ; ಶುಕ್ರಗ್ರಹದ ಗರಿಷ್ಠ ಪ್ರಕಾಶ
೨೩ ಶರದ್ ವಿಷುವ
೨೪ ಮಂಗಳ-ಮಘ ನಡುವೆ ೧ ಡಿಗ್ರಿ ಅಂತರ
೨೮ ಭೂಮಿ-ಚಂದ್ರ ನಡುವೆ ಕನಿಷ್ಠ ಅಂತರ, ಹುಣ್ಣಿಮೆ, ಚಂದ್ರಗ್ರಹಣ, ಭಾರತಕ್ಕೆ ಕಾಣುವುದಿಲ್ಲ
೩೦ ಬುಧ-ಸೂರ್ಯ ಜೋಡಿ; ಯುತಿ

**ಡಾ|| ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್
ಬೆಂಗಳೂರು – ೫೬೦ ೦೦೧

ಡಾ॥ ಎಚ್. ಎಸ್. ಅನುಪಮಾ ಅವರು ಭಗತ್ ಸಿಂಗ್‌ನ ದಿನಚರಿಯನ್ನು ಅನುವಾದ ಮಾಡಿ ಉಪಕರಿಸಿದ್ದಾರೆ. ಕನ್ನಡದ ಓದುಗರು ಅವರಿಗೆ ಸಂತೋಷದಿಂದ ಋಣಿಗಳಾಗಿರುತ್ತಾರೆ. ಹತಾಶೆಯ ವಾತಾವರಣವು ಉಸಿರು ಕಟ್ಟುವಷ್ಟು ಸಾಂದ್ರವಾಗಿ ಪಸರಿಸುತ್ತಿರುವಾಗ ಭಗತ್ ಸಿಂಗ್‌ನ ಸ್ಮರಣೆಯೇ ಒಂದು ತಂಗಾಳಿ. ತೀರಾ ಮೇಲ್ಪದರದಲ್ಲೇ ವಿಹರಿಸುವ ಛಾನಸ ಮನಸ್ಸುಗಳಿಗೆ ಸಹ ಭಗತ್ ಜೀವ ಮತ್ತು ಸ್ಫೂರ್ತಿ ತುಂಬಬಲ್ಲ. ಇಪ್ಪತ್ತನೆಯ ಶತಮಾನದ ಭಾರತದಲ್ಲಿ ಅತ್ಯಂತ ವಿಸ್ಮಯವನ್ನುಂಟುಮಾಡುವ ಧೀರೋದಾತ್ತ ವ್ಯಕ್ತಿ ಭಗತ್ ಸಿಂಗ್. ಅವನ ಚಿಂತನಾ ಕ್ರಮವನ್ನು ಮುಚ್ಚಿಟ್ಟು, ತಕ್ಷಣದ ರಾಜಕೀಯ ಲಾಭಕ್ಕಾಗಿ ಅವನ ಹೆಸರನ್ನು ಉಚ್ಚರಿಸುವ ಕ್ಷುದ್ರ ಮನಸುಗಳು ನಮ್ಮ ನಡುವೆ ಇರುವಾಗ ಭಗತ್ ಸಿಂಗ್ ಆಲೋಚಿಸುತ್ತಿದ್ದ ವಿಷಯಗಳ ವೈಶಾಲ್ಯ ಮತ್ತು ಅವನ ಅಂತಸ್ಸತ್ವದ ತುಡಿತವು ನಮಗೆ ದಾರಿದೀಪವಾಗಬೇಕು. ಲಾಹೋರಿನ ಕಾರಾಗೃಹದಲ್ಲಿ ಅವನು ಬಂದಿಯಾಗಿದ್ದಾಗಿನ ಅವನ ದಿನಚರಿ ಒಂದು ಐತಿಹಾಸಿಕ ದಾಖಲೆ. ಅದನ್ನು ನಮಗೆ ಲಭ್ಯವಾಗುವಂತೆ ಮಾಡಿರುವ ಡಾ॥ ಅನುಪಮಾ ಮತ್ತು ಲಡಾಯಿ ಪ್ರಕಾಶನ ನಮ್ಮ ಹಾರ್ದಿಕ ಅಭಿನಂದನೆಗಳಿಗೆ ಮತ್ತು ವಂದನೆಗಳಿಗೆ ಪಾತ್ರರು.

# ಭಗತ್ ಸಿಂಗ್ ಸ್ಮರಣೆ

## (೨೮.೦೯.೧೯೦೭ – ೨೩.೦೩.೧೯೩೧)

ಭಗತ್ ಸಿಂಗ್ ಪರಂಪರೆ ತಮ್ಮದೆಂದು ಹೇಳಿಕೊಳ್ಳಬೇಕಾದರೆ ಮೊದಲು ಅವನು, ಚಂದ್ರಶೇಖರ ಆಜಾದ್ ಮತ್ತು ಇತರ ಸಹಚರರು ಸ್ಥಾಪಿಸಿದ ಹಿಂದುಸ್ಥಾನ್ ಸೋಶಿಯಲಿಸ್ಟ್ ರಿಪಬ್ಲಿಕನ್ ಅಸೋಸಿಯೇಷನ್‌ನ ಪ್ರಣಾಳಿಕೆಯನ್ನು ನಾವು ಅಂತರ್ಗತಗೊಳಿಸಿಕೊಳ್ಳಬೇಕು. ಅಂತೆಯೇ ಹಿಂದುಸ್ಥಾನ್ ಸೋಶಿಯಲಿಸ್ಟ್ ರಿಪಬ್ಲಿಕನ್ ಆರ್ಮಿಯ ನೀತಿ ಮತ್ತು ಶಿಸ್ತನ್ನು ಅರಿತುಕೊಳ್ಳಬೇಕು. ಸಮಾಜವಾದವೆಂದರೆ ಒಂದು ತುಚ್ಛ ವ್ಯವಸ್ಥೆಯೆಂದು ಹೇಳುತ್ತಾ ನಾಲಿಗೆಯಲ್ಲಿ ವಿಷಕ್ರಿಮಿಗಳನ್ನು ತುಂಬಿಕೊಂಡಿರುವವರು ಭಗತ್ ಸಿಂಗ್ ಹೆಸರು ಹೇಳಲು ಸರ್ವಥಾ ಅನರ್ಹರು.

**ಜಿ. ರಾಮಕೃಷ್ಣ**

ರಾಷ್ಟ್ರೀಯ ಪತ್ರಾಗಾರದಲ್ಲಿರುವ ಭಗತ್ ಸಿಂಗ್‌ನ ದಿನಚರಿಯನ್ನು ಚಮನ್ ಲಾಲ್ ಸಂಪಾದಿಸಿಕೊಟ್ಟಿದ್ದಾರೆ. ಭೂಪೇಂದ್ರ ಹೂಜಾ ಅದಕ್ಕೆ ವ್ಯಾಪಕ ಅಡಿ ಟಿಪ್ಪಣಿಗಳನ್ನೊದಗಿಸಿ ಅದನ್ನು ಸುಧನ್ವ ದೇಶಪಾಂಡೆ ಪರಿಷ್ಕರಿಸಿದ್ದಾರೆ. ಈ ಚಮನ್ ಲಾಲ್ ಬೇರೆ ಮತ್ತು ನ್ಯಾಯಾಲಯದಲ್ಲಿ ಭಗತ್ ಸಿಂಗ್ ನೀಡಿದ ಹೇಳಿಕೆಯಲ್ಲಿ ಪ್ರಸ್ತಾಪಿಸಿರುವ ಚಮನ್ ಲಾಲ್ ಬೇರೆ. ನ್ಯಾಯಾಲಯದ ಹೇಳಿಕೆಯ ಪ್ರಾಸ್ತಾವಿಕ ಮಾತುಗಳಲ್ಲಿ ಭಗತ್ ಹೇಳಿರುವುದಿದು : 'ಹೇಡಿತನದ ಅತ್ಯಾಚಾರವನ್ನೆಸಗುವವರು ನಾವಲ್ಲ ; ಆದ್ದರಿಂದ ರಾಷ್ಟ್ರವು ನಮ್ಮನ್ನು ಕಂಡು ತಲೆ ತಗ್ಗಿಸಬೇಕಾಗಿಲ್ಲ. ಕಪಟ ಸಮಾಜವಾದಿ ದಿವಾನ್ ಚಮನ್ ಲಾಲ್ ಮಾತ್ರ ನಮ್ಮನ್ನು ಆ ರೀತಿ ವರ್ಣಿಸಿದ್ದಾನೆಂದು ವರದಿಯಾಗಿದೆ. ಲಾಹೋರಿನ ಪತ್ರಿಕೆ 'ಟ್ರಿಬ್ಯೂನ್' ಮತ್ತು ಇನ್ನು ಬೇರೆ ಕೆಲವರು ಹೇಳುವಂತೆ ನಾವು ಹುಚ್ಚರೂ ಅಲ್ಲ.' ಆ ಚಮನ್ ಲಾಲ್ ಕಪಟ ಸಮಾಜವಾದಿ; ಆದರೆ ಈ ಚಮನ್ ಲಾಲ್ ಅಪ್ಪಟ ಸಮಾಜವಾದಿ ಭಗತ್ ಸಿಂಗ್‌ನ ವ್ಯಕ್ತಿತ್ವವನ್ನು ಬಿಡಿಸಿಟ್ಟಿರುವ ಸಹೃದಯಿ.

ಭಗತ್ ಸಿಂಗ್ ಜೈಲಿನಲ್ಲಿದ್ದಾಗಲೂ ಹಲವು ವಿಷಯಗಳನ್ನು ಕುರಿತು ವಿವಿಧ ರೀತಿಗಳಲ್ಲಿ ಹೋರಾಟ ನಡೆಸಿದ. ೧೯೨೯ರ ಜೂನ್ ೧೫ರಂದು ಒಂದು ಉಪವಾಸ ಸತ್ಯಾಗ್ರಹ ಆರಂಭಿಸಿದ್ದ. ತನಗೆ ಮತ್ತು ತನ್ನಂತಹ ಇತರರಿಗೆ ಓದಲು ಬೇಕಾದ ಸೌಲಭ್ಯ ಕಲ್ಪಿಸುವಂತೆ ಆಗ್ರಹಿಸಲು ನಡೆಸಿದ ಹೋರಾಟ ಅದು. ಅಂದರೆ ತಮಗೆ ಇಷ್ಟವೆನಿಸಿದ ಪುಸ್ತಕಗಳನ್ನು ತರಿಸಿಕೊಂಡು ಜೈಲಿನ ಕೋಣೆಯಲ್ಲೇ ಓದಿಕೊಳ್ಳುವುದು. ಉಪವಾಸ ಆರಂಭಿಸಿದ ನಂತರ ಜೂನ್ ೧೭ರಂದು ಸ್ವತಃ ಭಗತ್ ಸಿಂಗ್ ಪಂಜಾಬ್ ಜೈಲುಗಳ ಇನ್ಸ್‌ಪೆಕ್ಟರ್ ಜನರಲ್‌ಗೆ ಪತ್ರ ಬರೆದು ಉಪವಾಸದ ಬಗ್ಗೆ ತಿಳಿಸಿದ. ಇತಿಹಾಸ, ಅರ್ಥಶಾಸ್ತ್ರ, ರಾಜ್ಯಶಾಸ್ತ್ರ, ಕಾವ್ಯ, ನಾಟಕ, ಕಾದಂಬರಿ ಮುಂತಾದ ಪ್ರಕಾರಗಳ ಸಾಹಿತ್ಯವನ್ನು ಎಲ್ಲ ರಾಜಕೀಯ ಕೈದಿಗಳಿಗೂ ಒದಗಿಸಬೇಕೆಂದು ಕೇಳಿದ್ದು ಆ ಪತ್ರದ ವೈಶಿಷ್ಟ್ಯ. ಪುಸ್ತಕಗಳನ್ನು ಸರಬರಾಜು ಮಾಡಲು ಒಪ್ಪುವುದರ ಜೊತೆಗೆ ಆಹಾರದ ಗುಣಮಟ್ಟವನ್ನು ಉತ್ತಮಗೊಳಿಸಲು ಸಹ ಜೈಲಿನ ಅಧಿಕಾರಿಗಳು ಒಪ್ಪಬೇಕಾಯಿತು. ಬೇರೆ ಕೈದಿಗಳಲ್ಲಿ ಎಷ್ಟು ಮಂದಿ ಪುಸ್ತಕ ತರಿಸಿಕೊಳ್ಳಲು ಮುಂದಾದರೋ ತಿಳಿಯದು, ಆದರೆ ಭಗತ್ ಸಿಂಗ್ ಒಟ್ಟೊಟ್ಟಿಗೆ ನಾಲ್ಕಾರು ಪುಸ್ತಕಗಳನ್ನು ಪಡೆದುಕೊಳ್ಳಲಾರಂಭಿಸಿದ. ಜೈಲಿನ ಅಧಿಕಾರಿಗೆ ಇದೊಂದು ಉಪದ್ರವ ಎನಿಸಿಬಿಟ್ಟಿತು. ಕಡೆಗೊಮ್ಮೆ ಅವನು ಭಗತ್ ಸಿಂಗ್‌ನನ್ನು ಕೇಳಿದ : 'ಇಷ್ಟು ಪುಸ್ತಕಗಳನ್ನು ತರಿಸಿಕೊಳ್ಳುತ್ತೀಯೆ, ಇದೇನು ಆಟವೇ ? ಅಷ್ಟನ್ನೂ ನೀನು ನಿಜಕ್ಕೂ ಓದುತ್ತೀಯಾ ?' ನಸುನಕ್ಕು ಭಗತ್ ಹೇಳಿದ : 'ಪ್ರಶ್ನೆ ಕೇಳಿ ಬೇಕಾದರೆ ಪರೀಕ್ಷಿಸು. ನಾನು ಖಂಡಿತಾ ಉತ್ತೀರ್ಣನಾಗುತ್ತೇನೆ.' ಕೇವಲ ಉತ್ತೀರ್ಣನಾಗುವುದಲ್ಲ, ಅವನು ಅತ್ಯುಚ್ಚ ಶ್ರೇಣಿಯಲ್ಲೇ ಉತ್ತೀರ್ಣನಾಗುತ್ತಿದ್ದನೆಂಬುದಕ್ಕೆ ಅವನ ದಿನಚರಿಯು ಪುರಾವೆಯಾಗಿದೆ. ಕೇವಲ ಓದುವುದಲ್ಲ, ಓದಿದ್ದರಲ್ಲಿ ಅವನಿಗೆ ಆಸಕ್ತಿದಾಯಕವಾದ ವಿಷಯಗಳನ್ನು ಬರೆದಿಟ್ಟುಕೊಳ್ಳುತ್ತಿದ್ದ, ಟಿಪ್ಪಣಿ ಮಾಡಿಕೊಳ್ಳುತ್ತಿದ್ದ. ಅವನ ಜ್ಞಾನದಾಹಕ್ಕೆ ಮಿತಿಯೇ ಇರಲಿಲ್ಲ. ಆ ವಯಸ್ಸಿನ ಯುವಕ, ಬಹುಶಃ ನೇಣುಗಂಬದ ಶಿಕ್ಷೆ ನೀಡುತ್ತಾರೆಂದು ತಿಳಿದಿದ್ದ ಕೈದಿ, ಮುಂದೆಂದೂ ಸ್ವತಂತ್ರವಾಗಿ ಜೈಲಿನಾಚೆ ಹೋಗಿ ಜನರ ನಡುವೆ ರಾಜಕೀಯ ಕ್ರಾಂತಿಗಾಗಿ ಸಂಘಟನೆಯ ಕೆಲಸ ಮಾಡಲು ಸಾಧ್ಯವಾಗಲಾರದೆಂದು ಗೊತ್ತಿದ್ದ ಹೋರಾಟಗಾರ, ಎಷ್ಟು ಜ್ಞಾನವನ್ನು ತುಂಬಿಕೊಳ್ಳಲು ತವಕಿಸಿಯಾನು ! ನೇಣುಗಂಬದ ನೆರಳಿನಲ್ಲಿ ದಿನಗಳನ್ನು ಸವೆಸುತ್ತಿದ್ದ ಅನೇಕ ಕೈದಿಗಳು ದಿನಚರಿಗಳನ್ನು ಬರೆದಿದ್ದಾರೆ. ನಾವು ಇಬ್ಬರನ್ನು ನೆನಪಿಸಿಕೊಳ್ಳಬಹುದು: ತ್ಸಾರ್ ಆಳ್ವಿಕೆಯಲ್ಲಿದ್ದ ರಷ್ಯಾದ ಫ್ಯೋಡೋರ್ ದಸ್ತೋಯೆವ್‌ಸ್ಕಿ ಮತ್ತು ಹಿಟ್ಲರನ ಅಧೀನಕ್ಕೆ ತುತ್ತಾಗಿದ್ದ ಜೆಕೋಸ್ಲೋವಾಕಿಯಾದ ಜೂಲಿಯಸ್ ಫ್ಯೂಚಿಕ್. ಫ್ಯೋಡೋರ್ ತಾತ್ವಿಕ ಜಿಜ್ಞಾಸೆಗಳಿಗೆ ಅಂಟಿಕೊಂಡ ಮತ್ತು ಫ್ಯೂಚಿಕ್ ಫ್ಯಾಸಿಸ್ಟ್ ದಮನದ ಪರಿಯನ್ನು ವಿವೇಚಿಸಿ ವರದಿ ಮಾಡಿದ. ಮಹಾಭಾರತದಲ್ಲಿ ವ್ಯಾಸ ಒಂದೆಡೆ ಹೇಳುತ್ತಾನೆ : 'ಗೃಹೀತ ಇವ ಕೇಶೇಷು ಮೃತ್ಯುನಾ ಧರ್ಮಂ ಆಚರೇತ್.' (ಇನ್ನೇನು ನಿನ್ನನ್ನು ಕೊಂಡುಹೋಗಲು ಯಮರಾಜನು ಆಗಲೇ ನಿನ್ನ ಕೂದಲನ್ನು ಹಿಡಿದಿದ್ದಾನೇನೋ ಎನ್ನುವಷ್ಟು ತವಕದಿಂದ ಸತ್ಕಾರ್ಯದಲ್ಲಿ ತೊಡಗಬೇಕು.)

ಭಗತ್ ಸಿಂಗ್‌ಗೆ ಆ ತವಕವು ಅಧ್ಯಯನದ ಹುಚ್ಚು ಹಿಡಿಸಿತ್ತು. ತಿಳಿಯಬೇಕು, ಇನ್ನೂ ತಿಳಿಯಬೇಕು, ಮತ್ತೂ ತಿಳಿಯಬೇಕು ಎಂಬ ಅವನ ಲಾಲಸೆಗೆ ಎಲ್ಲೆಯೇ ಇರಲಿಲ್ಲ. ಅಂದಿನ ಪಾಪಿ ಇರ್ವಿನ್ ಎಂಬ ವೈಸರಾಯ್‌ನೊಡನೆ ಮೊಂಡು ಮನಸ್ಸಿನ ಗಾಂಧಿ ೧೯೩೧ರಲ್ಲಿ ಒಪ್ಪಂದ ಮಾಡಿಕೊಳ್ಳುವಾಗ ಭಗತ್ ಸಿಂಗ್ ಬಿಡುಗಡೆಗೆ ಷರತ್ತು ವಿಧಿಸಿದ್ದರೆ ಅದೆಂತಹ ಜ್ಞಾನನಿಧಿ ನಮ್ಮದಾಗಿಬಿಡುತ್ತಿತ್ತು. ಸರ್ವಾಂಗೀಣ ಅಧ್ಯಯನದಿಂದ ಪಕ್ವವಾದ ಯುವಕ ನಾಯಕನೊಬ್ಬ ಕಮ್ಯುನಿಸ್ಟ್ ಚಳುವಳಿಯ ಧೀಮಂತ ಸಂಘಟಕನಾಗಿ ನಮ್ಮ ಇತಿಹಾಸದಲ್ಲಿ ಒಂದು ಕ್ರಾಂತಿ ತಾರೆಯಾಗಿ ಅಮರನಾಗುತ್ತಿದ್ದ. ಇರ್ವಿನ್ ಜೊತೆ ಔಪಚಾರಿಕವಾಗಿಯಾದರೂ ಗಾಂಧೀಜಿ ಈ ಮಹಾನ್ ಯುವಕನ ಜೀವ ಉಳಿಯ ಬೇಕೆಂಬ ಆಶಯ ವ್ಯಕ್ತಪಡಿಸಲಿಲ್ಲ. 'ಅವನದು ಹಿಂಸಾಮಾರ್ಗ' ಎಂಬುದಷ್ಟೇ ಗಾಂಧಿಯ ತೀರ್ಪು. ವಸಾಹತು ಸರ್ಕಾರದ ಹಿಂಸೆ, ದೇಶದ ಲೂಟಿಯ ಹಿಂಸೆ, ಯುವಕ ಚೇತನಗಳನ್ನು ಹೊಸಕಿ ಹಾಕುವ ಹಿಂಸೆ, ಇವು ಗಾಂಧೀಜಿಯ ಅಂತಃಕರಣವನ್ನು ಬಾಧಿಸಲಿಲ್ಲ. ಕೇವಲ ೨೪ರ ಹರೆಯದ ಯುವಪ್ರತಿಭೆ ನಂದಿ ಹೋಯಿತು.

ಒಂದು ಮಾತನ್ನು ಧೈರ್ಯವಾಗಿ ಹೇಳಬಹುದು. ಅದನ್ಯಾರೂ ಪ್ರಶ್ನಿಸಲು ಶಕ್ಯವಿಲ್ಲ : ಇಂದಿನ ವಿಶ್ವವಿದ್ಯಾಲಯಗಳಲ್ಲಿ ೪೫ರ ಹರೆಯದ ಪ್ರಾಧ್ಯಾಪಕರಿದ್ದಾರಲ್ಲ, ಅವರು ಎರಡು ವರ್ಷಗಳಲ್ಲಿ ಅಧ್ಯಯನ ಮಾಡಬಹುದಾದ್ದಕ್ಕಿಂತ ಹತ್ತುಪಟ್ಟು ಹೆಚ್ಚು ಭಗತ್ ಸಿಂಗ್ ಕಾರಾಗೃಹದ ಕತ್ತಲೆ ಕೋಣೆಯಲ್ಲಿ ಓದಿಕೊಂಡ, ನೂರಾರು ವಿಷಯಗಳನ್ನು ತಲೆಗೆ ತುಂಬಿಕೊಂಡ, ಹೊರಗಣ ಭಾರತೀಯ ಸಮಾಜದ ಆಮೂಲಾಗ್ರ ಪರಿವರ್ತನೆಗೆ ಒಂದು ಪ್ರಣಾಲಿಕೆಯನ್ನು ಸಿದ್ಧಪಡಿಸಿಕೊಂಡ. ಅವನನ್ನು ಎಷ್ಟು ಮೆಚ್ಚಿಕೊಂಡರೂ ಕಡಿಮೆಯೇ ಎನ್ನುವಂತಹ ನಿಚ್ಚಳ ಸಮಾಜವಾದಿ ಅವನು. ಫ್ರೆಡರಿಕ್ ಏಂಗೆಲ್ಸ್‌ನ ವಿಶ್ವಕೋಶ ಮಾದರಿಯ ತಿಳುವಳಿಕೆಯು ಅವನ ಪ್ರಸಿದ್ಧ ಕೃತಿ 'ಆ್ಯಂಟಿ – ಡ್ಯೂರಿಂಗ್'ನಲ್ಲಿ ಹೇಗೆ ಪ್ರತಿಫಲನಗೊಂಡಿದೆಯೆಂಬುದನ್ನು ಅವನ ಬಗೆಗಿನ ಗ್ರಂಥದಲ್ಲಿ ನಾನೊಮ್ಮೆ ವಿಶದೀಕರಿಸಿದ್ದೆ. ಅದನ್ನು ಬರೆದಾಗ ಏಂಗೆಲ್ಸ್‌ಗೆ ೫೮ ವರ್ಷ. ಅವನಿಗೆ ಹೋಮರ್, ಡಾಂಟೆ, ಶೇಕ್ಸ್‌ಪಿಯರ್, ಟೆರೆನ್ಸ್, ರೂಸೋ, ಹೆಗೆಲ್, ಮೋರ್ಗನ್, ಡಾರ್ವಿನ್ ಮುಂತಾದವರು ಕರಗತವಾಗಿದ್ದುದರಲ್ಲಿ ಆಶ್ಚರ್ಯವೇನಿದೆ ! ಆದರೆ ೨೨ರ ಹರಯದ ಭಗತ್ ಸಿಂಗ್ ಜೈಲಿನಲ್ಲಿದ್ದಾನೆ, ಅವನು ಓದಿ ಟಿಪ್ಪಣಿ ಮಾಡಿಕೊಂಡಿರುವ ಗ್ರಂಥಗಳು – ಲೇಖಕರು ಅದೆಷ್ಟು ವ್ಯಾಪಕ !! ಮಾನವ ಶಾಸ್ತ್ರಕ್ಕೆ ಬುನಾದಿಯನ್ನು ಹಾಕಿಕೊಟ್ಟ ಮೋರ್ಗನ್‌ನ 'ಪ್ರಾಚೀನ ಸಮಾಜ' ಎಂಬ ಗ್ರಂಥವು ಮಾರ್ಕ್ಸ್ ಮತ್ತು ಏಂಗೆಲ್ಸ್‌ರಿಗೆ ಶ್ರೇಷ್ಠ ಮಾದರಿಯಾಗಿ ಕಂಡುಬಂದಿತ್ತು. ಆ ಪುಸ್ತಕವನ್ನು ತರಿಸಿಕೊಂಡು ಭಗತ್ ಜೈಲಿನಲ್ಲಿ ಓದಿದ್ದಾನೆ, ವಿಸ್ತೃತ ಟಿಪ್ಪಣಿ ಮಾಡಿಕೊಂಡಿದ್ದಾನೆ. ಅವನ ಆಸಕ್ತಿ ಎಷ್ಟು ಆಳವಾದ್ದು, ವ್ಯಾಪಕವಾದ್ದು ಎಂದು ದಂಗಾಗಿಬಿಡುತ್ತೇವೆ. ಅವನಿಗೆ ಏಂಗೆಲ್ಸ್ ಮತ್ತು ಮೋರ್ಗನ್‌ರಷ್ಟೇ ಉಮರ್ ಖಯ್ಯಾಂ ಸಹ ಆಪ್ತ. ಬಹುಶಃ ಜೈಲಿನಲ್ಲಿ ಆ ಪ್ರೇಮಗೀತೆಯು ಅವನಿಗೆ ಮಾನಸಿಕ ಸಾಂತ್ವನ ಮತ್ತು ದೃಢತೆ ನೀಡುತ್ತಿದ್ದಿತೇನೋ.

ದಿನಚರಿಯು ಓದುಗರ ಮುಂದಿರುವಾಗ ಅದರಲ್ಲಿ ಅಡಕವಾಗಿರುವ ವಿಷಯಗಳನ್ನು ಕುರಿತ ಪ್ರಸ್ತಾಪ ಮತ್ತು ವ್ಯಾಖ್ಯಾನ ಅನಗತ್ಯ. ಆದರೂ ಭಗತ್ ಸಿಂಗ್ ಅಧ್ಯಯನ ಮಾಡಿದ ಕೆಲ ಲೇಖಕರ ಪಟ್ಟಿ ಮಾಡಬೇಕೆನಿಸುತ್ತದೆ. ೧೯೨೨–೨೩ರ ಅವಧಿಯಲ್ಲಿ ಮತ್ತು ಜೈಲಿನಲ್ಲಿ ಅವನು ಇವರೆಲ್ಲರ ಪುಸ್ತಕಗಳನ್ನು ಇಡಿಯಾಗಿ ಇಲ್ಲವೇ ಭಾಗಶಃ ಓದಿದನೆಂದರೆ ಕೌತುಕವೆನಿಸುತ್ತದೆ. ಅಂಥ ಕೆಲವು ಲೇಖಕರು ವಿಶ್ವವಿಖ್ಯಾತರಾದ ಇವರು: ಬರ್ಟ್ರಂಡ್ ರಸೆಲ್, ಟಾಂ ಪೇನ್, ಮಾರ್ಕ್ ಟ್ವೇನ್, ರಾಬರ್ಟ್ ಇಂಗರ್ಸಾಲ್, (ಕಟ್ಟಾ ನಾಸ್ತಿಕ ಮತ್ತು ಶ್ರೇಷ್ಠ ವಿಚಾರವಾದಿ ಮತ್ತು ವಾಗ್ಮಿ ), ಅಪ್ಟನ್ ಸಿಂಕ್ಲೇರ್ (ಅಮೆರಿಕಾದ ಖ್ಯಾತ ಕಾದಂಬರಿಕಾರ), ಮಾಕ್ಸಿಂ ಗೋರ್ಕಿ, ಥಾಮಸ್ ಗ್ರೇ (೧೮ನೇ ಶತಮಾನದ ಇಂಗ್ಲಿಷ್ ಕವಿ), ಇಬ್ಸನ್ (ನಾರ್ವೆಯ ನಾಟಕಕಾರ), ಜೆ. ಎಸ್. ಮಿಲ್, ಫ಼ೂರ್ಯೆ (ಫ್ರಾನ್ಸಿನ ಸಮಾಜವಾದಿ ಚಿಂತಕ ಮತ್ತು ಕಾರ್ಲ್ ಮಾರ್ಕ್ಸ್‌ನನ್ನು ಸಹ ಪ್ರಭಾವಿಸಿದ್ದವನು), ಯೂಜೀನ್ ಡೆಬ್ಸ್ (ಅಮೆರಿಕದ ಸಮಾಜವಾದಿ, ಅಧ್ಯಕ್ಷಗಿರಿಗೆ ಸ್ಪರ್ಧಿ), ಥಾಮಸ್ ಜೆಫರ್ಸನ್ (ಅಮೆರಿಕಾದ ಅಧ್ಯಕ್ಷ), ರವೀಂದ್ರನಾಥ ಟ್ಯಾಗೋರ್, ಅರಿಸ್ಟಾಟಲ್ (ಪ್ರಾಚೀನ ಗ್ರೀಕ್ ತತ್ವಜ್ಞಾನಿ), ರೂಸೋ, ಜ್ಯಾಕ್ ಲಂಡನ್ (ಪ್ರಸಿದ್ಧ ಕಾದಂಬರಿಕಾರ, ಎಡಪಂಥೀಯ ಕಾರ್ಯಕರ್ತ), ಸ್ಕಾಟ್ ನಿಯರಿಂಗ್ (ಅಮೆರಿಕಾದ ತತ್ವಜ್ಞಾನಿ, ಸಾಮಾಜಿಕ

ಕಾರ್ಯಕರ್ತ, ೧೯೭೦ರ ದಶಕದಲ್ಲಿ ಬೆಂಗಳೂರು ಮತ್ತು ಮೈಸೂರಿನಲ್ಲಿ ಉಪನ್ಯಾಸಗಳನ್ನು ನೀಡಿದ್ದ), ವಿಕ್ಟರ್ ಹ್ಯೂಗೋ, ಜಾನ್ ಲಾಕ್, ಹಾಬ್ಸ್ ಇತ್ಯಾದಿ ಇತ್ಯಾದಿ. ನಮ್ಮ ದೇಶದ ಎಷ್ಟು ಪ್ರಧಾನಮಂತ್ರಿಗಳಿಗೆ ಇಂಥವರೆಲ್ಲರ ಪರಿಚಯವಿರಬಹುದು ಎಂದು ಯೋಚಿಸಿದರೆ ಭಗತ್ ಸಿಂಗ್ ಎಂಬ ಜ್ಞಾನಪರ್ವತದೆದುರು ಅವರಲ್ಲಿ ಬಹುಮಂದಿ ಕೇವಲ ಜೋಳದ ಕಾಳುಗಳು ಅಷ್ಟೆ ಎನಿಸುವುದು ಅನಿವಾರ್ಯ.

ಭಾರತ ಮತ್ತು ಪ್ರಪಂಚದ ಹಲವು ರಾಷ್ಟ್ರಗಳ ಇತಿಹಾಸವು ಭಗತ್‌ಗೆ ಕರತಲಾಮಲಕವಾಗಿದ್ದುದು ಅವನ ದಿನಚರಿಯಿಂದಲೇ ತಿಳಿಯುತ್ತದೆ. ಫ್ರಾನ್ಸಿನ ಕ್ರಾಂತಿ, ಅಮೇರಿಕಾದಲ್ಲಿ ೧೭೭೬ರಲ್ಲಿ ವಿಜಯಿಯಾದ ಹೋರಾಟ, ಐರ್ಲೆಂಡಿನಲ್ಲಿ ಆಗಿನ್ನೂ ಮುಗಿದಿರದ ಸ್ವಾತಂತ್ರ್ಯ ಹೋರಾಟ, ಬಂಡವಾಳಶಾಹಿಯ ಉಗಮ ಮತ್ತು ಅದರ ಪತನದ ಅನಿವಾರ್ಯತೆ, ರಷ್ಯದ ಕ್ರಾಂತಿಯ ಹಿನ್ನೆಲೆ ಮತ್ತು ಪರಿಣಾಮ ಹೀಗೆ ಅವನ ಆಸಕ್ತಿ ಬಹುಮುಖಿಯಾಗಿ ಬೆಳೆದಿತ್ತು. ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಅವುಗಳ ಅನ್ವಯ ಯಾವಾಗ ಮತ್ತು ಹೇಗೆ ಎಂಬುದು ಅವನಿಗೆ ಪ್ರಮುಖ ವಿಷಯವಾಗಿತ್ತು. ನ್ಯಾಯಾಲಯದಲ್ಲಿ ಅವನು ನೀಡಿದ್ದ ದೀರ್ಘ ಹೇಳಿಕೆಯು ಕಮ್ಯುನಿಸ್ಟ್ ಪ್ರಣಾಲಿಕೆಯ ಆನ್ವಯಿಕ ಪುನರುಚ್ಚಾರವೆಂಬಷ್ಟು ಗಾಢವಾಗಿದೆ. ಕಾನೂನಿನ ಇತಿಹಾಸವನ್ನು ಕೂಡ ಅವನು ವ್ಯಾಸಂಗ ಮಾಡಿದ ಮತ್ತು ತಾನೇ ಕಾನೂನಿನ ಇತಿಹಾಸಕ್ಕೆ ಒಂದು ಅಧ್ಯಾಯವನ್ನು ಸೇರಿಸಿಬಿಟ್ಟ. ಏಕೆಂದರೆ ಇದ್ದ ಕಾನೂನುಗಳನ್ನೆಲ್ಲಾ ಮಸಣಕ್ಕೆ ಸಾಗಿಸಿ ಬ್ರಿಟಿಷ್ ನ್ಯಾಯಾಲಯಗಳು ಭಗತ್ ಸಿಂಗ್‌ಗೆ ಗಲ್ಲುಶಿಕ್ಷೆ ನೀಡಿದವು. ಅದೂ ಬಹಿರಂಗವಾಗಿ ವಿಚಾರಣೆ ನಡೆಸದ ಹೇಡಿತನದ ಸಹಾಯದಿಂದ. ತನ್ನ ಹೋರಾಟವು ಐರ್ಲೆಂಡಿನ ಸ್ವಾತಂತ್ರ್ಯ ಹೋರಾಟವನ್ನು ಸದಾ ಹೋಲುತ್ತಿತ್ತು ಮತ್ತು ನೆನಪಿಸುತ್ತಿತ್ತು ಎಂಬುದು ಭಗತ್ ಸಿಂಗ್‌ನಿಗೆ ಹೆಮ್ಮೆಯ ವಿಷಯವಾಗಿತ್ತು. ಭಾರತವನ್ನು ದೋಚುವ ಮುನ್ನ ಬ್ರಿಟನ್ ಐರ್ಲೆಂಡನ್ನು ತುಳಿದು ಹಾಳುಗೆಡವಿತ್ತು. ಐರ್ಲೆಂಡಿನ ಅಜ್ಞಾತ ಲೇಖಕನೊಬ್ಬನ ಮಾತನ್ನು ಭಗತ್ ತನ್ನ ದಿನಚರಿಯಲ್ಲಿ ದಾಖಲಿಸಿದ್ದಾನೆ. ಕಾಂಗೋದಲ್ಲಿ ಬೆಲ್ಜಿಯಂ ನಡೆಸಿದ ಕ್ರೌರ್ಯವನ್ನು ಟೀಕಿಸುತ್ತಿದ್ದ ಬ್ರಿಟನ್ ಸ್ವತಃ ಐರ್ಲೆಂಡ್ ಮತ್ತು ಭಾರತ ದೇಶಗಳನ್ನು ಹಿಂಡಿ ಹಿಪ್ಪೇಕಾಯಿ ಮಾಡಿತ್ತು. ಭಗತ್ ದಾಖಲಿಸಿರುವ ಈ ಮಾತು ಇಂದಿನ ಅಮೆರಿಕಾದ ದುಷ್ಟ ನೀತಿಗಳಿಗೆ ಕನ್ನಡಿ ಹಿಡಿದಂತಿದೆ. ಮೆಕ್ಸಿಕೋ (ಅದನ್ನು ಮೇಹಿಕೋ ಎನ್ನುತ್ತಾರೆ) ದೇಶವನ್ನು ೨೦ನೆಯ ಶತಮಾನದ ಆದಿಯಲ್ಲಿ ಆಕ್ರಮಿಸಿದ ಅಮೆರಿಕಾ ಆಮೇಲೆ ಸತತವಾಗಿ 'ಛಪ್ಪನ್ನಾರು' ದೇಶಗಳನ್ನು ಧ್ವಂಸ ಮಾಡಿದೆ. ಅತ್ಯುಗ್ರ ಭಯೋತ್ಪಾದಕ ರಾಷ್ಟ್ರವಾದ ಅಮೆರಿಕಾ ಭಯೋತ್ಪಾದನೆಯನ್ನು ಖಂಡಿಸುತ್ತದೆ, ಹಿಮ್ಮೆಟ್ಟಿಸಲು ಬದ್ಧವಾಗಿದೆ ಮತ್ತು ಮಾನವ ಹಕ್ಕುಗಳ ಪ್ರತಿಪಾದನೆ ಮಾಡುತ್ತದೆ. ಭಗತ್ ಸಿಂಗ್‌ನ ದಿನಚರಿಯ ಪುಟಗಳು ಸಮಕಾಲೀನ ಸಂದರ್ಭದ ವಿಶ್ಲೇಷಣೆಗೆ ಸಾಮಗ್ರಿ ಒದಗಿಸುತ್ತವೆ.

ಅರಿಸ್ಟಾಟಲನ ಒಂದು ನಿರೂಪಣೆಯನ್ನು ಭಗತ್ ಸಿಂಗ್ ದಾಖಲಿಸಿ ಕೊಂಡಿದ್ದಾನೆ. ಪ್ರಜೆಗಳ ದಮನ ಮಾಡುವ ಯಾವುದೇ ಸರ್ಕಾರವಾಗಲಿ ಮತಧರ್ಮದಲ್ಲಿ ಶ್ರದ್ಧೆ ಬೆಳೆಸಿಕೊಳ್ಳಬೇಕೆಂದು ಪ್ರಜೆಗಳನ್ನು ಪ್ರೇರೇಪಿಸುತ್ತದೆ ಎಂಬುದು ಆ ನಿರೂಪಣೆ. ಭಾರತವೂ ಸೇರಿದಂತೆ ನಮ್ಮ ಸಮಕಾಲೀನ ಪ್ರಭುತ್ವಗಳು ಹೇಗೆ ಮತಧರ್ಮವನ್ನು ಹರಿತವಾದ ಕತ್ತಿಯನ್ನಾಗಿ ಮಾಡಿಕೊಂಡಿವೆ ಎಂಬುದನ್ನು ಗಮನಿಸಿದಾಗ ನಾಸ್ತಿಕನಾಗಿದ್ದ ಭಗತ್ ಸಿಂಗ್‌ನ ದೂರದೃಷ್ಟಿಯೇ ಅನನ್ಯವಾಗಿ ಕಾಣುತ್ತದೆ. ಆದರೆ ಇತಿಹಾಸದ ವ್ಯಂಗ್ಯ ಹೇಗಿರುತ್ತದೆಂದರೆ ಈಗ ಅಮೃತಸರದ ಸ್ವರ್ಣಮಂದಿರಕ್ಕೆ ಹೋಗಿ ಅಲ್ಲಿಯ ವಸ್ತುಪ್ರದರ್ಶನಕ್ಕೆ ಭೇಟಿ ನೀಡಿದರೆ ನೀವಲ್ಲಿ ಭಗತ್ ಸಿಂಗ್ ತದೇಕಚಿತ್ತದಿಂದ ಗ್ರಂಥ ಸಾಹಿಬ್ ಪಠಣದಲ್ಲಿ ನಿರತನಾಗಿರುವುದನ್ನು ಕಾಣುತ್ತೀರಿ. ಈ ಸಂದರ್ಭದಲ್ಲಿ ಎಮ್ಮಾ ಗೋಲ್ಡ್‌ಮನ್ ಎಂಬ ಅರಾಜಕತಾವಾದಿಯ ಮಾತು ಹಿತವೆನಿಸುತ್ತದೆ. ಅದನ್ನು ಭಗತ್ ಸಿಂಗ್ ದಾಖಲಿಸಿದ್ದಾನೆ ಮತ್ತು ಅದು ಅವನ ವ್ಯಕ್ತಿತ್ವದ ಮೂಲಭೂತ ಲಕ್ಷಣವೇ ಆಗಿದೆ: 'ತನ್ನ ಸಹಜೀವಿಗಳಿಗಾಗುತ್ತಿರುವ ಅನ್ಯಾಯವನ್ನು ಪ್ರತಿಭಟಿಸಿ ಇಡೀ ಬದುಕನ್ನು ಮುಡಿಪಾಗಿಟ್ಟು ನುಗ್ಗಿ, ಪ್ರಾಣವನ್ನೇ ಪಣವಾಗಿಟ್ಟು ಹೋರಾಡುವ ಮನುಷ್ಯ ಒಬ್ಬ ಸಂತ. ಅದರಲ್ಲೂ ಸಕ್ರಿಯವಾಗಿ ಮತ್ತು ನಿಷ್ಕ್ರಿಯವಾಗಿ ಕ್ರೌರ್ಯ ಮತ್ತು ಅನ್ಯಾಯಗಳನ್ನು ಎತ್ತಿ ಹಿಡಿಯುವವರಿಗೆ ಹೋಲಿಸಿದರೆ, ಅವನಷ್ಟೇ ಅಲ್ಲ, ಸುತ್ತಲಿರುವ ಜೀವಿಗಳು ನಾಶವಾದರೂ ಸರಿಯೇ ಹೋರಾಟಗಾರನೊಬ್ಬ ಸಂತನೇ. ಈ ಸಮಾಜದಲ್ಲಿ ಯಾರೂ ಒಂದೂ ತಪ್ಪು ಮಾಡಿಲ್ಲವೋ, ಪಾಪ ಎಸಗಿಲ್ಲವೋ ಅಂಥವನಷ್ಟೇ ಆ ಸಂತನ ಮೇಲೆ ಮೊದಲ ಕಲ್ಲು ತೂರಲಿ.' ಗಾಂಧೀಜಿಗೆ ಈ ಮಾತು ಹೇಳಿದ್ದರೆ ಅವರಿಗೆ ಭಗತ್ ಸಿಂಗ್ ಹೆಚ್ಚು ನಿರ್ದಿಷ್ಟವಾಗಿ ಅರ್ಥವಾಗಿರುತ್ತಿದ್ದ.

ಭಗತ್ ಸಿಂಗ್ ಪರಂಪರೆ ತಮ್ಮದೆಂದು ಹೇಳಿಕೊಳ್ಳಬೇಕಾದರೆ ಮೊದಲು ಅವನು ಚಂದ್ರಶೇಖರ ಆಜಾದ್ ಮತ್ತು ಇತರ ಸಹಚರರು ಸ್ಥಾಪಿಸಿದ ಹಿಂದುಸ್ಥಾನ್ ಸೋಶಿಯಲಿಸ್ಟ್ ರಿಪಬ್ಲಿಕ್ ಅಸೋಸಿಯೇಷನ್‌ನ ಪ್ರಣಾಲಿಕೆಯನ್ನು ನಾವು ಅಂತರ್ಗತಗೊಳಿಸಿಕೊಳ್ಳಬೇಕು. ಅಂತೆಯೇ ಹಿಂದುಸ್ಥಾನ್ ಸೋಶಿಯಲಿಸ್ಟ್ ರಿಪಬ್ಲಿಕ್ ಆರ್ಮಿಯ ನೀತಿ ಮತ್ತು ಶಿಸ್ತನ್ನು ಅರಿತುಕೊಳ್ಳಬೇಕು. ಸಮಾಜವಾದವೆಂದರೆ ಒಂದು ತುಚ್ಛ ವ್ಯವಸ್ಥೆಯೆಂದು ಹೇಳುತ್ತಾ ನಾಲಿಗೆಯಲ್ಲಿ ವಿಷಕ್ರಿಮಿಗಳನ್ನು ತುಂಬಿಕೊಂಡಿರುವವರು ಭಗತ್ ಸಿಂಗ್ ಹೆಸರು ಹೇಳಲು ಸರ್ವಥಾ ಅನರ್ಹರು. ಅವನ ಕೀರ್ತಿಯ ಲಾಭ ಪಡೆಯಬೇಕೆಂಬ ಹೊಲಸು ಆಕಾಂಕ್ಷೆಯಷ್ಟೇ ಅಂಥವರ ಏಕಮೇವ ಉದ್ದೇಶ. ಅಂಥವರ ಬಗೆಗೆ ನಾವು ಎಚ್ಚರ ವಹಿಸಬೇಕು. ಭಗತ್ ಸಿಂಗ್‌ನ ಸ್ಮಾರಕವಿರುವ ಹುಸೇನಿವಾಲಾಕ್ಕೆ ನಮ್ಮ ದೇಶದ ಎಷ್ಟೋ ಪ್ರಧಾನಮಂತ್ರಿಗಳು ಹೋಗಿಬಂದಿದ್ದಾರೆ. ಈಗಿನವರೂ ಹೋಗಿಬರಲು ಅಡ್ಡಿಯಿಲ್ಲ. ಆದರೆ ಅಲ್ಲಿಗೆ ಹೋಗುವ ಮುನ್ನ ಅವನ ದಿನಚರಿಯ ಪುಟಗಳನ್ನು ತಿರುವಿ ಹಾಕಿ ಅಲ್ಲಿರುವ ಅಮೂಲ್ಯ ಸಂದೇಶವನ್ನು ಮಾನ್ಯ ಮಾಡುತ್ತೇವೆಯೋ ಅಥವಾ ಅದಕ್ಕೆ ಎರಡು ಬಗೆಯುತ್ತೇವೆಯೋ ಎಂಬುದನ್ನು ಖಾತ್ರಿ ಮಾಡಿಕೊಳ್ಳುವುದು ಆರೋಗ್ಯಕರ. ಗುಲಾಮಗಿರಿಯನ್ನು ಸಮರ್ಥಿಸಿದ ಕ್ರೈಸ್ತ ಇಗರ್ಜಿಯ ವಾದವೊಂದನ್ನು ಭಗತ್ ಸಿಂಗ್ ತನ್ನ ದಿನಚರಿಯಲ್ಲಿ ಉಲ್ಲೇಖಿಸಿದ್ದಾನೆ. ಸಮಾಜವಾದ ಮತ್ತು ಧರ್ಮ ನಿರಪೇಕ್ಷತೆಯನ್ನು ದೂಷಿಸುವವರು ಯಾವ ರೀತಿಯಲ್ಲೂ ಅಂತಹ ಚರ್ಚನಿಂದ ಭಿನ್ನರಲ್ಲ.

ಮಾರ್ಕ್ಸ್, ಏಂಗೆಲ್ಸ್ ಮತ್ತು ಲೆನಿನ್ ಬರೆದಿದ್ದ ಹತ್ತಾರು ಕೃತಿಗಳನ್ನು ತರಿಸಿಕೊಂಡು ಭಗತ್ ಸಿಂಗ್ ಜೈಲಿನಲ್ಲಿ ಓದಿದ್ದ ಮತ್ತು ಜೀರ್ಣಿಸಿಕೊಂಡಿದ್ದ. ವೈಜ್ಞಾನಿಕ ಸಮಾಜವಾದವು ಅವನ ಉಸಿರಾಗಿತ್ತು ಮತ್ತು ಪ್ರತಿಯೊಂದು ನಾಡಿ ಮಿಡಿತದಲ್ಲೂ ವೈಚಾರಿಕತೆಯು ಹರಿಯುತ್ತಿತ್ತು. ಈ ಸೈದ್ಧಾಂತಿಕ ನಿಲುವು ನಮ್ಮ ಯುವ ಜನರಿಗೆ ಭಗತ್ ಸಿಂಗ್‌ನ ಬಳುವಳಿಯಾಗಬೇಕು. ಭಗತ್ ಸಿಂಗ್ ನೇಣುಗಂಬವನ್ನೇರುವ ಮುನ್ನ ಅವನ ಭೇಟಿಯಾದವರಲ್ಲಿ ಪ್ರಾಣನಾಥ್ ಮೆಹ್ತಾ ಕಡೆಯವರು. ಅಂದು ಲೆನಿನ್ನನ ಜೀವನ ಚರಿತ್ರೆಯನ್ನು ಅವನ ಕೈಗೆ ಅವರು ಕೊಟ್ಟು ಬಂದಿದ್ದರು. ಅವರಿಂದ ಆಗಾಗ್ಗೆ ಕ್ರಾಂತಿಕಾರಿ ಸಮಾಜವಾದಕ್ಕೆ ಸಂಬಂಧಿಸಿದ ಪುಸ್ತಕಗಳನ್ನವನು ಪಡೆಯುತ್ತಿದ್ದ. ನೇಣುಗಂಬವನ್ನೇರುವ ಕ್ಷಣದವರೆಗೂ ಅವನು ಅಧ್ಯಯನಶೀಲನೇ ಆಗಿದ್ದ. ಅದೊಂದು ಅಚ್ಚರಿಯ ಸಂಗತಿ. ಅವನ ಕೋಣೆಯಲ್ಲಿದ್ದ ಭಗತ್ ಸಿಂಗ್‌ನನ್ನು ನೇಣುಗಂಬಕ್ಕೆ ಕರೆದೊಯ್ಯಲು ಜೈಲಿನ ಸಿಬ್ಬಂದಿಯ ಒಬ್ಬಾತ ಹೋದ, ಭಗತ್ ಸಿಂಗ್ ಲೆನಿನ್ನನ ಪ್ರಶಸ್ತ ಕೃತಿಗಳಲ್ಲಿ ಒಂದಾದ 'ಪ್ರಭುತ್ವ ಮತ್ತು ಕ್ರಾಂತಿ' ಎಂಬ ಪುಸ್ತಕವನ್ನು ಓದುತ್ತಿದ್ದ. ಸಿಬ್ಬಂದಿಯವ ಹೇಳಿದ, 'ಸಾಕಿನ್ನು, ಹೊರಡು' ಎಂದು. ಭಗತ್ ಹೇಳಿದ: 'ಒಂದು ಕ್ಷಣ ತಾಳು, ಪುಸ್ತಕವನ್ನು ಓದಿ ಮುಗಿಸುವವನಿದ್ದೇನೆ. ಒಬ್ಬ ಕ್ರಾಂತಿಕಾರಿಯು ಇನ್ನೊಬ್ಬ ಕ್ರಾಂತಿಕಾರಿಯನ್ನು ಸಂಧಿಸಲು ಸಿದ್ಧನಾಗಿದ್ದಾನೆ.' ತಮ್ಮ ಕಡೆಯ ಭೇಟಿಯಂದು ಪ್ರಾಣನಾಥ್ ಮೆಹ್ತಾ ಕೇಳಿದರು : 'ದೇಶಕ್ಕೆ ನಿನ್ನ ಸಂದೇಶವೇನು ?' ಮರುಕ್ಷಣವೇ ಭಗತ್ ಸಿಂಗ್ ಹೇಳಿದ, 'ಸಾಮ್ರಾಜ್ಯವಾದ್ ಮುರ್ದಾಬಾದ್ – ಇಂಕಿಲಾಬ್ ಜಿಂದಾಬಾದ್' (ಸಾಮ್ರಾಜ್ಯವಾದ ನಾಶವಾಗಲಿ – ಕ್ರಾಂತಿ ಚಿರಾಯುವಾಗಲಿ). ಇದು ಭಗತ್ ಸಿಂಗ್‌ನ ಜೀವಾಳ. ಜನರನ್ನು ಹಿಂಸಿಸುತ್ತಾ, ಅವರ ರಕ್ತ ಹೀರುತ್ತಾ, ನಿರಂತರವಾಗಿ ಅವರನ್ನು ಅಧೀನದಲ್ಲಿರಿಸಿಕೊಳ್ಳುತ್ತೇವೆಂಬ ಅಹಂಕಾರ ನಮ್ಮ ಸುತ್ತಲೂ ಭೀಕರ ಸ್ವರೂಪದಲ್ಲಿ ಕೆನ್ನಾಲಿಗೆ ಚಾಚಿ ನಿಂತಿದೆ. ಭಗತ್ ಸಿಂಗ್‌ನ ಅಮರವಾಣಿ ಹೇಳುತ್ತದೆ : 'ಇತಿಹಾಸದಲ್ಲಿ ಅದಕ್ಕೆ ಕೊನೆಯಿದೆ. ದುಡಿಯುವ ಜನ ಅದನ್ನು ಸ್ಮಶಾನದಲ್ಲಿ ಹೂಳುತ್ತಾರೆ.' ಈ ಸಂದೇಶವು ದಿನಚರಿಯಲ್ಲಿ ಹಾಸು ಹೊಕ್ಕಾಗಿದೆ.

ಇಂತಹ ಮೌಲಿಕವಾದ ದಿನಚರಿಯನ್ನು ಕನ್ನಡಕ್ಕೆ ಸೊಗಸಾಗಿ ಅನುವಾದಿಸಿರುವ ಡಾ॥ ಅನುಪಮಾ ಮತ್ತು ಅದನ್ನು ಪ್ರಕಟಿಸಿರುವ ಲಡಾಯಿ ಪ್ರಕಾಶನಕ್ಕೆ ಮತ್ತೊಮ್ಮೆ ವಂದನೆಗಳು. ನಮ್ಮ ಯುವಕರ ದಿನಚರಿಯು ಈ ಭಗತ್ ಸಿಂಗ್ ದಿನಚರಿಯಿಂದಾಗಿ ಸಾಮಾನ್ಯತೆಯಿಂದ ಅಸಾಮಾನ್ಯತೆಯತ್ತ ವಿಕಾಸ ಹೊಂದುವಂತಾಗಲೆಂದು ಆಶಿಸೋಣ.

**ಜಿ. ರಾಮಕೃಷ್ಣ**
೨–ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ
ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫



# ಭಾರತ–ಪಾಕಿಸ್ತಾನ ಸಂಬಂಧಗಳು ಸುಧಾರಿಸೀತೇ ?

**ಭಾ**ರತ – ಪಾಕಿಸ್ತಾನಗಳ ಸಂಬಂಧಗಳಲ್ಲಿ ಏರಿಳಿತಗಳು ಹೊಸದೇನಲ್ಲ. ದೇಶ ವಿಭಜನೆಯಾದಾಗಿನಿಂದಲೇ ಅದು ನಡೆದು ಬಂದಿದೆ. ಕಾಶ್ಮೀರದಲ್ಲಿ ನುಗ್ಗಿದ ಪಾಕಿಸ್ತಾನ ಸೈನಿಕರ ಪ್ರವೇಶದಿಂದಷ್ಟೇ ಅಲ್ಲ, ಮತಾಂಧತೆಯಿಂದ ನಡೆದ ಕಗ್ಗೊಲೆಗಳು, ಗಡಿಯಲ್ಲಿನ ಘರ್ಷಣೆಗಳು ಕಾರಣವಾದವು. ದೇಶವಿಭಜನೆಗೊಂಡು ಎಪ್ಪತ್ತು ವರ್ಷಗಳಾಗುತ್ತ ಬಂದರೂ, ಎರಡೂ ದೇಶಗಳ ಮಧ್ಯೆ ನಾಲ್ಕು ಬಾರಿ ಸಶಸ್ತ್ರ ಘರ್ಷಣೆಗಳು ನಡೆದಾಗ್ಯೂ ಯಾವ ಒಂದು ಪ್ರಶ್ನೆಯೂ ಇತ್ಯರ್ಥವಾಗದೆ ಉಳಿದಿದೆ. ಕಾಶ್ಮೀರದ ಪ್ರಶ್ನೆ ಇತ್ಯರ್ಥವಾಗದೆ ಯಾವುದೂ ಬಗೆಹರಿಯದು ಎಂಬುದು ಪಾಕಿಸ್ತಾನದ ಹಟ. ಭಯೋತ್ಪಾದನೆ, ಗಡಿ ಘರ್ಷಣೆಗಳ ಅಂತ್ಯ, ವಾಣಿಜ್ಯ ಸಂಬಂಧಗಳ ವೃದ್ಧಿಗೆ ಭಾರತದ ಒತ್ತು. ಸಂಬಂಧಗಳು ಸಹಜ ಸ್ಥಿತಿಗೆ ಬಂದರೆ ಯಾವುದೇ ಪ್ರಶ್ನೆಯನ್ನು ಬಗೆಹರಿಸಲು ಸಾಧ್ಯ. ಆದರೆ ಪ್ರತಿಸಲ ಅಂಥ ಸಂಭವ ಒದಗಿದಾಗ ಏನಾದರೊಂದು ದುರ್ಘಟನೆ ನಡೆದು ಮತ್ತೆ ಹಿಂದಿನ ಬಿಕ್ಕಟ್ಟಿನ ಸ್ಥಿತಿಗೆ ಮರಳುವುದನ್ನು ನಾವು ಕಂಡಿದ್ದೇವೆ. ಎರಡೂ ದೇಶಗಳು ಈಗ ನ್ಯೂಕ್ಲಿಯರ್ ಶಕ್ತರಾಷ್ಟ್ರಗಳು ಬೇರೆ. ಶಾಂತಿಯುತ ಸಹಬಾಳ್ವೆ ಬಿಟ್ಟರೆ ಎರಡೂ ದೇಶಗಳಿಗೆ ಬೇರೇ ಮಾರ್ಗವಿಲ್ಲ.



ಇತ್ತೀಚೆಗೆ ರಷ್ಯಾದ ಉಫಾದಲ್ಲಿ ಜರುಗಿದ ಸಮಾವೇಶವೊಂದರಲ್ಲಿ ಭಾಗವಹಿಸಿದ್ದ ಭಾರತ–ಪಾಕಿಸ್ತಾನ ಪ್ರಧಾನಿಗಳಾದ ನರೇಂದ್ರ ಮೋದಿ ಮತ್ತು ನವಾಜ್ ಷರೀಫ್ ನಡೆಸಿದ ಮಾತುಕತೆ, ಅನಂತರ ನೀಡಲಾದ ಪ್ರಕಟಣೆ ಸಾಕಷ್ಟು ಚರ್ಚೆಗೆ ಗ್ರಾಸವಾಯಿತು. ಪ್ರಕಟಣೆಯಲ್ಲಿ ಕಾಶ್ಮೀರದ ಪ್ರಸ್ತಾಪವಿಲ್ಲದೆ ಇತರ ವಿಷಯಗಳಿಗೆ ಒತ್ತುಕೊಟ್ಟು ಎರಡು ದೇಶಗಳ ಮಧ್ಯೆ ಅಧಿಕಾರಿಗಳ ಮಟ್ಟದ ಸಭೆ ನಡೆಸಲು ನಿರ್ಧರಿಸಿದ್ದು ಪ್ರಮುಖ ವಿಷಯ. ಭಾಜಪ ಇದನ್ನೇ ದೊಡ್ಡ ಸಾಧನೆ ಎಂದು ಹೇಳಿಕೊಂಡು ಮೋದಿಯವರ ಮುತ್ಸದ್ದಿತನವನ್ನು ಅಟ್ಟಕ್ಕೇರಿಸಿತು. ಅದೇ ಸಮಯದಲ್ಲಿ ಪಾಕಿಸ್ತಾನದಲ್ಲಿ ನವಾಜ್ ಷರೀಫ್ ಸರಕಾರ ಪ್ರತಿಪಕ್ಷಗಳ, ಕಾಶ್ಮೀರಿ ಪ್ರತ್ಯೇಕವಾದಿಗಳ ಟೀಕೆಗೆ ಒಳಗಾದರು. ಆಗಸ್ಟ್ ತಿಂಗಳ ಕೊನೆಯ ವಾರದಲ್ಲಿ ನಡೆಯಬೇಕಾಗಿರುವ ಸಭೆ ಅನಿಶ್ಚಿತತೆಯಿಂದ ಕೂಡಿದೆ. ಏಕೆಂದರೆ ಈ ಕಾಲಾವಧಿಯಲ್ಲಿ ಸಂಬಂಧಗಳಿಗೆ ಹುಳಿಹಿಂಡುವ ಘಟನೆಗಳು ನಡೆದು ಹೋಗಿವೆ. ಒಂದು ವೇಳೆ ನಿಗದಿಯಾಗಿರುವಂತೆ ಅಧಿಕಾರಿಗಳ ಸಭೆ ಜರುಗಿದರೂ ಹೆಚ್ಚಿನದೇನನ್ನು ನಿರೀಕ್ಷಿಸಲಾಗದು.

ನರೇಂದ್ರ ಮೋದಿ ಪ್ರಧಾನಿ ಪಟ್ಟ ವಹಿಸಿಕೊಂಡಾಗ ಪಾಕಿಸ್ತಾನದ ಪ್ರಧಾನಿ ಹಾಗೂ ಇತರ ಸಾರ್ಕ್ ದೇಶಗಳ ಅಧಿಪತಿಗಳ ಉಪಸ್ಥಿತಿಯನ್ನು ಭಾಜಪ ವೈಭವೀಕರಿಸಿತು. ಆದರೆ ಭಾರತ–ಪಾಕಿಸ್ತಾನ ಸಂಬಂಧಗಳು ಸುಧಾರಿಸುವುದಕ್ಕಿಂತ ಮತ್ತಷ್ಟು ಬಿಗಡಾಯಿಸತೊಡಗಿತು. ಪಾಕಿಸ್ತಾನ ಸೇನೆಯಿಂದ ಪದೇ ಪದೇ ಕದನ ವಿರಾಮ ರೇಖೆಯ ಉಲ್ಲಂಘನೆ, ಗಡಿಯಲ್ಲಿ ದಾಳಿ ಹೆಚ್ಚಿದ ಕಾರಣ ಭಾರತ ಸರಕಾರ ಎರಡೂ ದೇಶಗಳ ನಡುವಿನ ಉನ್ನತಮಟ್ಟದ ಮಾತುಕತೆಯನ್ನು ಸ್ಥಗಿತಗೊಳಿಸಿತು. ಮತ್ತೆ ಪ್ರಾರಂಭವಾದುದು ಎರಡೂ ದೇಶಗಳ ಮಧ್ಯೆ ಆರೋಪ ಪ್ರತ್ಯಾರೋಪಗಳ ಕೆಸರೆರಚಾಟ. ಮುಂಬೈ ದಾಳಿಯ ಪ್ರಮುಖ ಆರೋಪಿಗಳಲ್ಲಿ ಒಬ್ಬನಾದ ಉಗ್ರಗಾಮಿ ಲಖ್ವಿಯನ್ನು ಬಂಧಿಸಿದ ಪಾಕಿಸ್ತಾನ ಸರಕಾರ ಆತನನ್ನೂ ಬಿಡುಗಡೆ ಮಾಡಿದ್ದು, ಕಾಶ್ಮೀರದ ಆಕ್ರಮಿತ ಪ್ರದೇಶದಲ್ಲಿರುವ ವಿವಾದಿತ ಗಿಲ್ಗಿಟ್ ಮತ್ತು ಬಾಲ್ಟಿಸ್ತಾನ್ ಪ್ರಾಂತಗಳಲ್ಲಿ ಚುನಾವಣೆ ನಡೆಸಿದ್ದು ಬಿಕ್ಕಟ್ಟನ್ನು ಮತ್ತಷ್ಟು ಹೆಚ್ಚಿಸಿತ್ತು. ಇಂಥ ಸನ್ನಿವೇಶದಲ್ಲೇ ರಷ್ಯಾದಲ್ಲಿ ಇಬ್ಬರು ಪ್ರಧಾನಿಗಳೂ ಭೇಟಿಯಾಗಿ ಕೈಕುಲುಕಿದ್ದು. ಆದರೆ ಅದು ಸೃಷ್ಟಿಸಿದ ಭಾವನೆ ಅಲ್ಪಕಾಲದ್ದು. ಮಾತುಕತೆಗಳ ಮೇಲೆ ಮೋಡ ಕವಿಯುವ ಘಟನೆಗಳು ಮತ್ತೆ ಸಂಭವಿಸಿವೆ.

ಪಾಕಿಸ್ತಾನದಲ್ಲಿ ಚುನಾಯಿತ ಸರಕಾರ ಅಧಿಕಾರದಲ್ಲಿದ್ದರೂ ಸೇನೆಯ ಪ್ರಾಬಲ್ಯ ಕಿಂಚಿತ್ತೂ ಕಡಿಮೆಯಾಗಿಲ್ಲ. ಸೇನೆಯ ಸಮ್ಮತಿಯಿಲ್ಲದೆ ನಾಗರಿಕ ಸರಕಾರ ಮಾಡಿಕೊಳ್ಳುವ ಯಾವುದೇ ಒಪ್ಪಂದ ಊರ್ಜಿತವಲ್ಲ. ಎತ್ತು ಏರಿಗೆ ಎಳೆಯಿತು ಎನ್ನುವ ನುಡಿಯಂತೆ ಅಲ್ಲಿನ ಪರಿಸ್ಥಿತಿ. ಹಾಗಾಗಿ ಮೊದಲೇ ಹೇಳಿರುವಂತೆ ಮೋದಿ–ಷರೀಫ್ ಒಪ್ಪಂದಕ್ಕೆ ಪಾಕ್ ಸೇನೆಯ ಆಕ್ಷೇಪ ಅನಿರೀಕ್ಷಿತವಾದ್ದೇನಲ್ಲ. ಈ ಹಿನ್ನೆಲೆಯಲ್ಲಿಯೇ ಕಳೆದ ಒಂದು ತಿಂಗಳಲ್ಲಿ ನಡೆದಿರುವ ಘಟನೆಗಳನ್ನು ಪರಿಶೀಲಿಸಬೇಕು. ಭಾರತ–ಪಾಕಿಸ್ತಾನ ಗಡಿಯಲ್ಲಿ ಐವತ್ತಕ್ಕೂ ಹೆಚ್ಚು ಉಲ್ಲಂಘನೆಗಳು ಸಂಭವಿಸಿವೆ. ಎರಡೂ ಕಡೆ ನಿರಂತರವಾಗಿ ಗುಂಡಿನ ಕಾಳಗ ನಡೆದಿದೆ. ಸಾವು–ನೋವುಗಳೂ ಸಂಭವಿಸಿವೆ. ಆರೋಪ ಪ್ರತ್ಯಾರೋಪಗಳು ಯಾವತ್ತಿನಂತೆ ನಡೆದಿದೆ. ಈ ಮಧ್ಯೆ ಪಂಜಾಬಿನ ಗಡಿಯ ಪ್ರದೇಶ ಗುರುದಾಸಪುರ, ಉಧಂಪುರಗಳಲ್ಲಿ ಜರುಗಿದ ಭಯೋತ್ಪಾದನಾ ಕೃತ್ಯ ಸಂಬಂಧಗಳನ್ನು ಸಂಪೂರ್ಣವಾಗಿ ಅಧೋಗತಿಗಿಳಿಸಿದೆ. ಪಾಕಿಸ್ತಾನಿ ನೆಲದಲ್ಲಿ ಬೇರೂರಿರುವ ಭಯೋತ್ಪಾದನಾ ಸಂಸ್ಥೆ ಲಷ್ಕರಿತೋಯಿಬಾ ಕೈವಾಡ ಪಂಜಾಬ್‌ನಲ್ಲಿ ನಡೆದ ಭಯೋತ್ಪಾದನಾ ಕೃತ್ಯದ ಹಿಂದಿದೆ. ಈ ದುರ್ಘಟನೆಯಲ್ಲಿ ಇಬ್ಬರು ಭಾರತೀಯ ಗಡಿಸೇನೆಯ ಯೋಧರು ಮೃತಪಟ್ಟಿದ್ದಾರೆ. ಭಯೋತ್ಪಾದಕರಲ್ಲಿ ಮೊಹಮ್ಮದ್ ನಾವೆದ್ ಯಾಕುಬ್ ಎಂಬ ಪಾಕಿಸ್ತಾನಿ ಉಗ್ರಗಾಮಿ ಸೆರೆಸಿಕ್ಕಿ ಭಾರತದ ವಶದಲ್ಲಿದ್ದಾನೆ. ಗುರುದಾಸಪುರ ಭಯೋತ್ಪಾದನಾ ದಾಳಿಯ ಹಿಂದೆ ಪಾಕಿಸ್ತಾನದ ಕೈವಾಡ ಇರುವುದು ಸ್ಪಷ್ಟವಾಗಿದೆ.



ಇದರಿಂದ ಅಧಿಕಾರಿಗಳ ಸಭೆಯಲ್ಲಿ ಇವು ಸಹಜವಾಗಿಯೇ ಮುಖ್ಯವಾಗಿ ಪ್ರಸ್ತಾಪವಾಗುವುದರಲ್ಲಿ ಸಂಶಯವಿಲ್ಲ. ಆಗಸ್ಟ್ ೨೩ರಂದು ನಡೆಯಬೇಕಾಗಿರುವ ಸಭೆಯನ್ನು ಕುರಿತು ಪಾಕಿಸ್ತಾನದ ಕಡೆಯಿಂದ ಯಾವ ಸೂಚನೆಯೂ ಇಲ್ಲದಿರುವುದರಿಂದ ಮಾತುಕತೆ ನಡೆಯದಿರುವ ಸಂಭವವೂ ಉಂಟು. ಏನಿದ್ದರೂ ಒಂದು ಸಭೆಯಿಂದ, ಅದರಲ್ಲೂ ಸಂಕೀರ್ಣ ಪರಿಸ್ಥಿತಿಯಲ್ಲಿ ಮೊದಲ ಸಭೆಯಲ್ಲಿ ಪ್ರಮುಖವಾದದ್ದೇನನ್ನು ನಿರೀಕ್ಷಿಸುವಂತಿಲ್ಲ. ಆದರೂ ಮುಖಾಮುಖಿ ಚರ್ಚೆ ಸ್ವಾಗತಾರ್ಹ. ಭಾರತ–ಪಾಕಿಸ್ತಾನಿ ಅಧಿಕಾರಿಗಳ ಮಟ್ಟದ ಸಭೆ ಈವರೆಗೆ ಎಷ್ಟೋ ನಡೆದಿದೆ. ಆದರೆ ಅದು ಅಂಥ ದೊಡ್ಡ ಫಲಿತಾಂಶವನ್ನೇನೂ ನೀಡಿಲ್ಲ. ಏನೇ ಆಗಲಿ ಘರ್ಷಣೆಗಳಿಗಿಂತ ಪರಸ್ಪರ ಸಂವಾದ ಮೇಲು. ಪಾಕಿಸ್ತಾನದ ಮಟ್ಟಿಗೆ ದ್ವಿಪಕ್ಷೀಯ ಮಾತುಗಳಿಗಿಂತ ಅಮೆರಿಕದ ಮಧ್ಯಸ್ತಿಕೆಯಲ್ಲಿ ಮಾತುಕತೆ ನಡೆಯುವುದು ಅಪೇಕ್ಷಣೀಯ. ಹಿಂದೊಮ್ಮೆ ೧೯೬೫ರಲ್ಲಿ ಭಾರತ ಮತ್ತು ಪಾಕಿಸ್ತಾನಗಳ ಮಧ್ಯೆ ಕದನ ನಡೆದಾಗ ಅಂದಿನ ಸೋವಿಯೆತ್ ರಷ್ಯ ಮಧ್ಯಸ್ತಿಕೆಯಲ್ಲಿ ಯುದ್ಧಸ್ತಂಭನವಾದ್ದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಎಲ್ಲ ವಿವಾದಿತ ಸಮಸ್ಯೆಗಳನ್ನೂ ದ್ವಿಪಕ್ಷೀಯ ಮಾತುಕತೆಗಳಿಂದಲೇ ಬಗೆಹರಿಸಿಕೊಳ್ಳಬೇಕು ಎಂಬ ೧೯೭೨ರ ಸಿಮ್ಲಾ ಒಪ್ಪಂದಕ್ಕೆ ಎರಡೂ ದೇಶಗಳು ಬದ್ಧವಾಗಿವೆ. ಅಂತೆಯೇ ಮೂರನೆಯವರ ಮಧ್ಯಪ್ರವೇಶವಿಲ್ಲದೆ ಪ್ರಾಮಾಣಿಕವಾಗಿ ಮಾತುಕತೆಗಳನ್ನು ನಡೆಸಿದಲ್ಲಿ ಪ್ರಗತಿ ಸಾಧ್ಯ.

**ಸೀಯಾರ್ಕೆ**

‘ಚೌಬೀನ’, ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫

# ಶಿಕ್ಷಕರ ದಿನಾಚರಣೆಯ ನೆನಪಿನಲ್ಲಿ...

ಡಾ|| ಕಾ. ವೆಂ. ಶ್ರೀನಿವಾಸಮೂರ್ತಿ

ಇಂದು ನಾಡಿನಲ್ಲಿ ಅನೇಕ ದಿನಾಚರಣೆಗಳು ಅಸ್ತಿತ್ವದಲ್ಲಿವೆ. ಪರಿಸರ, ಆರೋಗ್ಯ ಮುಂತಾದ ಜೀವಕೇಂದ್ರಿತ ದಿನಾಚರಣೆಗಳು ಒಂದೆಡೆಯಾದರೆ, ಕಾರ್ಮಿಕರು, ಶಿಕ್ಷಕರು, ಮಕ್ಕಳು ಇವುಗಳ ಕೇಂದ್ರಿತ ಸಾಮಾಜಿಕ ದಿನಾಚರಣೆಗಳು ಇನ್ನೊಂದೆಡೆ ಇವೆ. ಅಂತೆಯೇ ಮನುಷ್ಯ ಮತ್ತು ನಿಸರ್ಗ ನಿರ್ಮಿತವಾದ ಅನೇಕ ಮುಖ್ಯ ಸಂಗತಿಗಳಲ್ಲಿ ಒಂದೊಂದು ಸಹ ಒಂದು ಪ್ರತ್ಯೇಕ ದಿನಾಚರಣೆಗೆ ಒಳಪಟ್ಟಿದೆ. ಈ ನಿಟ್ಟಿನಲ್ಲಿ ಮಾತೃ ದಿನಾಚರಣೆ, ಪ್ರೇಮಿಗಳ ದಿನಾಚರಣೆ, ಸ್ವಾತಂತ್ರ್ಯ ದಿನಾಚರಣೆ ಇತ್ಯಾದಿಗಳಿವೆ.

ಹೀಗೆ ಅನೇಕ ದಿನಾಚರಣೆಗಳ ಸಾಲಿನಲ್ಲಿ ಶಿಕ್ಷಕರ ದಿನಾಚರಣೆಯೂ ಇದೆ. ಈ ಸಂದರ್ಭದಲ್ಲಿ ಶಿಕ್ಷಕರೇ ಸಮಾಜದ ಎಲ್ಲ ವರ್ಗಗಳಲ್ಲಿ ಮಿಗಿಲು ಎಂಬಂತಹ ಮಾತುಗಳು ಅನೇಕ ಕಡೆಗಳಲ್ಲಿ ಕೇಳಿಬರುತ್ತವೆ. ಅಂತೆಯೇ ಕಾರ್ಮಿಕರ ದಿನಾಚರಣೆಯಲ್ಲಿ ಕಾರ್ಮಿಕರು ಸಮಾಜದ ಬೆನ್ನೆಲುಬು ಎಂದು ಹೇಳಲಾಗುತ್ತದೆ. ಹೀಗೆ ಮಾತನಾಡುತ್ತ ಹೋದರೆ ಎಲ್ಲ ಮನುಷ್ಯ ವರ್ಗಗಳೂ ಮುಖ್ಯವೇ. ಕಾರಣ, ಮನುಷ್ಯನ ಅವಶ್ಯಕತೆಗಳು ಬಹುಮುಖಿಯಾಗಿವೆ. ಹಾಗಾಗಿ ಅವುಗಳ ಪೂರೈಕೆ ಅನಿವಾರ್ಯವಾಗಿ ಮನುಷ್ಯನಲ್ಲಿ ಶ್ರಮ ವಿಭಜನೆ ಉಂಟಾಗಿದೆ. ಆದರೂ ಒಂದೊಂದು ದಿನಾಚರಣೆಯ ಸಂದರ್ಭದಲ್ಲಿ ಈ ಸಂಬಂಧದ ವ್ಯಕ್ತಿಯೇ ಶ್ರೇಷ್ಠ ಎನ್ನುವುದು ಭಾವೋದ್ವೇಗದ ಮಾತು ಮಾತ್ರ ಎನ್ನಿಸುತ್ತದೆ. ಈ ತಾತ್ವಿಕ ನೆಲೆಯಲ್ಲಿ ಎಲ್ಲ ವೃತ್ತಿಗಳು ಸಮಾನ ಅಗತ್ಯವಾಗಿ ಕಂಡುಬರುತ್ತವೆ. ಆದ್ದರಿಂದ ಯಾವ ವೃತ್ತಿಯೂ ಶ್ರೇಷ್ಠವಲ್ಲ, ಯಾವ ವೃತ್ತಿಯೂ ಕನಿಷ್ಠವಲ್ಲ. ಈ ಹಿನ್ನೆಲೆಯಲ್ಲಿ ಒಂದೊಂದು ವೃತ್ತಿಗೂ ತನ್ನದೇ ಆದ ಆದ್ಯತೆ ಇರುವಂತೆ ಶಿಕ್ಷಕ ವೃತ್ತಿಗೂ ಇದೆ. ಅದನ್ನು ಮಾತ್ರ ಇಲ್ಲಿ ಸ್ಮರಿಸಬಹುದಾಗಿದೆ.

ಶಿಕ್ಷಕರ ವೃತ್ತಿ ಮನೋಮೂಲವಾದುದು. ಇದರ ಮುಖ್ಯ ಸಾಧನ ಮಿದುಳು. ಉಳಿದ ಅಂಗಗಳು ಇವಕ್ಕೆ ಪೂರಕ ಮತ್ತು ಅಂತೆಯೇ ಕಾರ್ಮಿಕ ರೈತ, ಕ್ಷೌರಿಕ, ದರ್ಜಿ, ಕಲ್ಲುಕುಟಿಗ ಇತ್ಯಾದಿ ವೃತ್ತಿಗಳ ಜನಕ್ಕೆ ದೈಹಿಕ ಶ್ರಮವು ಪ್ರಧಾನವಾಗಿ ದೇಹದ ಅನೇಕ ಅಂಗಗಳು ಹೆಚ್ಚು ಕ್ರಿಯಾಶೀಲವಾಗಿರಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ, ಶಿಕ್ಷಕ ವೃತ್ತಿ ಬೌದ್ಧಿಕ ಪರಿಶ್ರಮವನ್ನು ಪ್ರಧಾನವಾಗಿ ಬೇಡುತ್ತದೆ.

ಇಂತಹ ಶಿಕ್ಷಕ ವೃತ್ತಿ ಹೊಸ ತಲೆಮಾರಿಗೆ ಜ್ಞಾನವನ್ನು ಹಂಚುತ್ತದೆ. ಈ ಜ್ಞಾನವು ದಿಕ್ಕು ದಿಸೆಗಳನ್ನು ಸಹ ವಿವರಿಸುತ್ತದೆ. ಈ ನೆಲೆಯಲ್ಲಿ ಹೆಚ್ಚು ಯಶಸ್ಸು ಕಾಣುವವರು ಶಿಕ್ಷಕ ವೃತ್ತಿಯನ್ನು ಕೇವಲ ಒಂದು ಸಂಬಳದ ವೃತ್ತಿಯನ್ನಾಗಿ ತೆಗೆದುಕೊಂಡವರು ಅಲ್ಲ. ಬದಲಿಗೆ, ಅದನ್ನು ಆಸಕ್ತ ಮೂಲದ ವೃತ್ತಿಯನ್ನಾಗಿ ಮಾತ್ರ ತೆಗೆದುಕೊಂಡವರಾಗಿರುತ್ತಾರೆ. ಅಂಥವರ ಸಂಖ್ಯೆ ಹೆಚ್ಚಿದಷ್ಟೂ ಶಿಕ್ಷಣವು ಕೇವಲ ಪಠ್ಯ ಕೇಂದ್ರಿತವಾಗದೆ ಮತ್ತು ಪರೀಕ್ಷಾ ಮುಖಿಯಾಗದೆ ಅದರಾಚೆಗಿನ ಅನ್ವಯಿಕ ನೆಲೆಯನ್ನು ಪಡೆಯುತ್ತ ಸಾಗುತ್ತದೆ. ಇಂತಹ ಶಿಕ್ಷಕರು ಪ್ರತಿದಿನವೂ ಉತ್ತಮ ವಿದ್ಯಾರ್ಥಿಗಳಾಗಿರುತ್ತಾರೆ. ಇವರ ಓದು ಪಠ್ಯಗಳಾಚೆಗಿನ ಪುಸ್ತಕ ಮತ್ತು ಸಮಾಜದ ಓದಿನಲ್ಲಿ ಮುಖ್ಯವಾಗಿ ಕೇಂದ್ರೀಕೃತವಾಗಿರುತ್ತದೆ. ಇವರ ಈ ವೃತ್ತಿಪರತೆಗೆ ತಾಂತ್ರಿಕವಾಗಿ ಕೆಲಸದ ಅವಧಿ ಎಂಬುದು ಇರುವುದಿಲ್ಲ. ಇವರ ಈ ಕ್ರಿಯಾಶೀಲತೆ ವಿದ್ಯಾರ್ಥಿಗಳ ಎದುರಿಗೆ ಮತ್ತು ತಮ್ಮ ಖಾಸಗಿ ಸಂದರ್ಭಗಳಲ್ಲಿ ಸಹ ಪ್ರಕಟವಾಗುತ್ತಿರುತ್ತದೆ. ಇಂತಹ ಶಿಕ್ಷಕರ ಸಂಖ್ಯಾ ಪ್ರಮಾಣ ಹೆಚ್ಚು ಸವಾಲುಗಳು ಜೀವಂತವಾಗಿರುವ ಇವತ್ತಿನ ಸನ್ನಿವೇಶದಲ್ಲಿ ಹೆಚ್ಚು ಪ್ರಸ್ತುತವಾದುದು. ಇಂತಹ ವರ್ಗವು ಇರುವ ವ್ಯವಸ್ಥೆಯನ್ನು ಪಠ್ಯ ಕೇಂದ್ರಿತ ಮತ್ತು ಅದರ ಅನ್ವಯಿಕ ನೆಲೆಯಲ್ಲಿ ವೈಜ್ಞಾನಿಕವಾಗಿ ವಿವರಿಸುವುದಲ್ಲದೆ ಅದರ ಪರಿವರ್ತನೆಗೂ ವಿದ್ಯಾರ್ಥಿಗಳ ಸಮುದಾಯವನ್ನು ಬೌದ್ಧಿಕವಾಗಿ ಸಜ್ಜುಗೊಳಿಸುತ್ತದೆ. ಈ ನೆಲೆಯಲ್ಲಿ ಗಂಭೀರ ವಿದ್ಯಾರ್ಥಿಗಳು ಮಾತ್ರ ಹೆಚ್ಚು ರೂಪುಗೊಳ್ಳುತ್ತಾರೆ.

ಹೀಗೆ ಸಮಾಜದ ಒಂದೊಂದು ವರ್ಗವೂ ಒಂದೊಂದು ಬಗೆಯ ಉತ್ಪಾದನೆಯಲ್ಲಿ ತೊಡಗಿದ್ದರೆ ಶಿಕ್ಷಕ ವರ್ಗವು ಮುಖ್ಯವಾಗಿ ಈ ಎಲ್ಲ ವರ್ಗಗಳನ್ನು ಒಟ್ಟಾಗಿ ಹೊಂದಿರುವ ವ್ಯವಸ್ಥೆಯನ್ನು ಗುಣಾತ್ಮಕ ಪರಿವರ್ತಿಸುವ ಆಶಯವನ್ನು



ಡಾ|| ರಾಧಾಕೃಷ್ಣನ್ ಅವರು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ತತ್ವಶಾಸ್ತ್ರದ ಪ್ರಾಧ್ಯಾಪಕರಾಗಿದ್ದರು. ಕ್ರಮೇಣ ಇವರು ರಾಷ್ಟ್ರಪತಿ ಹುದ್ದೆಗೆ ಏರಿದರು. ಇವರು ರಾಷ್ಟ್ರಪತಿ ಹುದ್ದೆಗೆ ಏರದೇ ಇದ್ದಿದ್ದರೆ ಇವರು ಹುಟ್ಟಿದ ದಿನವನ್ನು ಶಿಕ್ಷಕರ ದಿನಾಚರಣೆಗೆ ಆರಿಸಿಕೊಳ್ಳುತ್ತಿರಲಿಲ್ಲ. ಇಂತಹ ಆಯ್ಕೆಯ ಒತ್ತಾಸೆ ಸ್ವತಃ ರಾಧಾಕೃಷ್ಣನ್ ಅವರಿಗೆ ಸಹ ಇರಲಿಲ್ಲ. ಆದರೂ ಸಾಂಕೇತಿಕವಾಗಿ ಅವರು ಹುಟ್ಟಿದ ದಿನವನ್ನೇ ಆ ದಿನಾಚರಣೆಗೆ ಆರಿಸಿಕೊಳ್ಳಲಾಗಿದೆ.

ಪ್ರಕಟಿಸುತ್ತದೆ. ಈ ನೆಲೆಯಲ್ಲಿ ಶಿಕ್ಷಕರಿಗೆ ಹೆಚ್ಚಿನ ಸಾಮಾಜಿಕ ಜವಾಬ್ದಾರಿಯಿದೆ. ಇದರ ನಿರ್ವಹಣೆಯಲ್ಲಿ ವಿಫಲವಾಗ ಬಾರದ ಎಚ್ಚರಿಕೆಯೂ ಇರಬೇಕಾಗಿದೆ. ಈ ದಿಸೆಯಲ್ಲಿ ಇರಬೇಕಾದ ಚಿಂತನೆ ಮತ್ತು ಕ್ರಿಯಾಶೀಲತೆಗಳನ್ನು ಸ್ಮರಿಸಿಕೊಳ್ಳುವ ದಿನಾಚರಣೆಯಾಗಿ ಶಿಕ್ಷಕರ ದಿನಾಚರಣೆ ಇದೆ ಎಂದು ಭಾವಿಸಬಹುದು. ಈ ದಿನದ ತಾಂತ್ರಿಕ ಆಯ್ಕೆಯಾಗಿ ಸೆಪ್ಟೆಂಬರ್ ೫ ಇದೆ. ಇದು ಡಾ॥ ಸರ್ವಪಲ್ಲಿ ರಾಧಾಕೃಷ್ಣನ್ ಅವರ ಜನ್ಮದಿನ.

ಡಾ॥ ರಾಧಾಕೃಷ್ಣನ್ ಅವರು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ತತ್ವಶಾಸ್ತ್ರದ ಪ್ರಾಧ್ಯಾಪಕರಾಗಿದ್ದರು. ಕ್ರಮೇಣ ಇವರು ರಾಷ್ಟ್ರಪತಿ ಹುದ್ದೆಗೆ ಏರಿದರು. ಇವರು ರಾಷ್ಟ್ರಪತಿ ಹುದ್ದೆಗೆ ಏರದೇ ಇದ್ದಿದ್ದರೆ ಇವರು ಹುಟ್ಟಿದ ದಿನವನ್ನು ಶಿಕ್ಷಕರ ದಿನಾಚರಣೆಗೆ ಆರಿಸಿಕೊಳ್ಳುತ್ತಿರಲಿಲ್ಲ. ಇಂತಹ ಆಯ್ಕೆಯ ಒತ್ತಾಸೆ ಸ್ವತಃ ರಾಧಾಕೃಷ್ಣನ್ ಅವರಿಗೆ ಸಹ ಇರಲಿಲ್ಲ. ಆದರೂ ಸಾಂಕೇತಿಕವಾಗಿ ಅವರು ಹುಟ್ಟಿದ ದಿನವನ್ನೇ ಆ ದಿನಾಚರಣೆಗೆ ಆರಿಸಿಕೊಳ್ಳಲಾಗಿದೆ. ಇಲ್ಲಿ ಸಾಂಕೇತಿಕ ಎಂಬ ಪದವನ್ನೂ ಬಳಸಲಾಗಿದೆ. ಈ ಹಿನ್ನೆಲೆಯಲ್ಲಿ ಈ ದಿನದಂದು ಮಾಡುವ ಆಚರಣೆಯಲ್ಲಿ ಸಹ ರಾಧಾಕೃಷ್ಣನ್ ಅವರ ಸ್ಮರಣೆ ಸಾಂಕೇತಿಕವಾಗಿ ಮಾತ್ರ ಬಂದು ಹೋಗಬೇಕು, ಉಳಿದಂತೆ ಅವರನ್ನು ಹೊರತುಪಡಿಸಿದ ನೆಲೆಯಲ್ಲಿ ಪ್ರಸ್ತುತ ಬರಹದಲ್ಲಿ ಪ್ರಸ್ತಾಪಿಸಿದ ಹಲವು ವಿಚಾರಗಳು ಹೆಚ್ಚು ಮನನಯೋಗ್ಯವಾಗಬಹುದು ಎನ್ನಿಸುತ್ತದೆ. ಈ ದಿಸೆಯಲ್ಲಿ ರಾಧಾಕೃಷ್ಣನ್ ಅವರ ಸಾಲಿನಲ್ಲಿ ಅವರಷ್ಟೇ ಅಥವಾ ಅವರಿಗಿಂತ ಮುಖ್ಯವಾಗಿ ಸಾವಿತ್ರಿಬಾಯಿ ಫುಲೆಯವರನ್ನು ನೆನಪಿಸಿಕೊಳ್ಳಬೇಕಾಗುತ್ತದೆ. ಕಾರಣ, ಸಾವಿತ್ರಿಬಾಯಿ ಫುಲೆಯವರು ರಾಧಾಕೃಷ್ಣನ್, ಅಂಬೇಡ್ಕರ್ ಮುಂತಾದವರು ಹುಟ್ಟುವ ಪೂರ್ವದ ದಶಕಗಳಲ್ಲಿ, ಅಂದರೆ ಹದಿನೆಂಟನೆಯ ಶತಮಾನದ ಮಧ್ಯಭಾಗದಲ್ಲಿ ತಾವು, ತಮ್ಮ ಪತಿ ಜ್ಯೋತಿಬಾ ಫುಲೆ ಅವರಿಂದ ಅಕ್ಷರ ಕಲಿತು ಅದನ್ನು ಶೋಷಿತ ಸಮುದಾಯಗಳಿಗೆ, ಅದರಲ್ಲೂ ಮಹಿಳಾ ಸಮುದಾಯಗಳಿಗೆ ಹಂಚುತ್ತಾರೆ. ಇಲ್ಲಿಯ ಇವರ ಅಕ್ಷರ ಕಲಿಕೆಯಾಗಲೀ ಅದರ ಬೋಧನೆಯಾಗಲೀ ಸ್ವಕೇಂದ್ರಿತ ಲೌಕಿಕ ವ್ಯಾಪಾರವಾಗಿಲ್ಲ. ಬದಲಿಗೆ, ಅದು ಸಮಾಜೋಕೇಂದ್ರಿತವಾಗಿದೆ. ಇದು ಅಂದಿಗೆ ಕ್ರಾಂತಿಕಾರಕವೂ ಆದ ಹೆಜ್ಜೆಯಾಗಿತ್ತು. ಇಂತಹ ಹೆಜ್ಜೆ ದಿಟ್ಟತನವುಳ್ಳದ್ದೂ ಆಗಿದೆ. ಕಾರಣ, ಇಂತಹ ಹೆಜ್ಜೆಯನ್ನು ಇವರು ಇರಿಸಿದಾಗ ತಮ್ಮ ಸುತ್ತಮುತ್ತಲಿನವರಿಂದ ಅನೇಕ ಅಪಮಾನಗಳನ್ನು ಅನುಭವಿಸಿದ್ದಿದೆ. ಇಷ್ಟಾದರೂ ಇಟ್ಟ ಹೆಜ್ಜೆಯನ್ನು ಹಿಂದೆಗೆಯದೆ ಮುಂದುವರಿಸಿದ್ದು ದಿಟ್ಟತನದ್ದೂ ಕ್ರಾಂತಿಕಾರಕವಾದದ್ದೂ ಆಗಿದೆ. ಶತಶತಮಾನಗಳ ತತ್ತ್ವ ಚರಿತ್ರೆಗೆ ಮೂಡಲ ಕೆಂಪಾಗಿ ಕಂಡ ಸಾವಿತ್ರಿಬಾಯಿ ಫುಲೆ ಹೆಚ್ಚು ಸ್ಮರಣಯೋಗ್ಯರಲ್ಲವೇ ? ಈ ದಿಸೆಯಲ್ಲಿ ಯಾರನ್ನೇ ಸ್ಮರಿಸಿದರೂ ವ್ಯವಸ್ಥೆಯತ್ತ ಮತ್ತು ಆ ವ್ಯವಸ್ಥೆಯಲ್ಲಿ ಇಂದಿಗೂ ಉಳಿದಿರುವ ಗೊಂದಲಗಳತ್ತ ನಮ್ಮ ಗಮನ ಹರಿಸಬೇಕು ಎನ್ನಿಸುತ್ತದೆ. ಈ ಗಮನ ಕೇವಲ ಚಿಂತನೆಯಾಗದೆ ಕ್ರಿಯಾಶೀಲತೆಯನ್ನು ಪ್ರಕಟಿಸುವತ್ತ ಸಹ ಸಾಗಬೇಕು. ಈ ನಿಟ್ಟಿನಲ್ಲಿ ಇವತ್ತಿನ ಅನೇಕ ಶೈಕ್ಷಣಿಕ ನೀತಿಗಳ ಅಸಮರ್ಪಕತೆಯನ್ನು ಬಯಲುಗೊಳಿಸಿ, ಅವುಗಳ ಸ್ಥಾನದಲ್ಲಿ ಸಮರ್ಪಕ ನೀತಿಗಳನ್ನು ಪ್ರತಿಪಾದಿಸುವುದು ಆಗಬೇಕು. ಈ ನೆಲೆಯಲ್ಲಿ ಇಂದು ಅಸ್ತಿತ್ವದಲ್ಲಿರುವ ಎರಡು ಭಾಷಾ ಮಾಧ್ಯಮಗಳು ಎಂಬ ನೀತಿ ತೊಲಗಬೇಕು. ಇಲ್ಲಿ ಒಂದು ಮಾತೃಭಾಷಾ ಮಾಧ್ಯಮ, ಇನ್ನೊಂದು ಆಂಗ್ಲ ಭಾಷಾ ಮಾಧ್ಯಮ. ಈ ಎರಡೂ ಭಾಷಾ ಮಾಧ್ಯಮಗಳಲ್ಲಿ ಒಂದು ಮಾಧ್ಯಮ ಮಾತ್ರ ಸಮರ್ಪಕವಾದ ಮಾಧ್ಯಮವಾಗಿರುತ್ತದೆ. ಜಾಗತಿಕ ಶಿಕ್ಷಣ ತಜ್ಞರ ಹೇಳಿಕೆಯಂತೆ ಅದು ಮಾತೃಭಾಷಾ ಮಾಧ್ಯಮ ಮಾತ್ರವಾಗಿದೆ. ಆದರೂ ಇದರ ಸಾಲಿನಲ್ಲಿ ಆಂಗ್ಲ ಭಾಷಾ ಮಾಧ್ಯಮವೂ ಜಾರಿಯಲ್ಲಿದೆಯೆಂದರೆ ನಮಗಾಗಲೀ ಸರ್ಕಾರಕ್ಕಾಗಲೀ ಶಿಕ್ಷಣ ಮಾಧ್ಯಮದ ವಿಚಾರದಲ್ಲಿ ಇನ್ನೂ ಖಚಿತತೆ ಪ್ರಾಪ್ತವಾಗಿಲ್ಲ ಎಂಬುದೇ ವಿದಿತವಾಗುತ್ತದೆ. ಅಂತೆಯೇ ಪ್ರಾಥಮಿಕ ಶಿಕ್ಷಣದಲ್ಲಿ ವಿದ್ಯಾರ್ಥಿಗಳು ಮತ್ತು ಶಿಕ್ಷಕರ ಅನುಪಾತ ಹೀಗಿದೆ : ಅದು ೪೦ : ೧. ಅಂದರೆ ನಲವತ್ತು ವಿದ್ಯಾರ್ಥಿಗಳಿಗೆ ಒಬ್ಬ ಶಿಕ್ಷಕ. ಈ ನಲವತ್ತು ವಿದ್ಯಾರ್ಥಿಗಳು ನಾಲ್ಕು ತರಗತಿಗಳಲ್ಲಿ ಹಂಚಿಹೋದಾಗಲೂ ಅಲ್ಲಿ ಇರಬೇಕಾದುದು ಒಬ್ಬ ಶಿಕ್ಷಕ ಮಾತ್ರ. ಕೇವಲ ಒಬ್ಬ ಶಿಕ್ಷಕ ಒಂದರಿಂದ ನಾಲ್ಕನೆಯ ತರಗತಿಯವರೆಗಿನ ಎಲ್ಲ ವಿದ್ಯಾರ್ಥಿಗಳಿಗೆ ಅವರವರ ಪಠ್ಯಗಳನ್ನು ಆಧರಿಸಿದ ನೆಲೆಯಲ್ಲಿ ಏಕಕಾಲಕ್ಕೆ ವಿಭಿನ್ನ ತರಗತಿಗಳನ್ನು ತೆಗೆದುಕೊಳ್ಳುವುದಾದರೂ ಹೇಗೆ ? ಇಂತಹ ಅಸಾಂಗತ್ಯವು ಇಂದು ಹೆಚ್ಚಾಗಿ ಸರ್ಕಾರಿ ಶಾಲೆಗಳಲ್ಲಿ ಇದೆ. ಆದ್ದರಿಂದ ಗುಣಮಟ್ಟದ ಶಿಕ್ಷಣ ಇಲ್ಲಿ ಸಾಧ್ಯವಾಗುವುದಿಲ್ಲ ಎಂದೇ ಪೋಷಕರು ಇಂತಹ ಶಾಲೆಗಳಿಂದ ಸಹಜವಾಗಿಯೇ ಕಾಲ್ತೆಗೆಯುತ್ತಾರೆ. ಆದ್ದರಿಂದ ಪ್ರಸ್ತುತ ಜಾರಿಯಲ್ಲಿರುವ ಈ ಅನುಪಾತವು ಬದಲಾವಣೆಗೊಂಡು ಅದರ ಜಾಗದಲ್ಲಿ ತರಗತಿಗೊಬ್ಬ ಶಿಕ್ಷಕ, ತರಗತಿಗೊಂದು ಕೊಠಡಿ, ಅಲ್ಲಿ ವಿದ್ಯಾರ್ಥಿಗಳ ಸಂಖ್ಯೆ ಕನಿಷ್ಠ ೫, ಗರಿಷ್ಠ ೪೦ ಇರಬೇಕು ಎಂಬುದಾಗಬೇಕು.

ಹೀಗೆ ಸಮಕಾಲೀನ ಶಿಕ್ಷಣ ಕ್ಷೇತ್ರದಲ್ಲಿನ ಗೊಂದಲಗಳ ನಿವಾರಣೆ, ಶಿಕ್ಷಣವನ್ನು ಹೆಚ್ಚು ಸಮಕಾಲೀನಗೊಳಿಸುವ ಬಗೆ, ಶಿಕ್ಷಕನನ್ನು ಶಿಕ್ಷಣೇತರ ಚಟುವಟಿಕೆಗಳಿಂದ ಮುಕ್ತಗೊಳಿಸಿ ಆತನನ್ನು ಅಧ್ಯಾಪನದಲ್ಲಿ ಇನ್ನಷ್ಟು ಆಸಕ್ತಿದಾಯಕವಾಗಿ ತೊಡಗಿಸುವ ಕ್ರಮದತ್ತ ನಮ್ಮ ಚಿಂತನೆಗಳು ಇಂದು ಹರಿಯಬೇಕಾಗಿದೆ. ಆಗ ನಮ್ಮ ಚಿಂತನೆಗಳು ಕೇವಲ 'ಭೂತ'ದಲ್ಲಿ ಅಲೆದಾಡದೆ, ವರ್ತಮಾನಕ್ಕೆ ಮಾತ್ರ ಸೀಮಿತವಾಗದೆ, ಭವಿಷ್ಯಮುಖಿಯಾಗಿ ಹರಿಯುವುದು ಸಾಧ್ಯವಾಗುತ್ತದೆ. ಇಂತಹ ಹರಿವು ಚಾರಿತ್ರಿಕವಾದ ಚಲನಶೀಲತೆಯನ್ನು ಪ್ರಕಟಿಸುತ್ತದೆ. ಅಂತಹ ಚಲನಶೀಲತೆಯು ಚಲನಶೀಲ ಚಿಂತನೆಗಳಿಂದ ಮಾತ್ರ ಹುಟ್ಟುವುದರಿಂದ ನಾವು ನದಿಗಳಾಗಿ ನೆಲವನ್ನಪ್ಪಿ ತಗ್ಗುಗಳತ್ತ ಹೆಚ್ಚು ಹರಿಯಬೇಕಿದೆ.

**ಡಾ॥ ಕಾ. ವೆಂ. ಶ್ರೀನಿವಾಸಮೂರ್ತಿ**
'ಅಕ್ಷರ', ನಂ. ೯೬೫, ೧ನೇ ಮುಖ್ಯರಸ್ತೆ
ಚಿನ್ನಣ್ಣ ಬಡಾವಣೆ, ಕಾವಲ್ ಬೈರಸಂದ್ರ,
ಬೆಂಗಳೂರು – ೫೬೦ ೦೩೨

## ಬೇಕಾಗಿದೆ

ಹೊಲಿದುಕೊಂಡಿದ್ದೇನೆ
ತುಟಿಗಳನ್ನು-
ಮುಚ್ಚಿಕೊಂಡಿದ್ದೇನೆ
ಗಟ್ಟಿಯಾಗಿ ಕಂಗಳನ್ನು-
ಇನ್ನೆರಡು ಕೈಗಳು
ಬೇಕಾಗಿದೆ-
ನನ್ನೆರಡು ಕಿವಿಗಳವಚಿಕೊಳ್ಳಲು...

**ವ. ಉಮೇಶ್ ಕಾರಂತ**
ಮಂಗಳೂರು



# ಜೀವನ ಪರೀಕ್ಷೆ
## (ಸತ್ಯಕ್ಕೆ ಒಂಚೂರು ಬಣ್ಣ)

**ಆರ್. ಬಿ. ಗುರುಬಸವರಾಜ**

ಅಂದು ಬೈಕ್‌ನಲ್ಲಿ ಶಾಲೆಗೆ ಹೊರಟೆ. ೭ನೇ ತರಗತಿ ಓದುತ್ತಿರುವ ಸುಮಿತ್ರ ಕೈಯಲ್ಲಿ ಬುತ್ತಿ ಹಿಡಿದು ಎದುರಿಗೆ ಬಂದಳು. ನನ್ನನ್ನು ನೋಡಿದ್ದೇ ತಡ ರಸ್ತೆ ಬಿಟ್ಟು ಹೊಲಗಳಲ್ಲಿ ಓಡತೊಡಗಿದಳು. ಬೈಕನ್ನು ರಸ್ತೆಯ ಪಕ್ಕಕ್ಕೆ ನಿಲ್ಲಿಸಿ ಅವಳ ಹಿಂದೆ ನಾನೂ ಓಡುವ ಪ್ರಯತ್ನ ಮಾಡಿದೆ. ಆದರೆ ಅವಳನ್ನು ಹಿಡಿಯುವುದು ಸಾಧ್ಯವಿರಲಿಲ್ಲ. ರಸ್ತೆಯಲ್ಲಿ ಸಂಚರಿಸುವವರೆಲ್ಲ ಇದೊಂದು ತಮಾಷೆ ಎಂಬಂತೆ ನೋಡುತ್ತಿದ್ದರು. ಒಂದು ಕ್ಷಣ ನನಗೆ ನಾಚಿಕೆ ಎನಿಸಿತು.

"ಯಾಕ್ರೀ ಮೇಷ್ಟ್ರೇ, ಅವಳ ಹಿಂದೆ ಓಡ್ತೀರಾ ?" ಎಂದು ಯಾರೋ ಪ್ರಶ್ನಿಸಿದರು. ಏನು ಹೇಳಬೇಕೋ ತೋಚಲಿಲ್ಲ.

ಕೊನೆಗೂ ಧೈರ್ಯ ಮಾಡಿ, "ನೋಡ್ರೀ, ಇವಳು ಕಳೆದ ಎರಡು ತಿಂಗಳಿಂದ ಸರಿಯಾಗಿ ಶಾಲೆಗೆ ಹಾಜರಾಗುತ್ತಿಲ್ಲ. ಒಂದು ದಿನ ಬಂದರೆ ಒಂದು ವಾರ ಶಾಲೆಗೆ ಬರೋದಿಲ್ಲ. ಕಾರಣ ಕೇಳಿದರೆ ಏನೋ ಒಂದು ನೆಪ ಹೇಳಿ ನುಣುಚಿಕೊಳ್ತಾಳೆ" ಎಂದೆ.

"ಅದ್ಯಾಕೆ ಅವ್ಳ ಹಿಂದೆ ಓಡ್ಬೇಕು. ಅವ್ಳ ಅಪ್ಪನಿಗೆ ಹೇಳಿದ್ರೆ ಕಳಿಸ್ತಾನೆ. ಇಲ್ಲಾಂದ್ರೆ ನಾವೇ ಹೇಳಿ ಕಳ್ಸೋ ವ್ಯವಸ್ಥೆ ಮಾಡ್ತೀವಿ, ನೀವೀಗ ಹೊಂಡ್ರಿ" ಎಂದರು ಅಲ್ಲಿದ್ದವರಲ್ಲಿ ಒಬ್ಬರು.

"ಅವ್ಳ ಅಪ್ಪಂಗೆ ಹೇಳಿ ಹೇಳಿ ಸಾಕಾಯ್ತು ಬಿಡ್ರಿ. ಈಗ ನೀವ ಏನಾರ ಹೇಳಿ ಅವಳನ್ನು ಕಳಿಸಬೇಕು ನೋಡ್ರೀ. ನಿಮಗೆ ಪುಣ್ಯ ಬರುತ್ತೆ. ಹೆಣ್ಣು ಮಗು. ಓದಿ ನಾಲ್ಕಕ್ಷರ ಕಲಿತರೆ ಮುಂದೆ ಒಳ್ಳೇದಾಗುತ್ತೆ" ಎಂದು ಉಪದೇಶ ನೀಡಿ ಬೈಕನ್ನೇರಿ ಶಾಲೆಗೆ ಹೊರಟೆ.

ಅಲ್ಲಿದ್ದವರೆಲ್ಲಾ ಹೇಳಿದ್ದರಿಂದಲೋ ಏನೋ ಮರುದಿನ ಅಂಜುತ್ತಾ, ಅಳುಕುತ್ತಾ ಶಾಲೆಗೆ ಬಂದ ಸುಮಿತ್ರಳನ್ನು ಪ್ರೀತಿಯಿಂದ ಸ್ವಾಗತಿಸಿದೆ. ಆದರೂ ಅವಳ ಮನದ ಮೂಲೆಯಲ್ಲಿ ಭಯ, ಆತಂಕಗಳು ಮನೆ ಮಾಡಿದ್ದನ್ನು ಗಮನಿಸಿದೆ. ತರಗತಿಯಲ್ಲಿ ಹಾಜರಿ ಹೇಳಿದ ನಂತರ ಹಾಗೆಯೇ ನಿಂತುಕೊಂಡಳು. ಶಾಲೆ ಬಿಟ್ಟಿದ್ದಕ್ಕೆ ಕಾರಣ ಕೇಳಿ ಎಲ್ಲಾ ಮಕ್ಕಳೆದುರು ಅವಮಾನ ಮಾಡುತ್ತಾರೆ ಎಂಬ ಭಯ ಆವರಿಸಿತ್ತು. ಆ ಬಗ್ಗೆ ಏನೂ ಕೇಳದೆ ಕುಳಿತುಕೊಳ್ಳಲು ಹೇಳಿದಾಗ ಅವಳಿಗೆ ಕೊಂಚ ಧೈರ್ಯ ಬಂದಿತ್ತು. ತರಗತಿ ಮುಗಿಸಿದ ನಂತರ ಸುಮಿತ್ರಳಿಗೆ, ವಿರಾಮ ವೇಳೆಯಲ್ಲಿ ಸಿಬ್ಬಂದಿ ಕೊಠಡಿಗೆ ಬರಲು ಹೇಳಿ ವಾಪಾಸಾದೆ.

ಅಲ್ಪವಿರಾಮದ ಘಂಟೆ ಬಾರಿಸಿತು. ಸುಮಿತ್ರಳ ಬರುವನ್ನು ನಿರೀಕ್ಷಿಸಿದ್ದೆ. ಆದರೆ ನನ್ನ ನಿರೀಕ್ಷೆ ಹುಸಿಯಾಯಿತು. ಅವಳು ಬರಲಿಲ್ಲ. ನನ್ನಲ್ಲಿ ಚಡಪಡಿಕೆ ಶುರುವಾಯಿತು. ಇದನ್ನು ಗಮನಿಸಿದ ಮುಖ್ಯಗುರುಗಳು ನನ್ನ ಚಡಪಡಿಕೆಗೆ ಕಾರಣ ಕೇಳಿದರು. ವಿಷಯವನ್ನು ವಿವರಿಸಿದೆ. ಅವರೂ ಕೂಡ ಅವಳನ್ನು ವಿಚಾರಿಸುವ ಬಗ್ಗೆ ಮನಸ್ಸು ಮಾಡಿದರು ಮತ್ತು ಬೇರೆ ವಿದ್ಯಾರ್ಥಿಗಳಿಂದ ಅವಳನ್ನು ಬರಹೇಳಿದರು.

ಮುಖ್ಯಗುರುಗಳ ಕರೆ ಎಂದೊಡನೆ ಅಂಜುತ್ತಾ ಮೆಲ್ಲನೆ ಬಾಗಿಲ ಬಳಿ ಬಂದು, "ಮೇ ಐ ಕಮಿನ್ ಸರ್ ?" ಎಂದಳು. 'ಎಸ್' ಎಂದೆ. ಒಳಗೆ ಬಂದಳು. ಮುಖದಲ್ಲಿ ಭಯ, ಆತಂಕ, ತಪ್ಪಿತಸ್ಥ ಭಾವನೆಗಳು ತುಂಬಿ ಕೊಂಡಿದ್ದವು.

"ಯಾಕೆ ನೀನು ಸರಿಯಾಗಿ ಶಾಲೆಗೆ ಬರುತ್ತಿಲ್ಲ ?" ಎಂಬ ಮುಖ್ಯಗುರುಗಳ ಪ್ರಶ್ನೆಯಿಂದ ಬೆಚ್ಚಿದಳು. ಉತ್ತರಿಸಲು ತತ್ತರಿಸುತ್ತಿದ್ದಳು. ಅವಳಿಗೆ ಧೈರ್ಯ ನೀಡಲೇಬೇಕೆಂದು ನಿರ್ಧರಿಸಿ, "ಅಲ್ಲಮ್ಮಾ ಕಲಿಯಲು



**ಅವಳ ಮಾತುಗಳಲ್ಲಿ ದಿಟ್ಟತನವಿತ್ತು. ಕಂಗಳಲ್ಲಿ ಅವಮಾನದ ಪ್ರತೀಕಾರ ಇತ್ತು. ಸಾಧಿಸುವ ಛಲವಿತ್ತು. ಚಿಕ್ಕ ವಯಸ್ಸಿನಲ್ಲಿ ಅವಳು ಅನುಭವಿಸಿದ ಅವಮಾನ, ಯಾತನೆ, ಹೋರಾಟ, ತಮ್ಮ ತಂಗಿಯರ ಭವಿಷ್ಯದ ಕಾಳಜಿ, ಇವುಗಳ ಮುಂದೆ ನಾವು ಕುಬ್ಜರಾದೆವು. ಆದರೂ ಅವಳ ಭವಿಷ್ಯವನ್ನು ಉತ್ತಮಗೊಳಿಸುವ ಜವಾಬ್ದಾರಿ ನಮ್ಮ ಮೇಲಿತ್ತು.**

## ಅಭಿನಂದನೆಗಳು

ಅನಕೃ ಪ್ರತಿಷ್ಠಾನ ಮತ್ತು ವಿ.ಎಲ್.ಎನ್. ನಿರ್ಮಾಣ್ ಫೌಂಡೇಶನ್ ಅವರು ಕೊಡುವ 'ಅನಕೃ-ನಿರ್ಮಾಣ್ ಸ್ವರ್ಣ ಪ್ರಶಸ್ತಿ'ಯು ಸಾಹಿತಿಗಳಾದ ಡಾ॥ ಬರಗೂರು ರಾಮಚಂದ್ರಪ್ಪ, ಡಾ॥ ಎಚ್. ಎಸ್. ವೆಂಕಟೇಶ ಮೂರ್ತಿ, ಡಾ॥ ನರಹಳ್ಳಿ ಬಾಲಸುಬ್ರಹ್ಮಣ್ಯ ಅವರಿಗೆ ದೊರೆತಿದೆ. ಇವರೆಲ್ಲರಿಗೂ 'ಹೊಸತು' ಹಾಗೂ 'ನವಕರ್ನಾಟಕ ಪ್ರಕಾಶನ' ಬಳಗದಿಂದ ಹಾರ್ದಿಕ ಅಭಿನಂದನೆಗಳು.

ನಿನಗೆ ಏನಾದರೂ ತೊಂದರೆ ಇದೆಯಾ ? ಅಥವಾ ಪಾಠ ಅರ್ಥವಾಗುತ್ತಿಲ್ಲವೋ ? ಏನು ಸಮಾಚಾರ ?" ಎಂದು ಪ್ರಶ್ನಿಸಿದೆ. ಅದ್ಯಾವುದೂ ಇಲ್ಲ ಎಂಬಂತೆ ತಲೆ ಅಲ್ಲಾಡಿಸಿದಳು.

"ಮನೆಯಲ್ಲಿ ಏನಾದರೂ ತೊಂದರೆ ಇದೆಯಾ ?" ಎಂದು ಪ್ರಶ್ನಿಸಿದ್ದೇ ತಡ ಅವಳ ಕಣ್ಣೀರಿನ ಕಟ್ಟೆ ಒಡೆದೇ ಹೋಯಿತು. ಗೊಳೋ ಎಂದು ಅಳಲು ಶುರುಮಾಡಿದಳು.

"ಏನಾಯ್ತು, ಯಾಕೆ ಅಳ್ತೀಯಮ್ಮಾ ?" ಎಂದು ಮುಖ್ಯಗುರುಗಳು ಕೇಳಿದಷ್ಟೂ ಅವಳ ಅಳು ಹೆಚ್ಚಾಯಿತೇ ಹೊರತು ಕಾರಣ ಏನೆಂದು ಹೇಳಲಿಲ್ಲ. ಅಷ್ಟೊತ್ತಿಗೆ ಮಹಿಳಾ ಶಿಕ್ಷಕಿಯರೂ ಬಂದರು. ಅವರಿಗೂ ಏನೊಂದೂ ಅರ್ಥವಾಗದೆ ಒಂದು ಬಗೆಯ ಆಶ್ಚರ್ಯ. ಅತ್ತೂ ಅತ್ತೂ ಮನದೊಳಗಿನ ಭಾರ ಕಡಿಮೆಯಾದಂತಾಯ್ತು. ಅಳು ನಿಧಾನವಾಗಿ ಮಾತಿನ ಸ್ವರೂಪ ಪಡೆದುಕೊಂಡಿತು. ಅವಳ ಅಂತರಂಗದ ಕಥೆ ಬಿಚ್ಚಿಕೊಂಡಿತು.

"ಸಾರ್, ನಿಮಗೆಲ್ಲಾ ತಿಳಿದ್ಹಾಂಗೆ ನಮ್ಮಪ್ಪ ನಮ್ಮವ್ವಂಗೆ ನಾವು ನಾಲ್ಕು ಜನ ಮಕ್ಳು. ಅದ್ರಾಗ ನಾನ ದೊಡ್ಡವಳು. ನಮ್ಮಪ್ಪ ಮೂಗ. ನಮ್ಮವ್ವನೇ ನಮಗೆಲ್ಲಾ ದಿಕ್ಕು ದೆಸೆ ಆಗಿದ್ದಳು. ಆದರೆ ಮೂರು ವರ್ಷಗಳ ಹಿಂದೆ ಆದ ಟ್ರ್ಯಾಕ್ಟರ್ ಆಕ್ಸಿಡೆಂಟ್‌ನಲ್ಲಿ ನಮ್ಮವ್ವ ಸತ್ತುಹೋದಳು. ನಮಗೆಲ್ಲಾ ಆಸರೆಯಾಗಿದ್ದ ನಮ್ಮವ್ವ ಸತ್ತುಹೋದಾಗಿಂದ ನಮ್ಮಪ್ಪನೂ ಸರ್‍ಯಾಗಿ ದುಡೀತಿಲ್ಲ. ನನ್ನ ಇಬ್ಬರು ತಂಗಿ, ಒಬ್ಬ ತಮ್ಮನನ್ನು ಸಾಕೋರು ಯಾರೂ ಇಲ್ಲ ಸಾರ್. ಅದ್ಕಾಗಿ ನಾನೇ ಕೂಲಿ ಮಾಡ್ತಾ ಇದ್ದೀನಿ. ನನ್ನ ಹಣೆಯಲ್ಲಿ ಓದೋದು ಬರ್ದಿಲ್ಲ ಅಂತ ಕಾಣ್ತದ. ಕೊನೆಗೆ ನನ್ನ ತಮ್ಮ ತಂಗಿಯಂದಿರಾದ್ರೂ ಓದ್ಲಿ ಅಂತ ಅವ್ರನ್ನ ಸಾಲಿಗೆ ಕಳಿಸ್ತೀನಿ. ನಿನ್ನೆ ನೀವು ನನ್ನನ್ನ ಹಿಂಬಾಲಿಸ ಹತ್ತಿದ್ದ ನೋಡಿ ನನಗೂ ವಿಷಯ ತಿಳಿಸಲೇಬೇಕು ಅಂತ ಅನ್ನಿಸ್ತು. ಅದ್ಕ ಇವತ್ತು ಸಾಲಿಗೆ ಬಂದೀನಿ. ನಾಳೆ ಮತ್ತೆ ನಾನು ಕೂಲಿ ಕೆಲ್ಸಕ್ಕೆ ಹೋಗಲೇಬೇಕು. ಇಲ್ಲಾಂದ್ರ ನಮ್ಮ ಜೀವ್ನ ನಡೆಯೋದಿಲ್ಲ" ಎಂದು ತನ್ನ ಗಟ್ಟಿ ನಿರ್ಧಾರವನ್ನು ಹೇಳಿಯೇ ಬಿಟ್ಟಳು.

ತಾಯಿ ಸತ್ತ ಸುದ್ದಿಯನ್ನಷ್ಟೇ ತಿಳಿದಿದ್ದ ನಮಗೆ ತಂದೆ ಸರಿಯಾಗಿ ದುಡಿಯುತ್ತಿಲ್ಲ, ಮಕ್ಕಳನ್ನು ಕಾಪಾಡುತ್ತಿಲ್ಲ ಎಂಬ ವಿಷಯ ನಮ್ಮನ್ನು ವಿಚಲಿತರನ್ನಾಗಿಸಿತು.

"ಅಲ್ಲಮ್ಮ, ನಿಮ್ಮವ್ವ ಸತ್ತು ಮೂರು ವರ್ಷಾತು. ಆಗಿನಿಂದಲೂ ಸರಿಯಾಗಿ ಶಾಲೆಗೆ ಬರುತ್ತಿದ್ದಾಕಿ ಈಗೇಕೆ ಸರಿಯಾಗಿ ಬರುತ್ತಿಲ್ಲ ?" ಎಂದರು ಶಿಕ್ಷಕರೊಬ್ಬರು.

"ಹೌದು ಸಾರ್, ಆಗ ನಾನು ಧಣ್ಯಾರ ಮನ್ಯಾಗ ಕೆಲಸಕ್ಕೆ ಹೋಗಿದ್ದೆ. ದಿನಾಲೂ ಬೆಳಿಗ್ಗೆ ಮತ್ತು ಸಂಜೆ ಅವರ ಮನೆ ಕೆಲಸ ಮಾಡ್ತಿದ್ದೆ. ಸಾಲಿ ಟೈಮ್ನಾಗ ಮಾತ್ರ ಸಾಲಿಗೆ ಬರ್ತಿದ್ದೆ. ಅವ್ರು ಕೊಡೋ ಕೂಲಿಯಿಂದ ಹೆಂಗೋ ಜೀವನ ನಡೀತಿತ್ತು. ಆದ್ರ... ಅವತ್ತೊಂದಿನ ಧಣ್ಯಾರ ಮನ್ಯಾಗ ಅವ್ರ ಪರ್ಸ ಕಳುವಾತು. ಅವ್ರೆಲ್ರಿಗೂ ನನ್ನ ಮ್ಯಾಲೆ ಅನುಮಾನ ಬಂತು. ಎಲ್ರೂ ನನ್ನನ್ನ ವಿಚಾರಿಸಿದ್ರು. ನೀನೇ ಕಳ್ಳಿ ಅಂದ್ರು. ನನ್ನ ಹೊಡೆಯೋಕೂ ಪ್ರಯತ್ನ ಮಾಡಿದ್ರು. ಅಲ್ಲಿಂದ ನಾನು ತಪ್ಪಿಸಿಕೊಂಡು ಮನೆ ಸೇರಿದೆ. ಆಮ್ಯಾಲೆ ನಮ್ಮಪ್ಪನ್ನ ಕರೆಸಿ ವಿಚಾರಿಸಿದ್ರು ಅಂತ ಗೊತ್ತಾತು. ಆತ ಮೊದ್ಲೇ ಮೂಗ, ಅದೇನೋ ಹೇಳಿದ್ನೋ ಏನೋ ? ನಾನು ಮತ್ತೆ ಅವ್ರ ಮನೆ ಕಡೆ ಸುಳೀಲಿಲ್ಲ. ನನಗೆ ಹಣದ ಅವಶ್ಯಕತೆ ಇತ್ತು ನಿಜ. ಆದರೆ ಕಳ್ಳತನ ಮಾಡಿ ಹಣ ಸಂಪಾದ್ನೋ ಕೆಟ್ಟ ಬುದ್ಧಿ ಇರ್ಲಿಲ್ಲ. ಮತ್ತೆ ನಾನು ಕೂಲಿ ಹುಡುಕಿ ಹೊರಟೆ. ಮೊದಮೊದ್ಲು ಸಣ್ಣವಳು ಅಂತ ಯಾರೂ ನನ್ನ ಕೆಲಸಕ್ಕೆ ಸೇರಿಸ್ಕೊಳ್ಳಿಲ್ಲ. ಯಾರೋ ಒಬ್ಬ ಪುಣ್ಯಾತ್ಮ ನನ್ನ ಪರಿಸ್ಥಿತಿ ತಿಳಿದು ಕೆಲಸಕ್ಕೆ ಸೇರಿಸಿಕೊಂಡ್ರು. ಈಗ ಕೂಲೀನೇ ನನ್ಗೆ ಗತಿ" ಎಂದು ತನ್ನ ಬದುಕಿನ ಹೋರಾಟವನ್ನು ನಮ್ಮ ಮುಂದೆ ಇಟ್ಟಳು.

"ನೀನು ನಿಜವಾಗ್ಲೂ ಪರ್ಸ ಕದ್ದಿದ್ಯಾ ? ಎಂದು ಶಿಕ್ಷಕಿಯೊಬ್ಬರು ಪ್ರಶ್ನಿಸಿದರು.

"ಇಲ್ಲ ಮೇಡಂ, ಅದನ್ನ ಬೇರೆ ಇನ್ನೊಬ್ರು ಕದ್ದಿದ್ರಂತೆ. ಒಂದು ವಾರದ ನಂತರ ವಿಷಯ ಗೊತ್ತಾತಂತೆ. ಆಮೇಲೆ ಅವ್ರು ನಮ್ಮನಿಗೆ ಬಂದು, "ಪರ್ಸ ಕದ್ದಿದ್ದು ನೀನಲ್ಲ. ಬೇರೆಯವ್ರು ಅಂತ ಗೊತ್ತಾತು. ಸುಮ್ನೆ ನಿನ್ನ ಮ್ಯಾಲೆ ಅನುಮಾನ ಪಟ್ವಿ, ನಿನ್ಗೆ ತೊಂದ್ರೆ ಕೊಟ್ವಿ. ನೀನು ತುಂಬ ಒಳ್ಳೇ ಹುಡುಗಿ. ಪುನಃ ನಮ್ಮನಿ ಕೆಲಸಕ್ಕೆ ಬಾ" ಅಂತ ಕರೆಯೋಕೆ ಬಂದ್ರು. ನನಗೂ ರೋಷ, ಕಿಚ್ಚು, ಸ್ವಾಭಿಮಾನ ಅನ್ನೋದು ಇತ್ತು. ಅದ್ಕಾಗಿ ನಾನು ಖಂಡಿತವಾಗಿ ಬರೋದಿಲ್ಲ ಅಂತ ಹೇಳಿ ಕಳ್ಸಿದೆ. ನಾನು ಮಾಡಿದ್ದು ತಪ್ಪಾ! ಹೇಳ್ರೀ ಮೇಡಂ ? ಎಂದಳು.

ಅವಳ ಮಾತುಗಳಲ್ಲಿ ದಿಟ್ಟತನವಿತ್ತು. ಕಂಗಳಲ್ಲಿ ಅವಮಾನದ ಪ್ರತೀಕಾರ ಇತ್ತು. ಸಾಧಿಸುವ ಛಲವಿತ್ತು. ಚಿಕ್ಕ ವಯಸ್ಸಿನಲ್ಲಿ ಅವಳು ಅನುಭವಿಸಿದ ಅವಮಾನ, ಯಾತನೆ, ಹೋರಾಟ, ತಮ್ಮ ತಂಗಿಯರ ಭವಿಷ್ಯದ ಕಾಳಜಿ, ಇವುಗಳ ಮುಂದೆ ನಾವು ಕುಬ್ಜರಾದೆವು. ಆದರೂ ಅವಳ ಭವಿಷ್ಯವನ್ನು




ಉತ್ತಮಗೊಳಿಸುವ ಜವಾಬ್ದಾರಿ ನಮ್ಮ ಮೇಲಿತ್ತು. ಅದಕ್ಕಾಗಿ "ಏನಾದರೂ ಆಗಲಿ, ಈಗ ಪರೀಕ್ಷೆಗಳು ಸಮೀಪಿಸುತ್ತಿವೆ. ಕೊನೆಗೆ ಪರೀಕ್ಷೆಗಾದ್ರೂ ಹಾಜರಾಗು" ಎಂದರು ತರಗತಿ ಶಿಕ್ಷಕರು.

"ಸಾರ್, ಪರೀಕ್ಷೆ ಬರೆಯೋಕೆ ನನ್ನ ತಲೇಲಿ ಈಗ ಏನೂ ಉಳಿದಿಲ್ಲ. ಏನಂತ ಬರೀಲಿ" ಎಂದಳು.

"ನೀನು ಏನೂ ಬರೀದಿದ್ರೂ ಚಿಂತೆಯಿಲ್ಲ. ಪರೀಕ್ಷೆಗೆ ಹಾಜರಾದ್ರೆ ಸಾಕು. ನಿನ್ನ ಪಾಸ್ ಮಾಡೋ ಜವಾಬ್ದಾರಿ ನಮ್ದು" ಎಂದರು ಮುಖ್ಯಗುರುಗಳು. ಏಕೆಂದರೆ ಅವಳು ಹೆಣ್ಣು ಮಗುವಾಗಿದ್ದು ಶಿಕ್ಷಣದಿಂದ ವಂಚಿತಳಾಗಬಾರದು ಎಂಬುದು ಅವಳ ಕಾಳಜಿಯಾಗಿತ್ತು.

"ಇಲ್ಲ ಸಾರ್, ನಾನು ಈ ಪರೀಕ್ಷೆ ಪಾಸು ಮಾಡಿ ಏನು ಮಾಡ್ಬೇಕು ? ಸದ್ಯ ನನ್ಗೆ ಜೀವನವೇ ಒಂದು ದೊಡ್ಡ ಪರೀಕ್ಷೆ. ಅದ್ರಲ್ಲಿ ನಾನು ಪಾಸಾಗಲೇ ಬೇಕು. ನನ್ನ ತಮ್ಮ ತಂಗಿಯರ ಭವಿಷ್ಯವನ್ನು ಉತ್ತಮಪಡಿಸಲೇಬೇಕು. ಇದಕ್ಕೆ ನಿಮ್ಮ ಸಹಕಾರ ನನ್ಗೆ ಬೇಕು. ದಯವಿಟ್ಟು ಈಗ ನನ್ಗೆ ಹೋಗಲು ಅಪ್ಪಣೆ ಕೊಡಿ" ಎಂದು ತನ್ನ ನಿರ್ಧಾರವನ್ನು ತಿಳಿಸಿದಳು.

ಸದ್ಯ ಅವಳಿಗೆ ಔಪಚಾರಿಕ ಶಿಕ್ಷಣ ಬೇಕಿರಲಿಲ್ಲ. ಅಗಾಧ ಬದುಕಿನ ಅನೌಪಚಾರಿಕ ಶಿಕ್ಷಣದ ಅವಶ್ಯಕತೆ ಇತ್ತು. ಎಲ್ಲಕ್ಕಿಂತ ಹೆಚ್ಚಾಗಿ ತನ್ನ ತಂಗಿಯರ ಭವಿಷ್ಯದ ಕನಸನ್ನು ಸಾಕಾರಗೊಳಿಸ ಬೇಕಾಗಿತ್ತು. ಅವಳ ನಿರ್ಧಾರ ಬದಲಿಸಲು ಶಿಕ್ಷಕ ರಿಂದಾಗಲೀ ವ್ಯವಸ್ಥೆಯಿಂದಾಗಲೀ ಸಾಧ್ಯವಿರಲಿಲ್ಲ. ಏಕೆಂದರೆ ಅವಳ ನಿರ್ಧಾರ ಅಚಲವಾಗಿತ್ತು.

**ಆರ್. ಬಿ. ಗುರುಬಸವರಾಜ**
ಶಿಕ್ಷಕರು, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಬನ್ನಿಕಲ್ಲು
ಹಗರಿಬೊಮ್ಮನಹಳ್ಳಿ ತಾಲೂಕು, ಬಳ್ಳಾರಿ ಜಿಲ್ಲೆ




# ತೇಜಸ್ವಿ ಎಂಬ ವಿಸ್ಮಯ ಪ್ರಪಂಚ

ತನ್ನ ಸುತ್ತಲಿನ ಅಚ್ಚರಿಯನ್ನು ಬೇಟೆಯಾಡುತ್ತಾ ತನ್ನ ಲೇಖನಿಯಲ್ಲಿ ಪ್ರಕೃತಿ ಹಾಗೂ ಸುತ್ತಲಿನ ಜೀವನವನ್ನು ಸೆರೆಹಿಡಿದರು. ಇದೇ ಬೇಟೆಯ ಆಶಯವನ್ನು ಬದುಕಿನ ಹುಡುಕಾಟವಾಗಿಸಿಕೊಂಡು ಹಲವು ನೆಲೆಗಳಿಗೆ ಕೊಂಡೊಯ್ದರು. ಮೊದಮೊದಲು ಹಂದಿಗಳನ್ನು ಸೆರೆಹಿಡಿಯುತ್ತಿದ್ದವರು ಮುಂದೆ ತಮ್ಮ ಕ್ಯಾಮರಾದಲ್ಲಿ ಅತ್ಯಂತ ಚಂಚಲವಾದ ವಿವಿಧ ಬಗೆಯ ಕಾಡುಹಕ್ಕಿಗಳನ್ನು ಮನಸ್ಸನ್ನು ಸೆರೆಹಿಡಿಯುವ ಅವುಗಳ ಬಗೆಬಗೆಯ ಬಣ್ಣಗಳಿಗಾಗಿಯೇ ಸೆರೆಹಿಡಿದರು; ಈ ಬಗೆಗಳು ಹಕ್ಕಿಗಳಂತೆಯೇ ಮನುಷ್ಯ ಲೋಕದವೂ ಆದವು. ತನ್ನ ಸುತ್ತಲಿನ ಇಂತಹ ಹಲವು ಬಣ್ಣಗಳ ಕುತೂಹಲದ ಕಡೆಗೆ ನಿರಂತರ ಸಂಚಾರಿಯಾಗಿದ್ದವರು ತೇಜಸ್ವಿ.



**ಡಾ|| ಎಚ್. ಶಶಿಕಲಾ**

ಹೌದು ! ಕನ್ನಡ ಸಾಹಿತ್ಯಲೋಕಕ್ಕೆ 'ಪೂರ್ಣಚಂದ್ರ ತೇಜಸ್ವಿ' ಎಂಬ ಹೆಸರೇ ಒಂದು ವಿಸ್ಮಯ. ವಿಮರ್ಶಕರೊಬ್ಬರು ಗುರುತಿಸಿದಂತೆ ಕುವೆಂಪು ಕನ್ನಡಕ್ಕೆ ನೀಡಿದ ಮಹತ್ವ ಕಾಣಿಕೆಗಳು ಎರಡು. ಇದರಲ್ಲಿ ಮೊದಲನೆಯದು, ಮಲೆಗಳಲ್ಲಿ ಮದುಮಗಳು ಎಂಬ ಕಾದಂಬರಿ. ಎರಡನೆಯದು, ಪೂರ್ಣಚಂದ್ರ ತೇಜಸ್ವಿ . ಸದಾಕಾಲವೂ ಹರಿಯುವ ನದಿಯಾಗಿ, ಹೊಚ್ಚಹೊಸದಾದ್ದನ್ನೇ ಹುಡುಕುವ ಹವಣಿಕೆಯಲ್ಲಿ ಇರುತ್ತಿದ್ದ ತೇಜಸ್ವಿ , ಕನ್ನಡ ಭಾಷೆ, ಸಾಹಿತ್ಯಕ್ಕಾಗಿ ಹೊಸತನ್ನು ನೀಡಲು ತಮ್ಮ ವ್ಯಕ್ತಿತ್ವವನ್ನೇ ಧಾರೆ ಎರೆದವರು. ಕನ್ನಡ ಉಳಿಯಲು, ಅದು ಮತ್ತಷ್ಟು ದೃಢವಾಗಲು ಕಂಪ್ಯೂಟರ್ ತಂತ್ರಜ್ಞಾನದಲ್ಲಿ ಕನ್ನಡ ಬಳಕೆಯ ಸ್ವರೂಪ ಏನಾಗಬೇಕು ಎಂಬುದರ ಬಗ್ಗೆ ನಿರಂತರವಾಗಿ ಚಿಂತಿಸಿದವರು. ಕನ್ನಡ ಭಾಷೆಯ ಬಗ್ಗೆ ಗಲಭೆ ಉಂಟಾದರೆ ಕನ್ನಡಿಗರು ಮೊದಲು ತೇಜಸ್ವಿಯವರ ಮೊನಚು ಪ್ರತಿಕ್ರಿಯೆಯ ಕಡೆಗೆ ನೋಡುತ್ತಿದ್ದರು. ಇಂತಹ ಕನ್ನಡದ ಅಪ್ಪಟ ಪ್ರತಿಭೆ ಕಳೆದ ಏಪ್ರಿಲ್ ೫ಕ್ಕೆ ನಮ್ಮಿಂದ ಅಗಲಿ ೮ ವರ್ಷಗಳು ಸಂದವು.

ಇನ್ನು ತೇಜಸ್ವಿಯವರು ಮಾಡುತ್ತಿದ್ದ ಕೆಲಸದ ಬಗ್ಗೆ ಕನ್ನಡ ಜಗತ್ತು ಕುತೂಹಲದಿಂದ ನೋಡುತ್ತಲೇ ಇರುತ್ತಿತ್ತು. ಕನ್ನಡ ಭಾಷೆ, ಸಾಹಿತ್ಯ ಬಲ್ಲವರಿಗೆ ಮಾತ್ರ ತೇಜಸ್ವಿಯವರ ಪರಿಚಯ ಎಂಬುದು ಇರಲಿಲ್ಲ. ಹಾಗೆ ನೋಡಿದರೆ ಕನ್ನಡ ಸಾಹಿತ್ಯವನ್ನು ಒಂದು



ಶೈಕ್ಷಣಿಕ ಶಿಸ್ತಿನ ಹೊರಗೆ ಕೊಂಡೊಯ್ದುದು ಇವರ ವಿಶಿಷ್ಟತೆಯಾದರೆ, ವಿಜ್ಞಾನವನ್ನು ಮನಸ್ಸಿಗೆ ನಾಟುವಂತೆ, ಕುತೂಹಲ ಮೂಡಿಸುತ್ತಾ, ಕಥೆ ಹೇಳುವಂತೆ ಹೇಗೆ ವಿಭಿನ್ನವಾಗಿ ಹೇಳಬಹುದು ಎಂಬ ಬಗೆಯನ್ನು ತೋರಿಸಿಕೊಟ್ಟದ್ದು ಇವರ ಹೆಚ್ಚುಗಾರಿಕೆ. ಕನ್ನಡ ಸಾಹಿತ್ಯಕ್ಕೆ ಹೊಸ ಹೊಸ ಕಥಾವಸ್ತುಗಳ ಪರಿಚಯ ಮಾಡಿಸಿದ್ದು, ಹಾಸ್ಯದ ಲವಲವಿಕೆಯ ನಿರೂಪಣೆಯ ಮೂಲಕವೇ ಓದುಗರನ್ನು ಸೆಳೆದುಕೊಂಡದ್ದು, ಕನ್ನಡ ಓದುಗ ವಲಯಕ್ಕೆ ಮಿಸಿಂಗ್ ಲಿಂಕ್, ಫ್ಲೈಯಿಂಗ್ ಸಾಸರ್, ಅದ್ಭುತ ಜಗತ್ತು ಸರಣಿ, ವಿಸ್ಮಯ, ಅಲೆಮಾರಿಯ ಅಂಡಮಾನ್, ನೈಲ್ ನದಿಯ ಇತಿಹಾಸ, ಪ್ಯಾಪಿಲಾನ್ – ಇಂತಹ ಹತ್ತು ಹಲವು ಪುಸ್ತಕಗಳ ಮೂಲಕ ಜಗತ್ತಿನ ಕುತೂಹಲವನ್ನೇ ತೆರೆದಿಟ್ಟು, ಅದರ ಮೂಲಕ ಹೊಸ ತಲೆಮಾರಿನವರಿಗೆ ಕನ್ನಡದಲ್ಲಿಯೂ ಜಗತ್ತಿನ ಬಗೆಗಿರುವ ಕುತೂಹಲವನ್ನು, ಅದರಲ್ಲಿನ ಅಚ್ಚರಿಯನ್ನು ನಮ್ಮದಾಗಿಸಿಕೊಳ್ಳಲು ಸಾಧ್ಯ ಎಂಬುದನ್ನು ತೋರಿಸಿಕೊಟ್ಟವರು. ಈ ಮೂಲಕ ಕನ್ನಡ ಓದುವಿಕೆಯ ವ್ಯಾಪ್ತಿಯನ್ನು ಹಿಗ್ಗಿಸಿದರು. ಎಲ್ಲಕ್ಕಿಂತ ಹೆಚ್ಚಾಗಿ ಕನ್ನಡ ಓದುವವರ ಸಂಖ್ಯೆಯಲ್ಲಿ ಹೆಚ್ಚಳ ಉಂಟುಮಾಡಿದ್ದು ತೇಜಸ್ವಿಯವರ ವೈಶಿಷ್ಟ್ಯತೆ. ಅದರಲ್ಲಿಯೂ ಕಂಪ್ಯೂಟರ್ ತಂತ್ರಜ್ಞಾನದಲ್ಲಿ ಕೆಲಸ ಮಾಡುವವರಿಗೆ ತೇಜಸ್ವಿ ಒಂದು ವಿಸ್ಮಯ !

ತೇಜಸ್ವಿಯವರದ್ದು ನಿರಂತರ ಅನ್ವೇಷಣೆಯ ಪ್ರತಿಭೆ. ಕಾದಂಬರಿ, ಸಣ್ಣಕತೆ, ವೈಚಾರಿಕ ಪ್ರಬಂಧ, ಕವಿತೆ, ನಾಟಕ, ಪ್ರಬಂಧ – ಹೀಗೆ ಹತ್ತು ಹಲವು ಬಗೆಯ ಬರಹಗಳಲ್ಲಿ ತಮ್ಮ ಸೃಜನಶೀಲ ಪ್ರತಿಭೆಯ ಹರಹನ್ನು ಹರಡುತ್ತಾ ಬದುಕಿನ ವಿಭಿನ್ನ ನೆಲೆಗಳ ಹುಡುಕಾಟ ನಡೆಸಿದವರು ತೇಜಸ್ವಿ.

'ಲಿಂಗಬಂಧ' ಎಂಬ ಕಥೆಯ ಮೂಲಕ ಸಾಹಿತ್ಯ ಜಗತ್ತಿನಲ್ಲಿ ಮೊದಲು ಗುರುತಿಸಿಕೊಂಡ ತೇಜಸ್ವಿಯವರಿಗೆ ಸಾಹಿತ್ಯವೆಂಬುದು ಕೇವಲ ಪ್ರವೃತ್ತಿ ಮಾತ್ರವೇ ಆಗಿರಲಿಲ್ಲ. ಸಮಕಾಲೀನ ಜಗತ್ತಿನ ಆಗುಹೋಗುಗಳಿಗೆ ನಿರಂತರ ಸ್ಪಂದಿಸುತ್ತಲೇ ಬದಲಾಗುತ್ತಿರುವ ಬದುಕಿನ ದ್ರವ್ಯದ ಅರಿಯುವಿಕೆಗೆ ಸಾಹಿತ್ಯವನ್ನು ಮಾಧ್ಯಮ ಮಾಡಿಕೊಂಡವರು ಇವರು ! ಸಾಹಿತ್ಯ ಮಾತ್ರವೇ ಅಲ್ಲದೆ, ಫೋಟೋಗ್ರಫಿ, ಚಿತ್ರಕಲೆ, ಸಂಗೀತ ಕೂಡ ತೇಜಸ್ವಿಯವರಿಗೆ ಅಭಿವ್ಯಕ್ತಿಯ ಮಾಧ್ಯಮವಾಗಿತ್ತು.

* * *

ತೇಜಸ್ವಿಯವರ ಆಕರ್ಷಣೆಗೆ ಕಾರಣಗಳೇನು ಎಂಬುದನ್ನು ಕುರಿತು ಯೋಚಿಸುತ್ತಾ ಹೋದಂತೆ ಹೊಳೆಯುವ ಕಾರಣಗಳು ಹಲವು. ಇವುಗಳಲ್ಲಿ ವಿಭಿನ್ನ ವಸ್ತುಗಳನ್ನು ಕನ್ನಡ ಸಾಹಿತ್ಯ ಲೋಕಕ್ಕೆ ಪರಿಚಯಿಸಿದ್ದು, ಅನೇಕ ತಾತ್ವಿಕತೆಗಳನ್ನು ತಮ್ಮ ಸಾಹಿತ್ಯದ ಮೂಲಕ ಪ್ರಯೋಗಕ್ಕೆ ಒಡ್ಡಿದ್ದು, ಜನಸಾಮಾನ್ಯರಿಗೂ ಮುಟ್ಟುವಂತಹ ಭಾಷೆಯಲ್ಲಿ ತಮ್ಮ ಯೋಚನೆಗಳನ್ನು ಮತ್ತು ತಾನು ಕುತೂಹಲದಿಂದ ಕಂಡದ್ದನ್ನು ಹಂಚಿಕೊಂಡದ್ದು – ಹೀಗೆ ಹಲವು ಸಂಗತಿಗಳು ಕಣ್ಣಮುಂದೆ ಹರಡುತ್ತವೆ.

ತೇಜಸ್ವಿ ವಿಭಿನ್ನ ಕಥಾವಸ್ತುಗಳನ್ನು ಸಾಹಿತ್ಯದಲ್ಲಿ ತಂದರು ಎಂಬುದೇ ಅವರು ಲೋಕವನ್ನು ಹಿಡಿಯುತ್ತಿದ್ದ ಕ್ರಮದ ವಿಭಿನ್ನತೆಯನ್ನು ತೋರಿಸುತ್ತದೆ. 'ಹುಲಿಯೂರಿನ ಸರಹದ್ದು' ಕಥಾಸಂಕಲನದ ಕಥೆಗಳ ವಸ್ತುವಿನಲ್ಲಿ, 'ಅಬಚೂರಿನ ಪೋಸ್ಟಾಫೀಸು' ಸಂಕಲನದ ಕಥೆಗಳು ವ್ಯಕ್ತಪಡಿಸುವ ವಸ್ತುವಿನಲ್ಲಿ ವೈಶಿಷ್ಟ್ಯತೆ ಇದೆ. ಅದರಲ್ಲಿಯೂ ೮೦ರ ದಶಕದಲ್ಲಿ ಬಂದ 'ಕರ್ವಾಲೋ' ಕನ್ನಡ ಕಥನ ಲೋಕಕ್ಕೆ ಹೊಚ್ಚಹೊಸದು. ಇದುವರೆವಿಗೂ ಸುಮಾರು ೩೦ ಮುದ್ರಣಗಳನ್ನು ಕಂಡಿರುವ ಈ ಕೃತಿಯನ್ನು ಪತ್ರಿಕೆಯವರೊಬ್ಬರು ಇದನ್ನು ಧಾರಾವಾಹಿಯಾಗಿ ಪ್ರಕಟಿಸಲು ನಿರಾಕರಿಸಿದ್ದರು. ಇದೊಂದು ಕಾದಂಬರಿಯೇ ಅಲ್ಲ ಎಂದು ಅಭಿಪ್ರಾಯ ತಳೆದಿದ್ದರು. ಈಗ ಹಲವು ಭಾಷೆಗಳಿಗೆ ತರ್ಜುಮೆಯಾಗಿರುವ ಈ ಕಾದಂಬರಿ, ಹಾರುವ ಓತಿಯಂತಹ ಒಂದು ಪ್ರಾಣಿಶಾಸ್ತ್ರದ ವಸ್ತುವನ್ನು ಸಾಹಿತ್ಯಲೋಕಕ್ಕೆ ತಂದು ಅದರ ಮೂಲಕ ಒಟ್ಟು ಮನುಕುಲದ ಚರಿತ್ರೆಯನ್ನು ಸಾಹಿತ್ಯದ ನೆಲೆಯಲ್ಲಿ ಬಿಡಿಸಿಡುತ್ತಾ ಹೋಗಿದೆ. ಇದರ ವಿಶೇಷವೆಂದರೆ ಹಾರುವ ಓತಿಯನ್ನು ರೂಪಕವಾಗಿಸಿ ಅದರ ಮೂಲಕ ಭೂತ ಮತ್ತು ವರ್ತಮಾನದ ಜಗತ್ತನ್ನು ಅರಿಯುವ ಹೊಸ ಕಣ್ಣನ್ನು ಹುಡುಕಿಕೊಟ್ಟದ್ದು.

ತೇಜಸ್ವಿಯವರು ಅನುಭವ ಮತ್ತು ತಾತ್ವಿಕತೆ ಎರಡೂ ಹೊಯ್ ಕೈಯಾಗುವಂತೆ ಒಂದರೊಡನೆ ಒಂದನ್ನು ಬೆರೆಸಿ ಹುಡುಕಾಡಿದ್ದು 'ನಿಗೂಢ ಮನುಷ್ಯರು' ಎಂಬ ಕೃತಿಯಲ್ಲಿ. ೭೦ರ ದಶಕವು ಅನುಭವದ ಮೂಲಕ ಎಲ್ಲವನ್ನೂ ಅರಿಯಬಹುದು, ಅರಿಯುತ್ತೇವೆ ಎಂಬ ತಾತ್ವಿಕತೆ ಪ್ರಧಾನವಾಗಿದ್ದ ಕಾಲ. ತೇಜಸ್ವಿ "ವ್ಯಕ್ತಿಯ ಅನುಭವವೂ ಅರಿಯುವಿಕೆಯಲ್ಲಿ ಎಷ್ಟು ನಿರರ್ಥಕ" ಎನ್ನುವುದರ ಮೂಲಕ ಅನುಭವ ಮತ್ತು ಅರಿಯುವಿಕೆಯ ನಡುವಿನ ಸಂಬಂಧದ ಮಿತಿಯನ್ನು ಈ ಕೃತಿಯಲ್ಲಿ ತೋರಿಸಿಕೊಟ್ಟರು. ಈ ಕೃತಿಯಲ್ಲಿ ಬರುವ ಗೋಪಾಲಯ್ಯ ಎಂಬ ಪಾತ್ರಕ್ಕೆ ಎಲ್ಲವೂ ನಿಗೂಢ. ಸುತ್ತಲಿನ ಪ್ರಕೃತಿಯೂ ನಿಗೂಢ. ತಾನು ಮತ್ತು ತನ್ನ ಸುತ್ತಲಿನ ಪ್ರಕೃತಿ ಇವೆರಡನ್ನು ಅರಿಯುತ್ತೇನೆ ಎನ್ನುವುದು ಒಂದು ಭ್ರಮೆ. 'ನಿಗೂಢ ಮನುಷ್ಯರು' ಕಥನದಲ್ಲಿನ ಒಂದು ಪ್ರಸಂಗವನ್ನು ಇದಕ್ಕೆ ಉದಾಹರಣೆಯಾಗಿ ಹೇಳುವುದಾದರೆ ವಿಪರೀತ ಮಳೆ ಸುರಿಯುತ್ತಿರುವ ನುಗುಬೀಡು ಎಂಬ ಪ್ರದೇಶದಲ್ಲಿ ಜಗನ್ನಾಥ, ರಂಗಪ್ಪ ಸಿಕ್ಕಿಹಾಕಿಕೊಂಡಿರುತ್ತಾರೆ. ಇಡೀ ರಾತ್ರಿ ಮಳೆ ಸುರಿಯುತ್ತಾ ಅವರು ತಂಗಿದ್ದ ಮನೆಯ ಹಿಂದಿನ ಗುಡ್ಡ ಜರಿಯಲು ಪ್ರಾರಂಭಿಸುತ್ತದೆ. ಅವರು ತಂಗಿದ್ದ ಮನೆಯ ಮಾಲೀಕ ಗೋಪಾಲಯ್ಯನು ಜಗನ್ನಾಥನನ್ನು ಕೂಗಿದಂತೆ, ಆಗುತ್ತದೆ. "ಜಗನ್ನಾಥ ! ಜಗನ್ನಾಥ ! ಎದ್ದೇಳಿ, ಕೇಳಿ ಗಿರಿ ಎಚ್ಚೆತ್ತಿದೆ, ಅದು ಉಸುರುವ ಪಿಸುಮಾತು, ಇದು ಜಗತ್ತಿನ ಕೊನೆ !! ಎಲ್ಲಾ ಅನುಭವಗಳ ಶಿಖರ !! ಇದು ಸಾವೂ ಹೌದು. ಇನ್ನು ಬೆಳಗಾಗೋದೆ ಇಲ್ಲ. ಏಳಿ ಎಚ್ಚರಾಗಿರಿ." ಜಗನ್ನಾಥನಿಗೆ ಗಾಬರಿಯಾಗಿ ಗೋಪಾಲಯ್ಯನ ಭೂತ ಮಾತನಾಡುತ್ತಿದೆ ಎನ್ನಿಸಿತು. ಗಟ್ಟಿಯಾಗಿ, "ಗೋಪಾಲಯ್ಯ, ಗೋಪಾಲಯ್ಯ" ಎಂದು ಕೂಗಿದನು. ಆಗ ಎಚ್ಚರಗೊಂಡ ಗೋಪಾಲಯ್ಯ, "ಯಾಕೆ ಹೀಗೆ ಕೂಗುತ್ತಿದ್ದಿರಾ, ಏನಾಯಿತು ?" ಎನ್ನುತ್ತಾರೆ. "ಗೋಪಾಲಯ್ಯ ಏನಾದರು ಮಾತನಾಡಿದಿರಾ" ಎಂದಾಗ ಗೋಪಾಲಯ್ಯ ಇಲ್ಲವಲ್ಲಾ ಎಂದು ಉತ್ತರ ಕೊಡುತ್ತಾರೆ. ಹಾಗಾದರೆ ಕೂಗಿದವರು ಯಾರು ? ಅಥವಾ ಗೋಪಾಲಯ್ಯನವರೇ ಸುಳ್ಳು ಹೇಳುತ್ತಿದ್ದಾರಾ ಅಥವಾ ಗೋಪಾಲಯ್ಯ ಕೂಗಿದಂತೆ ಕೇಳಿಸುತ್ತಿರುವುದು ತನ್ನ ಭ್ರಮೆಯಾ ಎಂದು ಜಗನ್ನಾಥನಿಗೆ ಗೊಂದಲವಾಗುತ್ತದೆ. ಇಂತಹ ಪರಿಸ್ಥಿತಿಯಲ್ಲಿ ಸಿಲುಕಿಕೊಂಡಿರುವ ಮೂವರೂ ಒಬ್ಬರಿಗೊಬ್ಬರು ಅಪರಿಚಿತರಂತೆ ಕಾಣುತ್ತಾರೆ; ಹಾಗೆಯೇ ಮನುಷ್ಯರನ್ನು ಆವರಿಸಿರುವ ಪ್ರಕೃತಿಯೂ ಎಂದೂ ತಿಳಿಯದ ವಸ್ತುವಾಗುತ್ತದೆ. ಹಾಗಾದರೆ ಎಂದೂ ಏನೂ ಅರಿಯಲು ಸಾಧ್ಯವಾಗದ ಈ ಪ್ರಕೃತಿ, ಈ ದೇಹ ಮನುಷ್ಯನಿಗೆ ನಿರಂತರ ಸವಾಲನ್ನು ಎಸೆಯುತ್ತಾ ಅವನ ಮಿತಿಯನ್ನು ಅವನ ಮುಖಕ್ಕೆ ಎರಚುತ್ತಾ ಅವನ ಅಸಹಾಯಕತೆಯನ್ನು ತೋರಿಸುತ್ತಿರುತ್ತದೆಯೇ ಎಂಬ ಸಂಶಯ ಮೂಡಿಸುತ್ತದೆ. ಮನುಷ್ಯ ತನ್ನ ಅಸಹಾಯಕತೆಯನ್ನು ದಾಟುವ ರೀತಿಯೆಂದರೆ ತನ್ನ ಅರಿಯುವ ಪ್ರಯತ್ನವನ್ನು ಎಂದೂ ನಿಲ್ಲಿಸದೆ ಇರುವುದು. ಈ ಪ್ರಯತ್ನದಲ್ಲಿಯೇ ಅವನ ಬದುಕಿನ ಸಾರ್ಥಕತೆ ಇದೆ. ಇದು 'ನಿಗೂಢ ಮನುಷ್ಯರು' ಕೃತಿಯು ವ್ಯಕ್ತಪಡಿಸುವ ನಿಲುವು.

ಕರ್ವಾಲೋ ಕಾದಂಬರಿ ತೇಜಸ್ವಿಯವರ ಬರಹಗಳಲ್ಲಿ ಒಂದು ಮೈಲಿಗಲ್ಲು. ಕನ್ನಡ ಸಾಹಿತ್ಯಕ್ಕೆ ವಿಭಿನ್ನ ವಸ್ತು ಮತ್ತು ಧೋರಣೆಯನ್ನು ಒದಗಿಸಿಕೊಟ್ಟ ಕರ್ವಾಲೋ ಕಾದಂಬರಿಯು ಭಾರತೀಯ ಸಮಾಜದಲ್ಲಿನ ಪಾರಂಪರಿಕ ಜ್ಞಾನ, ಇದರಲ್ಲಿನ ಜ್ಞಾನ ಶಿಸ್ತನ್ನು ಅರಿಯುವಲ್ಲಿ ಈ ಸಮಾಜದ ಮಿತಿಯನ್ನು ಗುರುತಿಸಲು ಹವಣಿಸಿದ ಕೃತಿ. ಕರ್ವಾಲೋ ಅಂಥ ಒಬ್ಬ ಪರಿಸರ ವಿಜ್ಞಾನಿಗೆ ಈ ಸಮಾಜದಲ್ಲಿನ ಮಂದಣ್ಣನಂತಹವರಲ್ಲಿ ಹುದುಗಿರುವ ಜ್ಞಾನವನ್ನು ಅರಿಯುವ ಶಕ್ತಿ ಇದೆ. ಆದರೆ ಈ ಪರಿಸರದ ಭಾಗವೇ ಆಗಿರುವ ನಿರೂಪಕನಿಗೆ ಮಂದಣ್ಣ ಒಬ್ಬ ದಡ್ಡ ಹಾಗೂ ಕೆಲಸಕ್ಕೆ ಬಾರದವನು. ಶೈಕ್ಷಣಿಕ ಶಿಸ್ತು ನಮ್ಮನ್ನು ಹೇಗೆ ಆವರಿಸಿಕೊಂಡಿದೆ ಎಂದರೆ ಓದು ಬರಹ ಬಲ್ಲ ವ್ಯಕ್ತಿಗಳು ಮಾತ್ರವೇ ಸುತ್ತಲಿನ ಕೀಟ ಪ್ರಪಂಚ ಅಥವಾ ಪ್ರಕೃತಿಯ ನಿಗೂಢವನ್ನು ಅರಿಯುವ ಶಕ್ತಿಯನ್ನು ಹೊಂದಿರುತ್ತಾರೆ ಎಂದು ಭಾವಿಸುವಂತೆ ಮಾಡಿದೆ. ಓದು ಬರಹವು ಶಾಲೆಯ ಅಥವಾ ಕಾಲೇಜಿನ ಶಿಕ್ಷಣ ಎಂಬುದಾಗಿ ಪದವಿಗಳಲ್ಲಿ ಮಾತ್ರ ನೋಡಲಾಗುತ್ತಿದೆ. ಆದರೆ ಮಂದಣ್ಣನಂತಹ ಓದು ಬರಹ ತಿಳಿಯದ ವ್ಯಕ್ತಿಗಳಿಗೂ ಸಹ ಸುತ್ತಲಿನ ಜಗತ್ತಿನ ಬಗ್ಗೆ ಕುತೂಹಲ ಇರುತ್ತದೆ. ಅವರೂ ಸಹ ಜಗತ್ತನ್ನು ಸೂಕ್ಷ್ಮವಾಗಿ ಗಮನಿಸುತ್ತಿರುತ್ತಾರೆ; ಅದರ ಮೂಲಕವೇ ತಿಳುವಳಿಕೆಯನ್ನು ಪಡೆದಿರುತ್ತಾರೆ; ಇಂತಹ ಹಲವು ವ್ಯಕ್ತಿಗಳ ಸೂಕ್ಷ್ಮ ನಿರೀಕ್ಷಣೆಗಳು ನಮ್ಮ ಪಾರಂಪರಿಕ ಜ್ಞಾನದಲ್ಲಿ ಅಡಕಗೊಂಡಿವೆ. ಅವುಗಳನ್ನು ತಿಳಿಯುವುದರ ಕಡೆಗೆ ಕಣ್ಣು ಹೊರಳಿಸಿದಾಗ ಮಾತ್ರ ಜ್ಞಾನ ಎಂಬುದರ ವ್ಯಾಖ್ಯೆಯು ಬದಲಾಗುತ್ತದೆ. ಅಂತೆಯೇ ಜ್ಞಾನವನ್ನು ಅರಿಯುವ ನಮ್ಮ ತಿಳುವಳಿಕೆಯೂ ವಿಸ್ತಾರವಾಗುತ್ತದೆ. ಆಗ ಮಂದಣ್ಣ ಮಾತ್ರ ಏಕೆ ಬಿರಿಯಾನಿ ಕರಿಯಪ್ಪ, ಮಾರ, ಪ್ಯಾರ ಇಂತಹ ಹತ್ತು ಹಲವು ಜನಗಳನ್ನು ಕುತೂಹಲದಿಂದ ನೋಡುವಂತೆ ಅವರ ತಿಳುವಳಿಕೆಯನ್ನು ವಿಭಿನ್ನ ಬಗೆಯಿಂದ ಅರಿಯಲು ಸಾಧ್ಯವಾಗುವಂತೆ ಆಗುವುದೇ ಆದರೆ ಇದುವರೆಗೆ ಯಾವುದನ್ನು ಶಾಲೆ ಕಾಲೇಜುಗಳಲ್ಲಿ ಕಲಿತರೆ ಮಾತ್ರ ವಿದ್ಯೆ ಎಂಬ ನಿಲುವಿನಿಂದ ಹೊರಬರಲು

ಸಾಧ್ಯವಾಗುತ್ತದೆ; ಇದು ನಮ್ಮ ಸಮಾಜವು ಅಗತ್ಯವಾಗಿ ಬೆಳೆಸಿಕೊಳ್ಳಬೇಕಾದ ಧೋರಣೆಯಾಗಿದೆ ಎಂಬುದಾಗಿ ತೇಜಸ್ವಿ ಈ ಕೃತಿಯ ಮೂಲಕ ಹೇಳಿದರು.

ತೇಜಸ್ವಿ 'ಚಿದಂಬರ ರಹಸ್ಯ' ಕಾದಂಬರಿಯಲ್ಲಿ ಮನುಷ್ಯನ ಪ್ರಜ್ಞೆಯ ಸ್ವಾತಂತ್ರ್ಯವನ್ನು ಕುರಿತು ಹೇಳುತ್ತಾ, "ಮನುಷ್ಯ ಪ್ರಜ್ಞೆ ನಿಜವಾಗಿಯೂ ಸ್ವತಂತ್ರವೋ ಅಥವಾ ಅದೊಂದು ಭ್ರಮೆಯೋ ? ಇಡೀ ಗ್ರಹತಾರೆ, ನಿಹಾರಿಕೆಗಳ ಈ ವಿಶ್ವವೆಲ್ಲ ತಮ್ಮ ತಮ್ಮ ನಿಯಮಗಳ ಸರಹದ್ದಿನಲ್ಲಿ ಸುತ್ತುತ್ತಿವೆ. ಅಂಥದರಲ್ಲಿ ಇದರಿಂದ ಹೊಮ್ಮಿದ ಪ್ರಜ್ಞೆ ನಿಯಮಾತೀತವೆ ? ನಿಜಕ್ಕೂ ಸ್ವತಂತ್ರವೇ ? ಇದು ನನ್ನನ್ನು ಚಕಿತಗೊಳಿಸುವ ಚಿದಂಬರ ರಹಸ್ಯ" ಎಂದು ಹೇಳಿದ್ದರು. ಜುಗಾರಿಕ್ರಾಸ್, ಮಾಯಾಲೋಕ ಇವೆಲ್ಲವೂ ಮನುಷ್ಯನಾಳದ ಬದುಕುವ ಅಭೀಪ್ಸೆಯನ್ನು ಹುಡುಕುವ ಬಗೆಗಳು.

ತೇಜಸ್ವಿ ವಿಭಿನ್ನವಾಗಿ ಬರೆಯಲು ಸಾಧ್ಯವಾದುದನ್ನು ತಮ್ಮ ವ್ಯಕ್ತಿತ್ವದಲ್ಲಿಯೇ ಗುರುತಿಸುತ್ತಾರೆ. ಅವರು ಒಂದೆಡೆ ಹೇಳುವಂತೆ : "ನಾನು ಎಲ್ಲರಿಗಿಂತ ಭಿನ್ನವಾಗಿ ಬರೆಯಬೇಕೆಂದು ಪ್ರಜ್ಞಾಪೂರ್ವಕವಾಗಿ ಪ್ರಯತ್ನಿಸಿದವನಲ್ಲ. ಈ ಭಿನ್ನತೆಯ ಮೂಲ ಇರುವುದು ನನ್ನ ಬರವಣಿಗೆ ಕ್ರಮದಲ್ಲಾಗಲೀ ಭಾಷೆಯ ಬಳಕೆಯಲ್ಲಾಗಲಿ ಅಲ್ಲ. ಅದು ಮೂಲತಃ ನನ್ನ ವ್ಯಕ್ತಿತ್ವದಲ್ಲೂ ನನ್ನ ಬದುಕಿನ ಬಗೆಯಲ್ಲೂ ಇತ್ತು. ಆದ್ದರಿಂದಲೇ ಅಪ್ರಜ್ಞಾಪೂರ್ವಕವಾಗಿ ನನ್ನ ಬರವಣಿಗೆ ನವ್ಯರ ಜಾಡಿನಲ್ಲಿ ಸಾಗದೇ ಹೋಯಿತು" ಎಂದು ಹೇಳುತ್ತಾರೆ.



ಹೀಗೆ ವ್ಯಕ್ತಿತ್ವದಲ್ಲಿ ಇದ್ದ ವಿಭಿನ್ನ ಗ್ರಹಿಕೆಯನ್ನು ಬರವಣಿಗೆಯಲ್ಲಿ ತರುವಲ್ಲಿಯೂ ಅನೇಕ ಪ್ರಯೋಗಗಳನ್ನು ಮಾಡಿದ್ದಾರೆ. ಇದರಲ್ಲಿ ಅವರ ಹವ್ಯಾಸವಾಗಿದ್ದ ಫೋಟೋಗ್ರಫಿಯೂ ಒಂದು. ಫೋಟೋಗ್ರಫಿಯಲ್ಲಿ ಒಂದು ಚಿತ್ರಕ್ಕೆ ಚೌಕಟ್ಟು ಹಾಕಿ ತೋರಿಸುವ ಹಂತದಲ್ಲಿಯೇ, ಅದರಲ್ಲಿ ವಿಶಿಷ್ಟ ಧ್ವನ್ಯಾರ್ಥಗಳು ಹೊಳೆದುಬಿಡುವುದರ ಅಸಾಧಾರಣತೆಯನ್ನು ಸಾಹಿತ್ಯಕ್ಕೂ ತೇಜಸ್ವಿ ಬಳಸಿಕೊಂಡರು. "ವಾಸ್ತವ ಜಗತ್ತಿನ ಸರ್ವೇಸಾಧಾರಣ ದೃಶ್ಯ ಒಂದು ವಿಶಿಷ್ಟ ದೃಷ್ಟಿಕೋನದ ಚೌಕಟ್ಟಿನೊಳಗೆ ಸ್ಥಗಿತಗೊಳಿಸಿದ ಕೂಡಲೇ ಅನೇಕ ಧ್ವನ್ಯಾರ್ಥಗಳಿಂದ ಕೂಡಿದ ಪ್ರತಿಮೆಯಾಗಿ ಕಲಾಭಿವ್ಯಕ್ತಿಯಾಗುತ್ತದೆ. ಇದನ್ನೇ ನಾನು ನನ್ನ ಸಾಹಿತ್ಯ ಕೃತಿಗಳಲ್ಲೂ ಪ್ರಯತ್ನಿಸಿರುವುದನ್ನು ನನ್ನ ಪರಿಸರದ ಕಥೆ, ಅಣ್ಣನ ನೆನಪು, ಕಿರಗೂರಿನ ಗಯ್ಯಾಳಿಗಳು ಇತ್ಯಾದಿ ಕೃತಿಗಳಲ್ಲಿ ನೋಡಬಹುದು" ಎಂದು ಹೇಳಿದ್ದಾರೆ.

ನಿರಂತರವಾಗಿ ಪ್ರಯೋಗಶೀಲರಾಗಿದ್ದ ತೇಜಸ್ವಿ ಸಾಹಿತ್ಯಕ್ಕೆ ವಸ್ತುವಿನ ಮೂಲಕ ಹೊಸತನವನ್ನು ತಂದಂತೆಯೇ ಭಾಷೆಯ ಬಳಕೆಯಲ್ಲಿಯೂ ಹೊಸತನ ತಂದರು. ಭಾಷೆ ಮತ್ತು ಸಾಹಿತ್ಯಗಳಿಗೆ ಸಂಬಂಧಿಸಿದಂತೆ ಅವರು ಹೇಳುವ ವಿಚಾರಗಳು ಹೀಗಿವೆ : "ಈ ವೈಜ್ಞಾನಿಕ ಶತಮಾನದಲ್ಲಿ ಕೆಲಸದ ಮಿತಿಮೀರಿದ ವರ್ಗೀಕರಣ ಮತ್ತು ಕೈಗಾರಿಕೀಕರಣದಿಂದ ಉಂಟಾಗುವ ಕೆಲಸದ ಬಗ್ಗೆಯ ಅತಿ ಏಕಾಗ್ರತೆ, ತತ್ಫಲವಾಗಿ ಉಂಟಾಗುವ ಇತರೆಯವುಗಳ ಬಗ್ಗೆ ಅಲಕ್ಷ್ಯ, ಸಾಮಾಜಿಕವಾದ, ಆರ್ಥಿಕವಾದ ವರ್ಗಭಿನ್ನತೆ ಇತ್ಯಾದಿಗಳು ಭಾಷೆಯನ್ನು ಅಪಾಯದ ಸ್ಥಿತಿಗೆ ಮತ್ತೆ ಮತ್ತೆ ಕೊಂಡೊಯ್ಯುತ್ತದೆ. ಆದರೆ ಓರ್ವ ಮಹಾ ಲೇಖಕನ ಕೃತಿ ಎಲ್ಲ ವರ್ಗದ, ಎಲ್ಲ ಕೋಮಿನ ಸಮುದಾಯಗಳ ಅನುಭವದೊಡನೆಯೂ ಸಮಾನಾಂಶವನ್ನು ಹೊಂದಿ ಜನ್ಮವೆತ್ತುವುದರಿಂದ ಆ ಭಾಷೆ ಮತ್ತೆ ಪಂಡಿತನಿಂದ ಹಿಡಿದು ಪಾಮರನವರೆಗೆ, ಅತಿ ಸಾಮಾನ್ಯನಿಂದ ಹಿಡಿದು ಅತಿ ವಿಶಿಷ್ಟನಾದವನವರೆಗೆ ಸರ್ವಗ್ರಾಹವಾಗಿ ಮತ್ತೆ ಪ್ರತಿಷ್ಠಾಪಿಸಲ್ಪಡುತ್ತದೆ" (ವಿಮರ್ಶೆಯ ವಿಮರ್ಶೆ, ಪುಟ : ೧೦-೧೧). ಆದರೆ ಹೀಗೆ ಬಳಸುವ ಭಾಷೆ ಪ್ರಜ್ಞಾಪೂರ್ವಕವಾಗಿದ್ದೂ ಅಪ್ರಜ್ಞಾಪೂರ್ವಕವಾಗಿ ಸಹಜವಾಗಿ ಬಳಸಲ್ಪಡಬೇಕು. ಸಾಹಿತ್ಯಿಕವಾಗಿ ಬಳಸುವ ಭಾಷೆಯು ಎಷ್ಟು ಸಹಜವಾಗಿರ ಬೇಕೆಂದರೆ, ಯಾವಾಗ ಒಂದು ಭಾಷೆಯು ಸಾಹಿತ್ಯದ ದಿಕ್ಕಿಗೆ ಹೊರಳುತ್ತದೆ, ಯಾವಾಗ ದಿನನಿತ್ಯದ ಭಾಷೆಯಂತೆ ಬಳಕೆಯಾಗುತ್ತದೆ ಎಂಬುದರ ನಡುವಿನ ಸೂಕ್ಷ್ಮ ವ್ಯತ್ಯಾಸದಲ್ಲಿ ಭಾಷೆಯನ್ನು ಬಳಸುತ್ತಿದ್ದರು ತೇಜಸ್ವಿ. ಇಂತಹ ಭಾಷೆಯ ಬಳಕೆಯ ಸ್ವರೂಪದ ಬಗ್ಗೆ ನಿರಂತರವೂ ಹುಡುಕಾಟದಲ್ಲಿಯೇ ಇರುತ್ತಿದ್ದರು. ಭಾಷೆಗೆ ಅಲಂಕಾರ, ಪ್ರತಿಮೆ, ರೂಪಕಗಳನ್ನು ಅಳವಡಿಸಿ ಸಾಹಿತ್ಯಿಕ ಭಾಷೆ ಮಾಡಿದಷ್ಟೂ ಅದು ಕೃತಕವಾಗುತ್ತದೆ, ಸಹಜವಾಗಿ ಭಾಷೆ ಬಳಸುತ್ತಾ ಬಳಸುತ್ತಾ ಅರಿವಿಗೇ ಬಾರದಂತೆಯೇ ಅದು ಸಾಹಿತ್ಯದ ಭಾಷೆಯಾಗಬೇಕು; ತಾನು ಬರೆಯುವುದು ಎಲ್ಲರಿಗೂ ತಿಳಿಯಲಿ ಎಂಬುದೇ ಅವರ ನಿಲುವಾಗಿತ್ತು. ಆದರೆ ಹಾಸ್ಯದ ಲವಲವಿಕೆಯೊಡನೆ ಚಿಂತನೆಯ ಮೊನಚನ್ನು ಹುದುಗಿಸಿ ಕಥೆ ಹೇಳುವ ಶೈಲಿ ತೇಜಸ್ವಿಯವರದ್ದೇ ಒಂದು ವಿಶಿಷ್ಟ ಛಾಪು !

* * *

ಇನ್ನು ತೇಜಸ್ವಿಯವರು ತಮ್ಮ ಸಾಹಿತ್ಯದಲ್ಲಿ ಮತ್ತೆ ಮತ್ತೆ ಹೇಳುವ ಕೆಲವು ಆಶಯಗಳನ್ನು ಕುರಿತು ಚರ್ಚಿಸಬಹುದು : ಇವು ಗಳಲ್ಲಿ ಕಾಡು, ಮಳೆ ಇವುಗಳನ್ನೊಳಗೊಂಡ ಪರಿಸರ ಒಂದು ಆಶಯವಾದರೆ, ಅಂತೆಯೇ ಇನ್ನೊಂದು ಬೇಟೆಯ ಆಶಯ !

ಮಲೆನಾಡು ತೇಜಸ್ವಿ ಹಾಗೂ ಕುವೆಂಪು ಇಬ್ಬರ ಸಾಹಿತ್ಯದಲ್ಲಿಯೂ ಬೆನ್ನಿಗಿರುವಂತಹದ್ದು. ಕುವೆಂಪು ಅವರಲ್ಲಿ ಮಲೆನಾಡನ್ನು ಅಲ್ಲಿನ ಕಾಡನ್ನು ಬಿಟ್ಟು ಬಂದ ಮನುಷ್ಯನೊಬ್ಬ ಮತ್ತೆ ತನ್ನಲ್ಲಿ ಬಾಲ್ಯದ ನೆನಪಾಗಿ ಕಾಡುವ ಮಲೆನಾಡನ್ನು ಹುಡುಕಿಕೊಳ್ಳುವ ಭಾಗವಾಗಿ ಕಾಡು, ಅಲ್ಲಿನ ಬದುಕು, ಪರಿಸರ ಕಾಣಿಸುತ್ತದೆ. ಇದರಿಂದಲೇ ಕುವೆಂಪು ಅವರಲ್ಲಿ ಕಾಡು ಬಹುಪಾಲು ಪ್ರಕೃತಿಯ ರಮಣೀಯ ಸೌಂದರ್ಯವನ್ನು ಕುರಿತು ಹೇಳುತ್ತದೆ. ಆದರೆ ತೇಜಸ್ವಿಯವರಿಗೆ ಕಾಡು ಭಿನ್ನವಾಗಿ ಕಂಡಿದೆ. ಕಾಡಿನೊಳಗೆ ಕುಳಿತು ಕಾಡನ್ನು ಅರಿಯಲು ಯತ್ನಿಸುವ, ತನ್ನೊಳಗಿನ ಕಾಡನ್ನು ಹುಡುಕಿಕೊಳ್ಳುವ, ಅದರೊಳಗಿನ ಭಾಗವಾಗಿರುವ ಮನುಷ್ಯನಿಗೆ ನಿರಂತರವಾಗಿ ಸವಾಲು ಒಡ್ಡುತ್ತಿರುವ ಬಗೆಯಾಗಿ ಒಂದೆಡೆ ಕಾಣುತ್ತದೆ. ಇನ್ನೊಂದೆಡೆ, ತನ್ನ ಅಪೇಕ್ಷೆಯ ಮೇರೆಗೆ ಬಗ್ಗಿಸಲು, ಹವಣಿಸಲು ಯತ್ನಿಸುವ ಮನುಷ್ಯನ ಕೈಗೆ ಕೆಲವೊಮ್ಮೆ ಸಿಕ್ಕಿಯೂ ಸಿಕ್ಕದಂತಾಗುವ ಕಾಡು ಕಾಣಿಸುತ್ತದೆ. ನಂತರ, ಇದೇ ಕಾಡು ಮನುಷ್ಯನ ಅತಿಯಾದ ಆಸೆಗೆ ಸಿಲುಕಿ ಬಲಿಯಾಗುತ್ತಿರುವ ಅಸಹಾಯಕ ವಸ್ತುವಾಗಿಯೂ ತೋರುತ್ತದೆ. ಇಂತಹ ಹಲವು ಆಯಾಮಗಳಲ್ಲಿ ಈ ಆಶಯವನ್ನು ತೇಜಸ್ವಿ ಹಿಡಿಯುತ್ತಾರೆ.

ಹಾಗೆಯೇ ಬೇಟೆ ಎಂಬುದು ತೇಜಸ್ವಿಯವರಲ್ಲಿ ಪುನರಾವರ್ತನೆಯಾಗುವ ಆಶಯ; ಮೊದಲು ಪ್ರಾಣಿಗಳ ಶಿಕಾರಿಯಾಗಿ ಕಂಡುಬಂದರೆ, ನಂತರ ಮನುಷ್ಯ ಮನುಷ್ಯನನ್ನು ಹೇಗೆ ಅಮಾನವೀಯವಾಗಿ ಬೇಟೆಯಾಡುತ್ತಾನೆ ಎಂಬುದಾಗಿ ಅದು ವಿಸ್ತರಿಸಿತು. ಈ ಬೇಟೆಯೇ ಮುಂದೆ ಮನುಷ್ಯ ಮತ್ತು ಪ್ರಕೃತಿಯ ನಡುವಿನ ನಿಗೂಢವನ್ನು ಅರಿಯುವ ಕಡೆಗೆ ಚಲಿಸಿತು. ತೇಜಸ್ವಿ ತನ್ನ ಸುತ್ತಲಿನ ಅಚ್ಚರಿಯನ್ನು ಬೇಟೆಯಾಡುತ್ತಾ ತನ್ನ ಲೇಖನಿಯಲ್ಲಿ ಪ್ರಕೃತಿ ಹಾಗೂ ಸುತ್ತಲಿನ ಜೀವನವನ್ನು ಸೆರೆಹಿಡಿದರು. ಇದೇ ಬೇಟೆಯ ಆಶಯವನ್ನು ಬದುಕಿನ ಹುಡುಕಾಟವಾಗಿಸಿಕೊಂಡು ಹಲವು ನೆಲೆಗಳಿಗೆ ಕೊಂಡೊಯ್ದರು. ಮೊದಮೊದಲು ಹಂದಿಗಳನ್ನು ಸೆರೆ ಹಿಡಿಯುತ್ತಿದ್ದವರು ಮುಂದೆ ತಮ್ಮ ಕ್ಯಾಮರಾದಲ್ಲಿ ಅತ್ಯಂತ ಚಂಚಲವಾದ ವಿವಿಧ ಬಗೆಯ ಕಾಡುಹಕ್ಕಿಗಳನ್ನು ಮನಸ್ಸನ್ನು ಸೆರೆಹಿಡಿಯುವ ಅವುಗಳ ಬಗೆಬಗೆಯ ಬಣ್ಣಗಳಿಗಾಗಿಯೇ ಸೆರೆಹಿಡಿದರು; ಈ ಬಗೆಗಳು ಹಕ್ಕಿಗಳಂತೆಯೇ ಮನುಷ್ಯ ಲೋಕದವೂ ಆದವು. ತನ್ನ ಸುತ್ತಲಿನ ಇಂತಹ ಹಲವು ಬಣ್ಣಗಳ ಕುತೂಹಲದ ಕಡೆಗೆ ನಿರಂತರ ಸಂಚಾರಿಯಾಗಿದ್ದವರು ತೇಜಸ್ವಿ.

ಒಂದು ಕೈಯಲ್ಲಿ ಕ್ಯಾಮರಾ, ಇನ್ನೊಂದು ಕೈಯಲ್ಲಿ ಪೆನ್ನು ಹಿಡಿದು ನಮ್ಮ ನಡುವಿನ ಅಚ್ಚರಿಗಳ ಕಡೆಗೆ ಕಣ್ತೆರೆಯುವಂತೆ ಮಾಡಿ, ನಮ್ಮ ಕುತೂಹಲದ ಕಣ್ಣುಗಳನ್ನು ತೆರೆಸಿ, ಯಾವೊಂದು ಬಿರುದು ಸನ್ಮಾನಗಳನ್ನೂ ಒಲ್ಲದ ಇಂತಹ ಅವಧೂತನೊಬ್ಬ ನಮ್ಮ ನಡುವಿನ ವ್ಯಕ್ತಿಯೇ ಎಂದು ನೋಡುತ್ತಿರುವಂತೆಯೇ, ಇದ್ದಕ್ಕಿದ್ದಂತೆಯೇ ಧುತ್ತೆಂದು ಮಾಯವಾಗಿ ತನ್ನ ತೇಜಸ್ಸನ್ನು ನಮ್ಮ ನಡುವೆ ಹರಡಿಹೋದ ಪೂರ್ಣಚಂದ್ರ ತೇಜಸ್ವಿ ಕನ್ನಡ ಲೋಕಕ್ಕೆ ಎಂದೆಂದಿಗೂ ಮರೆಯಲಾಗದ, ಅಂತೆಯೇ ಪೂರ್ಣ ಅರಿಯಲಾಗದ ವಿಸ್ಮಯ !


**ಡಾ॥ ಎಚ್. ಶಶಿಕಲಾ**
ಸಹಾಯಕ ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಕೇಂದ್ರ
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು - ೫೬೦ ೦೫೬



# ಕುಸ್ತಿ ಮತ್ತು ಕಾಮೆಂಟರಿ – ಒಂದು ಸಾಮಾಜಿಕ ಒಳನೋಟ

'ರನ್ನಿಂಗ್ ಕಾಮೆಂಟರಿ' ಎಂದರೇನು ಎಂದು ಅರ್ಥವಾಗಲು ಇವರ ಮಾತನ್ನು ಕೇಳಬೇಕು. ಸತತ ಹನ್ನೆರಡು ತಾಸುಗಳ ಕಾಲ ನಡೆದ ಕುಸ್ತಿ ಪಂದ್ಯಾವಳಿಗಳನ್ನು ವರದಿ ಮಾಡಿದ ಕೀರ್ತಿ ಇವರದ್ದು. ಅದೇನು ರೇಡಿಯೋ ಅಥವಾ ಟಿ.ವಿ.ಯಲ್ಲಿ ಅಲ್ಲಾ ಸ್ವಾಮಿ ! ಇದು ಲೈವ್ ಕಾಮೆಂಟರಿ – ಕೈಯಲ್ಲಿ ಒಂದು ಪುಟ್ಟ ಮೈಕ್ ಹಿಡಿದು ನೆರೆದಿರುವವರೆದುರು ಮಾತನಾಡುತ್ತಲೇ ಇರಬೇಕು. ಕುಸ್ತಿ ಕಾಮೆಂಟರಿಯನ್ನು ಈ ಯಥಾವತ್ ಅವತಾರದಲ್ಲಿ ಕಂಡುಹಿಡಿದ ಕೀರ್ತಿ ಶಂಕರರಾವ್ ಪೂಜಾರಿಯವರಿಗೆ ಸಲ್ಲುತ್ತದೆ. ಮಹಾರಾಷ್ಟ್ರದ ಕೆಲವು ಸಂಚಾಲಕರು ಇವರ ಅನುಕೂಲ ನೋಡಿಕೊಂಡು ಪಂದ್ಯಗಳನ್ನು ಆಯೋಜಿಸಿದ್ದಿದೆ. ಈತ ಬಂದವರಿಗೆ ಕೇವಲ ವರದಿ ಮಾಡುವುದಿಲ್ಲ. ಜನರು ಈತನ ಮಾತು ಕೇಳಿದ ಮೇಲೆ ಕುಸ್ತಿ ನೋಡಲು ಮುಗಿಬೀಳುತ್ತಾರೆ. ಸಾಂಗ್ಲಿಯ ಬೇನಾಪುರದ ಮಾಜಿ ಪಟು ಮತ್ತು ಸದ್ಯ ಕುಸ್ತಿ ಗುರು ರಾಜೇಂದ್ರ ಶಿಂಧೆ, "ಶಂಕರ ಪೂಜಾರಿಯ ವೈಖರಿಯಿಂದ ಕುಸ್ತಿಗೆ ಮರುಜೀವ ಬಂತು" ಎಂದು ಮೆಚ್ಚುಗೆ ಸೂಚಿಸುತ್ತಾರೆ. "ಇವರು ಕುಸ್ತಿಯ ವಿಧಾನವನ್ನು ಬಿಡಿಸಿ ಹೇಳುವ ಮುಖಾಂತರ, ಆಟ ಜನರಿಗೆ ಹತ್ತಿರವಾಯಿತಲ್ಲದೆ, ಜನರೂ ಕೂಡ ಮುಖ್ಯ ಕಾರ್ಯಕ್ರಮಗಳೋ ಹಬ್ಬಗಳೋ ಇದ್ದಾಗ ಕುಸ್ತಿ ಪಂದ್ಯಾವಳಿಗಳನ್ನು ಆಯೋಜಿಸಲು ಶುರು ಮಾಡಿದರು. ಹೆಚ್ಚು ಪಂದ್ಯಾವಳಿಗಳಿದ್ದರೆ ಹೆಚ್ಚು ಪಟುಗಳಿರುತ್ತಾರಲ್ಲವೇ ?"

ಆದರೆ ಈ ಕಾಮೆಂಟರಿಗಳು ಅಲ್ಲಿ ನೆರೆದಿರುವ ವೀಕ್ಷಕರಿಗಷ್ಟೇ ಸೀಮಿತ. ಇದಕ್ಕಾಗಿ ಅಷ್ಟು ದೊಡ್ಡ ಮೈದಾನದ ತುಂಬೆಲ್ಲಾ ಧ್ವನಿವರ್ಧಕಗಳನ್ನು ಅಳವಡಿಸಿರ ಬೇಕಾಗುತ್ತದೆ. ಇದನ್ನೇ ರೇಡಿಯೋ ಮುಖಾಂತರ ಮಾಡಬಹುದಲ್ಲಾ ಎಂದರೆ, ಅದು ಕಷ್ಟದ ವಿಚಾರ ಎನ್ನುವ ಪೂಜಾರಿಯವರು, "ನಮ್ಮ ಹಳ್ಳಿಯ ಶೈಲಿ, ವೈಖರಿಗೆ ರೇಡಿಯೋ ಕಾಮೆಂಟರಿ ಒಗ್ಗಲಾರದು. ನಮ್ಮ ಕಾಮೆಂಟರಿಗಳು ಗಂಟೆಗಟ್ಟಲೆ ಸಾಗುವುದಲ್ಲದೆ ಸ್ಥಳೀಯ ಮುಖಂಡರು, ಶಾಸಕರುಗಳು ಅಥವಾ ಮಾಜಿ ಪಟುಗಳು ಬಂದಾಗ ಸ್ವಾಗತಕ್ಕಾಗಿ ತುಂಡರಿಯುತ್ತಲೇ ಇರುತ್ತದೆ" ಎಂದು ವಿವರಣೆ ನೀಡುತ್ತಾರೆ.

ವಾರನ ನಗರದಲ್ಲಿ ಹನ್ನೆರಡು ಘಂಟೆ ತಡವಾದಾಗಲೂ ಜನರನ್ನು ಕಾಮೆಂಟರಿ ಮೂಲಕ ಹಿಡಿದಿಟ್ಟುಕೊಂಡದ್ದರ ಬಗ್ಗೆ ಪೂಜಾರಿಯವರಿಗೆ ಬಹಳ ಹೆಮ್ಮೆಯಿದೆ. ಪಾಕಿಸ್ತಾನದ ಆಟಗಾರರು ಬರಲು ತಡವಾಗಿದ್ದೇ ದೊಡ್ಡ ಸಮಸ್ಯೆಯಾದರೂ, ಪೂಜಾರಿಯವರು ಪ್ರವೇಶಿಸಿದ್ದೇ ಎಲ್ಲ ನಿರಾಳವಾಯ್ತು.

ಆತ ಸಂವೇದನಾಶೀಲ, ಬುದ್ಧಿವಂತ ಮತ್ತು ಕುಸ್ತಿಯ ಇತಿಹಾಸ ಮತ್ತು ಸಂಸ್ಕೃತಿಯ ಎಲ್ಲ ವಿಚಾರಗಳನ್ನೂ ಅರಗಿಸಿಕೊಂಡವರು. ಈಗ ಕೊಲ್ಹಾಪುರದ ಕೊತಾಲಿಯಲ್ಲಿರುವ ಅವರ ನಿವಾಸದಲ್ಲಿ ಕುಳಿತು, "ನಾನು ಕುಸ್ತಿ ಶುರುಮಾಡಿದಾಗ ನನಗೆ ಎಂಟು ವರ್ಷ. ೧೯೭೨ರಲ್ಲಿ ಬರ ಬಂದು ಕೃಷಿ ಸಮಸ್ಯೆ ಶುರುವಾದಾಗ ಕುಸ್ತಿ ಬಿಟ್ಟುಬಿಟ್ಟೆ. ಈಗ ಕೃಷಿ ಮತ್ತು ಕುಸ್ತಿಗಳೆರಡಕ್ಕೂ ತೊಂದರೆ ಬಂದೊದಗಿದೆ" ಎಂದು ನಿಟ್ಟುಸಿರು ಬಿಡುತ್ತಾರೆ.

ಕೆಲ ಹೊತ್ತಿನ ಹರಟೆಯ ನಂತರ, ಎರಡು ನಿಮಿಷಗಳ ಕಾಲ ತಮ್ಮ ಕಂಚಿನ ಕಂಠದಿಂದ ಕುಸ್ತಿ ಕಾಮೆಂಟರಿಯ ಒಂದು ಚಿಕ್ಕ ಉದಾಹರಣೆ ನೀಡುತ್ತಾರೆ. ಅವರ ಮಾತಿನಿಂದ ಆಟಕ್ಕೆ ಜೀವ ಬರುತ್ತದೆನ್ನುವುದು ಸುಳ್ಳಲ್ಲ. ಈ ವಿದ್ಯೆಯನ್ನು ಅವರು ಕಲಿತದ್ದು ಗುರು ಬಾಪು ಸಾಹೇಬ ರಾಡೆಯವರಿಂದ. ಕಾಲ ಸರಿದಂತೆ ಮಾತಿನ ಶೈಲಿ, ಸಾಮಗ್ರಿಗಳನ್ನು ತಮಗೆ ಬೇಕಾದಂತೆ ಬದಲಾಯಿಸಿಕೊಂಡರು. ಅವರ ಮಾತಿನಲ್ಲಿಯೇ ಹೇಳುವುದಾದರೆ, "ಮಾತು, ವೀಕ್ಷಕರನ್ನು ಸೆಳೆಯಲೂ ಬೇಕು, ಜನರಲ್ಲಿ ಕುಸ್ತಿಯ ಬಗೆಗಿನ ತಿಳಿವಳಿಕೆಯನ್ನು ಹೆಚ್ಚಿಸಲೂ ಬೇಕು. ಕಾಮೆಂಟರಿ ಎನ್ನುವುದು ಬರೀ ಮಾಹಿತಿಯನ್ನಷ್ಟೇ ನೀಡದೆ, ಕೇಳುಗನ ಮನಸ್ಸಿನಲ್ಲಿ ಕುಸ್ತಿಯ ಇತಿಹಾಸ ಮತ್ತು ಪರಂಪರೆಯನ್ನು ಅಚ್ಚೊತ್ತಬೇಕು. ಜೊತೆಗೆ ನಿಧಾನವಾಗಿ ಕುಸ್ತಿಯ ಪಟುಗಳು ಹಾಗೂ ತಂತ್ರಗಾರಿಕೆಗಳನ್ನೂ ಅದು ಪರಿಚಯಿಸಬೇಕು. ಕಾಮೆಂಟರಿ ನೀಡುವಾತನಿಗೂ ಕೆಲವು ಜವಾಬ್ದಾರಿಗಳಿವೆ. ಕುಸ್ತಿ ಪಟುಗಳು ತಮ್ಮ ಶಕ್ತಿಯನ್ನು ದುರ್ಬಳಕೆ ಮಾಡದಂತೆ ಆತ ಸದಾ ಎಚ್ಚರಿಸುತ್ತಿರಬೇಕು. ಎದುರಾಳಿಯ ಬಗ್ಗೆ ಗೌರವ ಮತ್ತು ಅಭಿಮಾನಗಳನ್ನು ಮೂಡಿಸುವುದೂ ಮುಖ್ಯವಾದ ಕೆಲಸ."

ಪೂಜಾರಿಯವರು ಕಾಮೆಂಟರಿಯನ್ನು ಶುರು ಮಾಡಿದ್ದು ೧೯೮೫ರಲ್ಲಿ. ಕ್ರಿಕೆಟ್ ಕಾಮೆಂಟರಿ ಕೇಳುತ್ತಾ, ಇಷ್ಟೊಂದು ಮಂದಿ ಸೇರುವ ಕುಸ್ತಿಯಲ್ಲಿ ಏಕೆ ಇದನ್ನು ಪರಿಚಯಿಸಿ ಪ್ರಚಾರ ನೀಡಬಾರದು ಎಂದೆನಿಸಿತಂತೆ. ಕಲಿಯುವ ಹುಮ್ಮಸ್ಸಿರುವವರನ್ನೂ, ಯುವಕರನ್ನೂ ಸೆಳೆಯಲು ಇದೊಂದು ಒಳ್ಳೆಯ ದಾರಿಯಾಗಬಹುದು ಎಂದು ಪೂಜಾರಿಯವರಿಗೆ ಅನ್ನಿಸಿತಂತೆ. ೧೯೮೫ರ ಮೊದಲ ಕಾಮೆಂಟರಿಯನ್ನು ಪೂಜಾರಿಯವರು ಉಚಿತವಾಗಿಯೇ ನಡೆಸಿಕೊಟ್ಟರು. ಈಗ ಅವರು ವರ್ಷಕ್ಕೆ ೧೫೦ ಪಂದ್ಯಾವಳಿಗಳನ್ನು ನಡೆಸಿಕೊಡುತ್ತಾರೆ. ೨೦೦೦ದಲ್ಲಿ ಸಾಂಗ್ಲಿಯಲ್ಲಿ ನಡೆದದ್ದು ಅತಿ ದೊಡ್ಡ ಪಂದ್ಯಾವಳಿ. ಇದರಿಂದಲೇ ಅವರ ಜೀವನ ನಡೆಸಲೂ ಒಂದು ದಾರಿಯಾಗಿದೆ.

ಕಳೆದ ಬಾರಿ ಮಹಾರಾಷ್ಟ್ರದಲ್ಲಿ ನೀರಿನ ಸಮಸ್ಯೆ ಉಲ್ಬಣಿಸಿ ಯಾವ ಕುಸ್ತಿ ಪಂದ್ಯಗಳೂ ನಡೆಯಲಿಲ್ಲ. ಇದನ್ನು ನೆನಪಿಸಿಕೊಂಡಾಗ ಪೂಜಾರಿಯವರು ರಾಜಕಾರಣಿಗಳನ್ನು ಉದ್ದೇಶಿಸಿ ಹೇಳುವುದಿಷ್ಟೆ: "ದನಕರುಗಳನ್ನುಳಿಸಲು ನೀವು ಮೇವಿನ ಡಿಪೋಗಳನ್ನು ತೆರೆದಿದ್ದೀರಿ. ತುಂಬ ಸಂತೋಷ. ನಿಮಗೆ ಧನ್ಯವಾದಗಳು. ಹಾಗೆಯೇ ಪೈಲ್ವಾನರನ್ನು ಉಳಿಸಲು ಒಂದೆರಡು ಕ್ಯಾಂಪುಗಳನ್ನೋ, ಪಂದ್ಯಾವಳಿಗಳನ್ನೋ ಆಯೋಜಿಸಿದ್ದರೆ ತುಂಬ ಉಪಕಾರವಾಗುತ್ತಿತ್ತು. ಅವರ ಉಳಿವೂ ಮಳೆ ಬೆಳೆಯನ್ನು ಆಧರಿಸಿಯೇ ನಿಂತಿದೆ."

***(ಪಿ. ಸಾಯಿನಾಥ್ ಅವರ 'Kushti's voice of social commentary'ಯ ಅನುವಾದ)***

---


ಮೂಲ : **ಪಿ. ಸಾಯಿನಾಥ್**    ಕನ್ನಡಕ್ಕೆ : **ಸಾಕ್ಷಿ**

ಕೇರಾಫ್ : ಕೆ. ಅರವಿಂದ, ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ

ಬೆಂಗಳೂರು ಪ್ರಧಾನ ಕಛೇರಿ, ಅವಿನ್ಯೂ ರಸ್ತೆ, ಬೆಂಗಳೂರು – ೫೬೦ ೦೦೨


---




ಕುಸುಮಾ ಶಾನಭಾಗ

# ಒಂದಿಷ್ಟು ಕ್ಷಮೆಯಿರಲಿ, ಗೆಳತಿ

ಮನೆಗೆ ಬಂದರೂ ಸುಮಾಗೆ ಎಂದಿನ ಉತ್ಸಾಹ ಇರಲಿಲ್ಲ. ಮಂಕಾಗಿರಬಾರದು ಅಂದುಕೊಂಡರೂ ಹೆಚ್ಚು-ಹೆಚ್ಚು ಮಂಕಾಗುತ್ತಿದ್ದಳು. ಆಫೀಸಿನಲ್ಲಿ ಇಂದು, ತಾನು ಶ್ಯಾಮಲಳ ಜೊತೆ ನಡೆದುಕೊಂಡ ರೀತಿ ಸರಿಯಿರಲಿಲ್ಲವೆಂದು ಅವಳ ಮನಸ್ಸಿಗೆ ಬಂದುಹೋಗಿತ್ತು. ಅಪರಾಧಿ ಭಾವ ತೀವ್ರವಾಗಿ ಕಾಡುತ್ತಿತ್ತು. ಅದರಿಂದ ಹೊರಬರಲು ಸಾಧ್ಯವಾಗದೆ, ಉದ್ವೇಗದಲ್ಲಿದ್ದಳು. ಕಷ್ಟವೊ, ನೋವೊ ಏನೋ ಹೇಳಿಕೊಳ್ಳಲೆಂದೇ ಶ್ಯಾಮಲ ತನ್ನ ಕ್ಯಾಬಿನ್ನಿಗೆ ಬಂದು ಕುರ್ಚಿ ಎಳೆದು ಕುಳಿತಳು. ಮುಖ ಬಾಡಿತ್ತು. ಕಣ್ಣು ತುಂಬಿತ್ತು. ಅವಳು ಏನು ಹೇಳುತ್ತಿದ್ದಳೊ ಅಷ್ಟನ್ನು ಕೇಳಬಹುದಿತ್ತು. ಸಾಧ್ಯವಿದ್ದರೆ ಉತ್ತರ ಕೊಡುವುದು, ಇಲ್ಲದಿದ್ದರೆ ತನ್ನ ಅಸಹಾಯಕತೆಯನ್ನು ಅವಳಿಗೆ ವಿವರಿಸಿದ್ದಿದ್ದರೆ ಕೇಳುತ್ತಿದ್ದಳು, ಅರ್ಥಮಾಡಿಕೊಳ್ಳುತ್ತಿದ್ದಳು. ಅನೇಕ ವಿಚಾರಗಳಲ್ಲಿ ಶ್ಯಾಮಲಳಿಗೆ ಚಿಂತನೆಯ ಕ್ರಮ ಇಲ್ಲ ; ಆದರೆ ತೆಗೆದುಕೊಳ್ಳುವ ನಿರ್ಣಯ ಪ್ರಬುದ್ಧವಾಗಿರುತ್ತದೆ. ಇದು ಸುಮಾಗೂ ಗೊತ್ತು. ಇಷ್ಟು ಗೊತ್ತಿದ್ದೂ ತಾನೇಕೆ ಅವಳೊಡನೆ ಒರಟಾಗಿ ವರ್ತಿಸಿದೆ ? ಕಟುವಾಗಿ ಮಾತಾಡಿದೆ ? ಎಂದು ತನ್ನನ್ನೇ ಪ್ರಶ್ನಿಸಿಕೊಂಡಳು. "ಸಾರಿ, ಸುಮಾ" ಎಂದು ಶ್ಯಾಮಲ ಎದ್ದು ಹೋದ ರೀತಿ, ಆ ಕ್ಷಣಕ್ಕೆ ಸುಮಾಗೆ ಏನೂ ಅನಿಸದಿದ್ದರೂ ಈಗ ಚೇಳಿನಂತೆ ಕುಟುಕುತ್ತಿದೆ.

ಕೆಲವೊಮ್ಮೆ ಅನಿರೀಕ್ಷಿತವಾಗಿ ನಡೆಯಬಾರದಂಥ ಘಟನೆಗಳು ನಡೆದುಹೋಗುತ್ತವೆ. ಹಾಗೆಯೇ ಸುಮಾಳಿಗೂ ಆಗಿದೆ. ಅವಳು ಒರಟು ಸ್ವಭಾವದವಳಲ್ಲ. ಮುಖಕ್ಕೆ ಹೊಡೆದ ಹಾಗೆ ಮಾತಾಡುವವಳೂ ಅಲ್ಲ. ಸ್ವಲ್ಪ ಮಟ್ಟಿಗೆ ಸಿಟ್ಟು ಹರಿಯಬಿಡುವುದು ನಿಜ. ಆದರೆ ಇವತ್ತು... ತನಗೆ ಆತ್ಮೀಯ ಗೆಳತಿ ಅನ್ನುವಷ್ಟು ಹತ್ತಿರದವಳಾಗಿದ್ದ, ತನ್ನ ಸಂಸಾರದ ಸಮಸ್ಯೆಗಳಲ್ಲಿ, ಕೆಲಸದ ಗೊಂದಲಗಳಲ್ಲಿ ಎಷ್ಟೋ ಸಲ ನೆರವಿಗೆ ಬಂದಿದ್ದ ಶ್ಯಾಮಲಳಿಗೇ ತಾನು ಹೀಗೆ ಮಾತಾಡಿದ್ದು... ಎಲ್ಲ ನೆನಪಿಸಿಕೊಂಡು ಸುಮಾ ನಿಟ್ಟುಸಿರುಬಿಟ್ಟಳು. ತಾನು ತಿಳಿದಂತೆ ಶ್ಯಾಮಲಳಿಗೆ ಇದು ಘಟನೆಯೇ ಆಗಿರುವುದಿಲ್ಲ. 'ಸುಮಾಗೆ ಏನು ಟೆನ್ಷನ್ ಇತ್ತೊ ಏನೊ' ಅಂದುಕೊಂಡು ಸುಮ್ಮನಾಗುತ್ತಾಳೆ. ಇದು ಗೊತ್ತಿದ್ದೂ ತಾನು ಏಕೆ ಹೀಗೆ ಒದ್ದಾಡುತ್ತಿದ್ದೇನೆ ಎನ್ನುವುದು, ಸುಮಾಗೆ ಗೊತ್ತಾಗುತ್ತಿಲ್ಲ. ತನ್ನನ್ನು ತನಗೇ ಹಿಡಿತಕ್ಕೆ ಸಿಗುತ್ತಿಲ್ಲ ಅನಿಸುತ್ತಿದ್ದಂತೆ, ಕಣ್ಣು ತೇವವಾಯಿತು. ಕಣ್ಣು ಮೂಗು ಒರೆಸಿಕೊಂಡು ಅತ್ತೆಯ ಕೋಣೆಗೆ ಹೋದಳು. ಸುಮಾಳ ಅತ್ತೆ ಶಾರದಮ್ಮ ಮಲಗಿದಲ್ಲಿಂದಲೇ, "ಸುಮೀ, ತಲೆ ನೋಯುತ್ತುಂಟ ? ತುಂಬಾ ಮಂಕಾಗಿದ್ದೀಯ" ಕೇಳಿದರು.



ವಾಸ್ತವ ವಿಚಾರ ತಿಳಿದಾಗ, ಶಾರದಮ್ಮ ಮೌನಿಯಾದರು. ಸುಮಾ ಒತ್ತಾಯಿಸಿದಾಗ, "ನಿನ್ನ ಮಟ್ಟಿಗೆ ನಿನ್ನ ಆಲೋಚನೆ ಸರಿಯಾಗಿದೆ. ಆದರೆ ಇದರಿಂದ ತಪ್ಪಿಸಿಕೊಳ್ಳಲು ಇಷ್ಟು ನಿಷ್ಠುರ ಮಾತು ಬೇಕಿರಲಿಲ್ಲ. ಇಲ್ಲಿ ಬೇಡ, ಮನೆಗೆ ಬಾ, ಮಾತಾಡೋಣ ಎಂದು ಒಂದು ಮಾತು ಹೇಳಿದ್ದರೂ ಆ ಮಗುವಿಗೆ ಸಮಾಧಾನ ಇರುತ್ತಿತ್ತಲ್ಲ. ಅದು ಬೇರೆ, ಕ್ಯಾನ್ಸರ್ ಆದವಳು" ಎಂದರು ಶಾರದಮ್ಮ. "ತಪ್ಪು ಮಾಡಿಬಿಟ್ಟೆ ಅಮ್ಮ. ತುಂಬ ತಪ್ಪು ಮಾಡಿಬಿಟ್ಟೆ ." ಸುಮಾ ಅತ್ತೆ ಕೈಯನ್ನು ತನ್ನ ಕೆನ್ನೆಗೆ ಸವರಿಸಿಕೊಂಡು ಹೇಳಿದಳು. ಸತೀಶ ಬಂದ ಕೂಡಲೇ, ಶ್ಯಾಮಲಾಳ ಮನೆಗೆ ಹೋಗಿ ಕ್ಷಮೆ ಕೇಳುವುದೆಂದು ಸುಮಾ ಯೋಚಿಸಿದಳು. ಶಾರದಮ್ಮನೂ ಇದೇ ಸರಿಯಾದ ದಾರಿ ಎಂದು ಹೇಳಿದರು.

“ಇಲ್ಲ ಅಮ್ಮ, ಏನೋ ಬೇಜಾರು...ತುಂಬ ಸಂಕಟ ಆಗುತ್ತಿದೆ. ನನ್ನ ವಿಚಾರ ಇರಲಿ, ನರ್ಸಮ್ಮ ನಿಮಗೆ ಕಾಫಿ ಕೊಟ್ಟರು ತಾನೆ. ಡಯಾಪರ್ ಬದಲಿಸಿದರಾ ? ಇವತ್ತು ಹೊಟ್ಟೆ ಕಿತಾಪತಿ ಮಾಡಿತಾ ?” ಎಂದು ಕೇಳುತ್ತಿದ್ದಾಗ, ಹಗಲು ಹೊತ್ತು ಶಾರದಮ್ಮನನ್ನು ನೋಡಿಕೊಳ್ಳುವ ನರ್ಸ್ ನಗುತ್ತಾ, ಅಮ್ಮನ ಹೊಟ್ಟೆ ಇವತ್ತು ವೆರಿ ಗುಡ್ಡಾಗಿತ್ತು” ಎಂದು ಹೇಳಿ ಜೋರಾಗಿ ನಕ್ಕಳು. ಶಾರದಮ್ಮನೂ ಪ್ರತಿಯಾಗಿ ನಕ್ಕಾಗ, ಸುಮಾಗೆ ಸ್ವಲ್ಪ ಹಿತವೆನಿಸಿದರೂ ಮನಸ್ಸು ಮತ್ತೆ ರೊಚ್ಚು ಹಿಡಿದಂತೆ ಅವಳನ್ನು ಚಿಂತೆಗೆ ಎಳೆಯಿತು. ನರ್ಸ್‌ಗೆ ಕಾಫಿ, ತಿಂಡಿ ಕೊಟ್ಟು, ಅವಳ ಜೊತೆ ತಾನೂ ತಿಂದ ಶಾಸ್ತ್ರ ಮಾಡಿದಳು. ಅವಳು ಹೊರಟುಹೋದ ಮೇಲೆ, ಸುಮಾ ರಾತ್ರಿಯ ಅಡುಗೆಗೆ ತಯಾರಿ ಮಾಡಿದಳು. ಇನ್ನೂ ಆಡುತ್ತಲೇ ಇದ್ದ ಮಗ ಸುದೀಪನನ್ನು ಕರೆದು, ಓದಲು ಕೂರಿಸಿ, ಅತ್ತೆ ಬಳಿ ಬಂದಳು.




“ಸತೀಶ ಆಫೀಸಿನಿಂದ ಬಂದಮೇಲೆ, ಅವನನ್ನು ಕರೆದುಕೊಂಡು ಶ್ಯಾಮಲಳ ಮನೆಗೆ ಹೋಗಿಬರುತ್ತೇನೆ, ಅಮ್ಮ. ಹೆಚ್ಚು ಹೊತ್ತು ಇರಲ್ಲ. ಐದೇ ಐದು ನಿಮಿಷ. ಆಗಬಹುದಾ ?” ಸುಮಾ ಅತ್ತೆಯನ್ನು ಕೇಳಿದಳು. ಅತ್ತೆಯನ್ನು ಹಾಗೇ ಬಿಟ್ಟುಹೋಗುವಂತಿರಲಿಲ್ಲ. ಅವರನ್ನು ನೋಡಿಕೊಳ್ಳಲು ಯಾರಾದರೊಬ್ಬರು ಇರಲೇ ಬೇಕಿತ್ತು. ಅತ್ತೆ ಆಗಲಿ ಎಂಬಂತೆ ತಲೆ ಆಡಿಸಿದರು. ಸೊಸೆಯನ್ನೇ ನೋಡುತ್ತಿದ್ದವರು, “ಅಂಥದ್ದು ಏನಾಯಿತು ? ನೀನು ಏನಾದರೂ ರೇಗಾಡಿದೆಯಾ ?” ಕೇಳಿದರು.

ಸುಮಾನ ಕಣ್ಣಿನಿಂದ ಹನಿ ಉದುರಿತು. ಒರೆಸಿಕೊಳ್ಳುತ್ತಾ , ಹೌದೆಂದು ಗೋಣು ಆಡಿಸಿದಳು. “ಇವೆಲ್ಲ ಸಾಮಾನ್ಯ, ಇದಕ್ಕಾಗಿ ಯಾಕಿಷ್ಟು ಕೊರಗು” ಎಂದರು ಶಾರದಮ್ಮ. ಸುಮಾ ಬಿಕ್ಕಿಬಿಕ್ಕಿ ಅಳತೊಡಗಿದಳು. ಅವರು ‘ಬಾ’ ಎನ್ನುವಂತೆ ಎರಡೂ ಕೈಗಳನ್ನು ಚಾಚಿದರು. ಸುಮಾ ಅವರ ಎದೆಗೆ ಒರಗಿ ಸೇಂಕುತ್ತಿದ್ದಳು. ಸೊಂಟದಿಂದ ಕೆಳಗೆ ನಿಶ್ಚೇತರಾಗಿರುವ ಅತ್ತೆ, ತನ್ನ ಮೇಲೆ ಒರಗಿರುವ ಸೊಸೆಯ ಬೆನ್ನು ಸವರಿ ಸಮಾಧಾನ ಮಾಡುತ್ತಿದ್ದರು. “ಆ ದೇವರು ಅನ್ನುವವನು ಇದ್ದರೆ, ಅವನು ಕೂಡ ನನ್ನನ್ನು ಕ್ಷಮಿಸುವುದಿಲ್ಲ, ಅಮ್ಮ” ಬಿಕ್ಕಿದಳು ಸುಮಾ. ನಂತರ ಕಣ್ಣೊರೆಸಿಕೊಂಡು ಅತ್ತೆಯ ಕೈ ಹಿಡಿದು ಕುಳಿತಳು.

ಶ್ಯಾಮಲ ಸುಮಾರು ಹತ್ತು ತಿಂಗಳು ರಜೆಯಲ್ಲಿದ್ದವಳು, ಕಳೆದ ತಿಂಗಳಿಂದ ಕೆಲಸಕ್ಕೆ ಬರಲು ಆರಂಭಿಸಿದ್ದಳು. ಬಹಳ ಬಡವಾಗಿದ್ದಳು. ಬೋಳಾಗಿದ್ದ ತಲೆಯಲ್ಲಿ ಕುರುಚಲಿನಂತೆ ಕೂದಲು ಬೆಳೆದಿತ್ತು. ಇನ್ನೂ ಎರಡು ತಿಂಗಳು ರಜೆ ತೆಗೆದುಕೊಂಡು ಸುಧಾರಿಸಿಕೊಳ್ಳಬಹುದಿತ್ತು ಎಂದು ಸುಮಾಗೆ ಅನಿಸಿತ್ತು. ಇದ್ದ ರಜೆಗಳೆಲ್ಲ ಮುಗಿಯಿತೆಂದು ಕೆಲಸಕ್ಕೆ ಬಂದಿದ್ದಳು. ಅವಳು ಆಫೀಸಿಗೆ ಬಂದ ದಿನ ಸುಮಾಗೆ ಈಗಲೂ ಕಣ್ಣಿಗೆ ಕಟ್ಟಿದಂತಿದೆ. ತಲೆಗೆ ಸ್ಕಾರ್ಫ್ ಕಟ್ಟಿಕೊಂಡು, ಅಣ್ಣ ಅಮೆರಿಕಾದಿಂದ ತಂದಿದ್ದ ಕೈಚೀಲವನ್ನು ಬಗಲಿಗೆ ಹಾಕಿಕೊಂಡು, ಮುಖ ಅರಳಿಸಿಕೊಂಡು, “ಸುಮಾ, ನಾನು ಬಂದೆ. ಹುಷಾರಾಗಿ ಬಂದಿದ್ದೇನೆ” ಎಂದು ತಬ್ಬಿಕೊಂಡಿದ್ದಳು. ಸುಮಾನೂ ಸಂತೋಷದಿಂದ ಅವಳನ್ನು ತಬ್ಬಿಕೊಂಡು, “ನೀನು ಸುಧಾರಿಸಿಕೊಂಡಿದ್ದೀಯ, ಹಿಂದಿಗಿಂತಲೂ ಗೆಲುವಾಗಿದ್ದೀಯ” ಎಂದು ಕೆನ್ನೆ ಸವರಿದ್ದಳು. ಆದರೆ ಅವಳಿಗೆ ಗೊತ್ತಿತ್ತು, ಶ್ಯಾಮಲಾ ಬಹಳ ಇಳಿದುಹೋಗಿದ್ದಾಳೆ, ಹಿಂದಿನಂತಾಗಲು ತಿಂಗಳುಗಳೇ ಬೇಕು ಎಂದು. ಆ ದಿನ ಎಳೆಯ ಮಕ್ಕಳ ಹಾಗೆ ಆಫೀಸೆಲ್ಲಾ ಓಡಾಡಿ, ಎಲ್ಲರನ್ನೂ ಮಾತಾಡಿಸಿಕೊಂಡು, ಸಂಪಾದಕರನ್ನು ನಿರೀಕ್ಷಿಸುತ್ತ ಕುಳಿತ್ತಿದ್ದಳು ಶ್ಯಾಮಲ. ಸಂಪಾದಕರು ಬಂದ ನಂತರ ಅವರನ್ನು ಮಾತಾಡಿಸಲು, ಅವರ ಕ್ಯಾಬಿನ್‌ಗೆ ಹೋದವಳು ಬರುವಾಗ ಮಂಕಾಗಿದ್ದಳು.

ಸಂಪಾದಕರ ಕ್ಯಾಬಿನ್ನಿನಿಂದ ಸುಮಾಳ ಬಳಿ ಬಂದವಳು, “ಅವರು ಬಹಳ ಗರಂ ಆಗಿದ್ದಾರೆ. ಕಾಯಿಲೆ ಬಂದಾಗ, ರಜೆ ಹಾಕುವಾಗ, ಅವರಿಗೇ ಮೊದಲು ತಿಳಿಸಬೇಕಂತೆ. ನಾನು ಮಾಮೂಲಿನಂತೆ ನನ್ನ ಬಾಸ್‌ಗೆ ತಿಳಿಸಿದ್ದೆ. ನಮ್ಮ ಚೀಫ್‌ಗಳಿಗೇ ಅಲ್ವ ನಾವು ಮೊದಲು ತಿಳಿಸೋದು. ಈಗ ಹಾಗಲ್ವಂತೆ. ಎಲ್ಲವೂ ಸಂಪಾದಕರ ಮೂಲಕವೇ ಆಗಬೇಕಂತೆ. ಹೀಗೆ ರಜೆಯಂಥ ವಿಷಯವೂ ಈಗ ಸೆಂಟ್ರಲೈಸ್ ಆಗಿರೋದು ನಂಗೆ ಗೊತ್ತಿರಲಿಲ್ವೇ. ಇನ್ನು ಮೇಲೆ ನಾನು ಶಿಫ್ಟ್‌ನಲ್ಲಿ ಕೆಲಸ ಮಾಡಬೇಕು, ಯಾವ ರಿಯಾಯಿತೀನೂ ಇಲ್ಲಾಂತ ಹೇಳಿದ್ರು....ಏನು ಮಾಡಲಿ? ಔಷಧಿ ತಕೊಳ್ಳಲಿಕ್ಕಿರುತ್ತೆ... ಕಿಮೊ ಸೈಡ್ ಅಫೆಕ್ಟ್ ಇರುತ್ತೆ...ಇದನ್ನೆಲ್ಲ ಅವರಿಗೆ ಹೇಗೆ ವಿವರಿಸಿಕೊಂಡು ಕೂರೋದು. ವಿವರಿಸಿದರೂ ಅವರು ಕೇಳುವವರಲ್ಲ ಅಂತ ಅನಿಸಿಹೋಗಿದೆ” ಸಣ್ಣ ದನಿಯಲ್ಲಿ ಹೇಳಿದಳು.

ಸುಮಾಗೂ ಆಶ್ಚರ್ಯವಾಯಿತು. ಕ್ಯಾನ್ಸರ್ ಕಾಯಿಲೆ ವಾಸಿಯಾಗಿ ಬಂದವಳನ್ನು ಸ್ವಾಗತಿಸದೆ, ಗದರಿದ್ದಾರಲ್ಲ... ಎಂದು ತನ್ನಷ್ಟಕ್ಕೆ ಹೇಳಿಕೊಂಡಳು, “ಶ್ಯಾಮಲ, ಹಾಗೆ ಸುಮ್ಮನೆ ಹೇಳುತ್ತಾರೆ. ಹಿಂದಿನಂತೆ ಕೆಲಸ ಮಾಡಿಕೊಂಡು ಹೋಗಲು ಅವರೇ ಹೇಳುತ್ತಾರೆ, ನೋಡುತ್ತಿರು” ಎಂದು ಧೈರ್ಯ ಹೇಳಿದಳು. “ನೀನು ಹೇಳಿದಂತೆ ಆದರೆ ಒಳ್ಳೇದಿರುತ್ತಿತ್ತು” ಎಂದು ಶ್ಯಾಮಲಾ ಬೇರೆ ಸ್ಟಾಫನ್ನು ಮಾತಾಡಿಸಲು ಎದ್ದು ಹೋದಳು.

ಆ ದಿನದಿಂದಲೇ ಶುರುವಾಯಿತಲ್ಲ ಅವಾಂತರಗಳು. ಸುಮಾ ಕೆಲಸ ಮುಗಿಸಿ ಇನ್ನೇನು ಹೊರಡಬೇಕು. ಅಷ್ಟರಲ್ಲಿ ಅವಳ ಕ್ಯಾಬಿನ್ನಿಗೆ ಬಂದ ಸಂಪಾದಕರು, ಶ್ಯಾಮಲನ ವರ್ತನೆ ಅತಿಯಾಯಿತು ಅಂದರು. ಸುಮಾ ಅವರನ್ನೇ ನೋಡಿದಳು. “ಏನು, ಈ ಹುಡುಗಿ ಅಧಿಕಾರ ಸೆಂಟ್ರಲೈಸ್ ಅಂತೆಲ್ಲ ಮಾತಾಡ್ತಾಳಲ್ಲ. ಎಷ್ಟು ಸೊಕ್ಕಿರಬೇಕು. ಅದನ್ನ ಕೇಳಿಸಿಕೊಂಡು, ನೀವೂ ತಲೆ ಕುಣಿಸಿದ್ರಂತೆ !”

“ಅವಳು ಹಾಗೆ ಮಾತಾಡಲಿಲ್ಲ, ಸರ್. ನನ್ನ ಹತ್ರ ಹಾಗೆಲ್ಲ ಹೇಳಲಿಲ್ಲ. ನಾನು ತಲೆ ಕುಣಿಸಲೂ ಇಲ್ಲ. ಹಾಗೇಂತ ನಿಮಗೆ ಯಾರು ಹೇಳಿದ್ರು ?”

“ಕೃಷ್ಣಪ್ಪ ಇಲ್ಲೇ ಬದಿಗೆ ನಿಂತುಕೊಂಡಿದ್ದನಲ್ಲ !”

“ಅವನೇನು ಕೇಳಿಸಿಕೊಂಡು ಏನು ಹೇಳ್ತಿದ್ದಾನೊ...ಶ್ಯಾಮಲ ಮಾತ್ರ ಹಾಗೆ ಹೇಳಲಿಲ್ಲ” ಸುಮಾ ವಾದಿಸುವಂತೆ ಮಾತಾಡಿದಳು. ಸಂಪಾದಕರು ಮುಂದೆ ಮಾತಾಡದೆ ಎದ್ದು ಹೋದರು.

ಶ್ಯಾಮಲ ತನಗಿಂತ ಹತ್ತು ವರ್ಷ ಜ್ಯೂನಿಯರ್. ಆದರೂ ತಮ್ಮಿಬ್ಬರ ಆಲೋಚನೆಗಳಲ್ಲಿ ಸಾಮ್ಯವಿದೆ ಎಂದು ಸುಮಾಗೆ ಅನಿಸುತ್ತಿತ್ತು. ಶ್ಯಾಮಲ ಅವಳ ಮನೆಯಲ್ಲಿ ಎಲ್ಲರಿಗೂ ಕಿರಿಯವಳು. ತಾಯಿಗೆ ಮುದ್ದಿನ ಮಗಳು. ಅಕ್ಕ, ಅಣ್ಣಂದಿರಿಗೆ ಪ್ರೀತಿಯ ತಂಗಿ. ತಾನೂ ಸಂಪಾದಿಸಬೇಕು ಎಂದು ಹಟ ಮಾಡಿ ಕೆಲಸಕ್ಕೆ ಸೇರಿದವಳು. ಸುಮಾ ಮನೆಯಲ್ಲಿ ಹಿರಿಮಗಳು. ಗಂಡನ ಮನೆಯಲ್ಲಿ ಜವಾಬ್ದಾರಿ ಹೊತ್ತ ಸೊಸೆ. ಮನೆ ನಿಭಾಯಿಸಿಕೊಂಡು ಹೋಗಲು ಕೆಲಸ ಅನಿವಾರ್ಯ. ಸುಮಾಗೆ ಅತ್ತೆಯ ಬಗ್ಗೆ ಒಂದು ರೀತಿಯ ತಾತ್ಸಾರ ಇತ್ತು. ಮದುವೆಯಾದ ಸ್ವಲ್ಪ ದಿನದಲ್ಲೇ ಅವಳಿಗೆ ಅತ್ತೆ ಎಂದರೆ ಬೋರ್ ಆಗುತ್ತಿತ್ತು. ಅವರು ಮಾತಾಡುವುದು, ನಡೆದಾಡುವುದು ಎಲ್ಲವೂ ಅವಳಿಗೆ ಆಡಿಕೊಳ್ಳುವ ವಿಷಯಗಳಾಗಿಬಿಟ್ಟಿದ್ದವು. ಕೆಲವು ಸಲ ಜಗಳಕ್ಕೂ ನಿಲ್ಲುತ್ತಿದ್ದಳು. ಆಗೆಲ್ಲ ಅತ್ತೆ ಮೌನ ವಹಿಸುತ್ತಿದ್ದರು. ಸತೀಶ ಅವಳನ್ನು ಎಚ್ಚರಿಸುತ್ತಿದ್ದ. ತಾನು ಬಿಟ್ಟರೆ, ತಾಯಿಗೆ ಯಾರೂ ಇಲ್ಲ. ಅವರನ್ನು ನೋಯಿಸಬಾರದು ಎಂದುಹೇಳುತ್ತಿದ್ದ. ಸುಮಾ ಗಂಡನ ಮೇಲೂ ಸಿಟ್ಟು ಮಾಡುತ್ತಿದ್ದಳು. ಅತ್ತೆಯೊಡನೆ ಮಾತಾಡುವುದು ನಿಲ್ಲಿಸಿದ್ದಳು. ಅವರನ್ನು ವೃದ್ಧಾಶ್ರಮಕ್ಕೆ ಸೇರಿಸಬೇಕು ಅನ್ನುವವರೆಗೂ ಯೋಚನೆ ಮಾಡಿದ್ದಳು.

ಅತ್ತೆಯ ಬಗ್ಗೆ ತನಗಿರುವ ಅಸಮಾಧಾನ, ಮನೆಯಲ್ಲಿ ಅವರಿಂದ ತನಗಾಗುವ ಕಿರಿಕಿರಿಯನ್ನು ಶ್ಯಾಮಲಳಿಗೆ ಹೇಳಿಕೊಂಡಳು. ಎಲ್ಲವನ್ನು ಆಲಿಸಿದ ಶ್ಯಾಮಲ, “ನಿನಗೆ ಅತ್ತೆಯನ್ನು ಕಂಡರೆ ಯಾಕೆ ಹೀಗಾಗುತ್ತೆ ಅಂತ ನಿನ್ನನ್ನೇ ಯಾವತ್ತಾದರೂ ಪ್ರಶ್ನಿಸಿಕೊಂಡಿದ್ದೀಯ ?” ಕೇಳಿದಳು. ತನಗೆ ಸರಿಯಾಗಿ ಧ್ವನಿ ಜೋಡಿಸಬಹುದು ಅಂದುಕೊಂಡರೆ, ಇವಳು ವಿಚಿತ್ರವಾಗಿ ಪ್ರಶ್ನಿಸುತ್ತಾಳೆ ಅಂದುಕೊಂಡಳು, ಸುಮಾ.

“ನಿನಗೆ ನಿನ್ನ ಅತ್ತೆ ಮೇಲೆ ಬಂದಂತೆ ನನಗೂ ಆಗಾಗ ಯಾರ್‍ಯಾರ ಮೇಲೊ ನೆಗೆಟಿವ್ ಧೋರಣೆಗಳು ಬರುತ್ತವೆ. ಕೆಲವು ಸಲ ಎಷ್ಟು ಗಾಢವಾಗಿರುತ್ತವೆ ಅಂದರೆ, ಅಂಥ ವ್ಯಕ್ತಿಗಳ ಮುಖ ನೋಡಬಾರದು ಅನಿಸಿಬಿಡುತ್ತೆ. ಹೀಗಾದಾಗ, ನಾನು

ಒಂಟಿಯಾಗಿ ಕುಳಿತು, ಈ ಧೋರಣೆಗೆ ಕಾರಣಗಳನ್ನು ಹುಡುಕುತ್ತೇನೆ. ಅಂತರಾಳದ ಆಳ ಬಗೆದು ಹುಡುಕುತ್ತೇನೆ. ಕಾರಣ ಸಿಕ್ಕಿದ ಮೇಲೆ ನನಗೆ ಯಾವ ನಾಚಿಕೆಯೂ ಇರುವುದಿಲ್ಲ. ಆ ವ್ಯಕ್ತಿಯೊಡನೆ ಕುಳಿತು ಮಾತಾಡುತ್ತೇನೆ. ನನ್ನಲ್ಲಿರುವ ನಕಾರಾತ್ಮಕ ಭಾವನೆಗಳನ್ನು ಹೇಳಿಬಿಡುತ್ತೇನೆ. ಆ ವ್ಯಕ್ತಿ ಸ್ವೀಕರಿಸಲಿ, ಬಿಡಲಿ ಅದು ನನಗೆ ಮುಖ್ಯವಲ್ಲ. ಆದರೆ ಸೂಕ್ಷ್ಮವಾಗಿರುವವರು ಸ್ವೀಕರಿಸುತ್ತಾರೆ. ಮುಂದೆ ನನಗೆ ಆ ವ್ಯಕ್ತಿಯ ಬಗ್ಗೆ ಕಹಿ ಭಾವನೆ ಬಂದರೆ ಕೇಳು. ಒಂದು ರೀತಿ ಮುಕ್ತಳಾದ ಹಾಗೆ, ಹಗುರವಾದ ಹಾಗೆ ಅನಿಸುತ್ತೆ. ನೀನೂ ಈ ಪ್ರಯತ್ನ ಮಾಡು. ನಿನ್ನ ಅತ್ತೆಯೊಡನೆ ನಿನ್ನ ಮನಸ್ಸು ತೆರೆದಿಡು. ನಿನ್ನಿಂದಲೇ ತಪ್ಪಾಗಿದ್ದರೆ ಒಪ್ಪಿಕೊ. ಪ್ರೀತಿ ಇದ್ದಲ್ಲಿ ಕ್ಷಮೆ ಇದ್ದೇ ಇರುತ್ತೆ. ಜೊತೆಗೆ ಅವರೂ ನಿನ್ನನ್ನು ಮಗಳಂತೆಯೇ ಸ್ವೀಕರಿಸುತ್ತಾರೆ, ನೋಡು. ನನ್ನ ಅನುಭವದಿಂದ ಈ ಮಾತು ಹೇಳುತ್ತಿದ್ದೇನೆ" ಶ್ಯಾಮಲ ಸುಮಾನ ಕೈ ಹಿಡಿದು ಹೇಳಿದಳು.

ಶ್ಯಾಮಲ ಅಂದಷ್ಟು ಸುಲಭವಾಗಿ ಕಾಣಲಿಲ್ಲ, ಸುಮಾಗೆ ಈ ಕೆಲಸ. ಇರುವುದನ್ನು ಇರುವ ಹಾಗೇ ಹೇಳಲು ಧೈರ್ಯ ಸಾಲದೆ ಇವತ್ತು, ನಾಳೆ ಎಂದು ದಿನ ದೂಡುತ್ತ, ಅತ್ತೆ ಜೊತೆ ಎಲ್ಲವನ್ನು ಹೇಳಿಕೊಳ್ಳಲು ಅವಳು ಒಂದು ತಿಂಗಳು ತೆಗೆದುಕೊಂಡಳು. ಅತ್ತೆ ಅಡುಗೆ ಮಾಡಿ ಜಗುಲಿಯಲ್ಲಿ ಕುಳಿತಿದ್ದರು. ಸುಮಾ ಅವರ ಪಕ್ಕದಲ್ಲಿ ಕುಳಿತು, ಮೊದಲು ಅದು ಇದು ಎಂದು ಮಾತಿಗೆ ಶುರು ಮಾಡಿದಳು. ಅವಳ ಧ್ವನಿ ನಡುಗುತ್ತಿತ್ತು. ಶಾರದಮ್ಮನಿಗೆ ದಿಗ್ಭ್ರಮೆ ಆಯಿತು. ಬಾಯಿಂದ ಮಾತೇ ಹೊರಡದೆ ಸೊಸೆಯನ್ನೇ ನೋಡಿದರು. ಅವರನ್ನು ನೋಯಿಸಿದ್ದಕ್ಕೆ ಸುಮಾ ಕ್ಷಮೆ ಕೇಳಿದಳು. ಅವರ ಕಣ್ಣುಗಳು ಒದ್ದೆಯಾದವು. "ಯಾವತ್ತಿದ್ದರೂ ನೀನು ನನ್ನ ಮಗಳೇ" ಎಂದು ಕೆನ್ನೆ ಸವರಿದರು. ಅವರಿಬ್ಬರ ಸೀದಾ-ಸಾದಾ ಸಂಬಂಧ ಶಾರದಮ್ಮ ಲಕ್ವ ಹೊಡೆದು ಹಾಸಿಗೆಯಲ್ಲಿ ಇರುವ ಈ ಸ್ಥಿತಿಯಲ್ಲೂ ಗಟ್ಟಿಯಾಗಿಯೇ ಇದೆ. ಹಗಲು ಅತ್ತೆಯನ್ನು ನೋಡಿಕೊಳ್ಳಲಿಕ್ಕಾಗಿ ನರ್ಸ್‌ಅನ್ನು ಇಟ್ಟುಕೊಂಡಿದ್ದಾಳೆ. ರಾತ್ರಿ ತಾನೇ ನೋಡಿಕೊಳ್ಳುತ್ತಾಳೆ. ಶ್ಯಾಮಲ ಸಲಹೆ ನೀಡದೆ ಇದ್ದಿದ್ದರೆ, ಅತ್ತೆ ಸ್ಥಿತಿ ಈಗ ಹೇಗಿರುತ್ತಿತ್ತೊ, ತಾನು ಹೇಗೆ ನಡೆದುಕೊಳ್ಳುತ್ತಿದ್ದೆನೊ ಎಂದು ಸುಮಾ ಆಗೀಗ ಯೋಚಿಸಿದ್ದೂ ಇದೆ.

ಪತ್ರಿಕೆಯ ವಿಶೇಷ ಸಂಚಿಕೆ ಹೊರತರುವಾಗ ಅಥವಾ ಸಿನಿಮಾ ಪೇಜು ಮಾಡುವಾಗ, ಹೊತ್ತಿಗೆ ಮುಂಚೆ ಬಂದು ತನಗೆ ಸಹಾಯ ಮಾಡುತ್ತಿದ್ದಳು, ಶ್ಯಾಮಲ. ಅದಕ್ಕೆ ಚಿಕ್ಕಾಸು ಕೊಡಿಸುವ ಪ್ರಯತ್ನವನ್ನೂ ತಾನು ಮಾಡಲಿಲ್ಲ. ಸ್ನೇಹಿತರ ನಡುವೆ ಏನು ಹಣದ ಮಾತು ಎಂದು ತನ್ನ ಬಾಯಿ ಮುಚ್ಚಿಸಿದ್ದಳು. ಹೀಗೆ ಸಹಾಯ ಯಾರು ಮಾಡುತ್ತಾರೆ. ಸಂಪಾದಕರ ಬಳಿ ಮಾತಾಡಿ, ಓಟಿ ಮಾಡಿಸಿ ಕೊಡಿ, ಬಂದು ಮಾಡಿಕೊಡುತ್ತೇವೆ ಎಂದು ಹೇಳುವವರೇ ಜಾಸ್ತಿ. ಸ್ನೇಹದ ಹಿಂದಿದ್ದ ಅವಳ ಪ್ರೀತಿಗೆ ತಾನು ಬೆಲೆ ಕೊಡಲಿಲ್ಲ ಎಂದು ಸುಮಾ ಅತ್ತೆಗೆ ಹೇಳಿ, ಅವರ ಮುಖವನ್ನೇ ನೋಡಿದಳು.

"ನೀನು ಅವಳಿಗೆ ಏನು ಹೇಳಿದೆ ? ಎಂಥ ಮಾತಾಡಿದೆ ?" ಶಾರದಮ್ಮ ಸೊಸೆಯ ಭುಜ ಅಲುಗಿಸಿ ಅಳುಕಿನಿಂದಲೇ ಕೇಳಿದರು.

ಕ್ಯಾನ್ಸರ್ ವಾಸಿಯಾಗಿ ಆಫೀಸಿಗೆ ಬಂದ ಶ್ಯಾಮಲಾಗೆ ಯಾರೂ ನೆಮ್ಮದಿ ಕೊಡಲಿಲ್ಲ. ಸಂಪಾದಕರು ಮಧ್ಯಾಹ್ನದ ಪಾಳಿಗೆ ಹಾಕಿದರು. ಉರಿ ಬಿಸಿಲಿನಲ್ಲಿ ಬರುವಾಗ ಮುಖ, ಕೈ ಚರ್ಮದಿಂದ ರಕ್ತ ಸುರಿಯುತ್ತಿತ್ತು. ಒಂದೇ ಸಮನೆ ಕಂಪ್ಯೂಟರ್ ನೋಡಿಕೊಂಡು ಪೇಜು ಮಾಡಲಿಕ್ಕೆ ಆಗುತ್ತಿರಲಿಲ್ಲ. ಸೊಂಟ ನೋವು ಶುರುವಾಯಿತು. ಕಾಲು-ಕೈ ಊದಿಕೊಳ್ಳತೊಡಗಿದವು. ಕೆಲಸ ನಿಧಾನ ಆಗುತ್ತಿತ್ತು. ಅವಳ ವಿರುದ್ಧ ದೂರು ಹೋಯಿತು. ಶ್ಯಾಮಲ ಜೊತೆಯಲ್ಲಿದ್ದವರೊಡನೆ ಮಾತನಾಡಿದರೆ ಅವರು ಹಾಂ...ಹುಂ... ಹೇಳಿ ಜಾಗ ಖಾಲಿ ಮಾಡುತ್ತಿದ್ದರು. ಅಷ್ಟೊ ಇಷ್ಟೊ ಮಾತಾಡುವವರೂ ಸಂಪಾದಕರು ಬಂದ ಕೂಡಲೇ ಅಪರಾಧಿಗಳಂತೆ ಅಲ್ಲಿಂದ ಕಾಲು ಕೀಳುತ್ತಿದ್ದರು. "ಕ್ಯಾನ್ಸರ್ ಆದಾಗ ನನ್ನ ಚೀಫ್‌ಗೆ ಹೇಳುವುದರ ಬದಲು ಸಂಪಾದಕರಿಗೆ ಹೇಳಬೇಕೆಂದು ನನಗೆ ಗೊತ್ತಿರಲಿಲ್ಲ. ತಾನು ಸಂಪಾದಕನಾದ ಮೇಲೆ ನಿಯಮದಲ್ಲಿ ಇಂಥ ಬದಲಾವಣೆ ತರಲಾಗಿದೆ ಎಂದು ನಮಗೆಲ್ಲ ತಿಳಿಸಬೇಕಿತ್ತಲ್ಲ. ಹಾಗೂ ಮಾಡಲಿಲ್ಲ. ಮಾಡಿದ್ದಿದ್ದರೆ ನಮ್ಮ ಚೀಫ್ ನನಗೆ ತಿಳಿಸುತ್ತಿದ್ದರಲ್ಲ ? ಈಗ ಇದೇ ದೊಡ್ಡ ತಪ್ಪು ಅಂದುಕೊಂಡು ಎಲ್ಲಿಯವರೆಗೆ ಇದನ್ನೇ ಎಳೆಯುವುದು !" ಶ್ಯಾಮಲಾ ಜನರಲ್ ಡೆಸ್ಕ್ ಮುಖ್ಯ ಸಂಪಾದಕರನ್ನು ಕೇಳುತ್ತಿದ್ದಳು. ಮಧ್ಯಾಹ್ನ ಶ್ಯಾಮಲಾಳಿಗೆ ಸಂಪಾದಕರಿಂದ ಕರೆ ಬಂತು. ತಾನಿಲ್ಲದ ವೇಳೆ ತನ್ನನ್ನು ನಿಂದಿಸುವುದು ಜೋರಾಗಿ ನಡೆಯುತ್ತಿದೆ ಅಂದರು. ಅವರಿಬ್ಬರ ನಡುವೆ ಸ್ವಲ್ಪ ಹೊತ್ತು ಮಾತು ನಡೆಯಿತು.

"ಸರ್, ನಾನು ನಿಮ್ಮನ್ನು ಸಾರಿ ಕೇಳೋದಿಲ್ಲ. ಯಾಕೆಂದರೆ ನಾನು ತಪ್ಪು ಮಾಡಿಲ್ಲ. ಸಾರಿ ಹೇಳೋದು ಘನಂದಾರಿ ಕೆಲಸವಲ್ಲ. ಆದರೆ ಆ ಪದದ ಯೋಗ್ಯತೆಯನ್ನು ನಾನು ಕಳೆಯೋದಿಲ್ಲ. ಹೇಳುವ ಸಂದರ್ಭ ಬಂದಾಗ ಹೇಳುವವರಿಗೆ ಹೇಳುತ್ತೇನೆ. ಆದರೆ ನಿಮಗಲ್ಲ" ಎಂದು ಹೇಳಿದವಳೇ ಶ್ಯಾಮಲ ಸಂಪಾದಕರ ಕ್ಯಾಬಿನ್‌ನಿಂದ ಹೊರಬಂದಳು.

ಅವಳು ಹಿಂದೆ ಕೆಲಸ ಮಾಡುತ್ತಿದ್ದ ವಿಭಾಗದ ಚೀಫ್ ವಿಲಾಸ್‌ಗೆ ಏನೋ ಕುತೂಹಲ. ಅವಳನ್ನು ಕರೆದು, ಕ್ಯಾಬಿನ್‌ನಲ್ಲಿ ಸಂಪಾದಕರ ಜೊತೆ ಏನು ಮಾತಾಯಿತೆಂದು ಕೇಳಿದರು. "ನೋಡಿ ಸರ್, ಮನುಷ್ಯ ಸ್ವಭಾವ ಎಷ್ಟು ವಿಚಿತ್ರಾಂತ. ಇಲ್ಲಿ ಕೃಷ್ಣಪ್ಪ, ಗಂಗಾಧರ, ಇನ್ನೂ ಕೆಲವರು ನನ್ನ ಬಾಯಿಂದ ಏನು ಮಾತು ಬರುತ್ತೆ ಅಂತ ಕಾಯುತ್ತಿರುತ್ತಾರೆ. ಯಾಕೆ ಗೊತ್ತ ? ಅದಕ್ಕೆ ಒಂದಿಷ್ಟು ಮಸಾಲೆ ಹಚ್ಚಿ ಸಂಪಾದಕರಿಗೆ ಒಪ್ಪಿಸಲಿಕ್ಕೆ. ಅವರು ನನ್ನ ಧ್ವನಿಪೆಟ್ಟಿಗೆಗೆ ಕೈ ಹಾಕಿ, ಧ್ವನಿಗಳನ್ನೆಲ್ಲಾ ಎಳೆದು, ಇವೇ ಶ್ಯಾಮಲಳ ಮಾತುಗಳು ಎಂದು ಸಂಪಾದಕರ ಎದುರು ಇಡಲು ಹೇಸೊದಿಲ್ಲ. ಗುಪ್ತಚರರ ಹಾಗೆ ನನ್ನ ಹಿಂದೆ ಇರುತ್ತಾರೆ. ನಾನು ಏನು ಮಾತಾಡುತ್ತೇನೆ ಎಂದು ಆಲಿಸಿ, ಆಗಿಂದಾಗಲೇ ಸಂಪಾದಕರಿಗೆ ಫೋನ್ ಮಾಡ್ತಾರೆ. ಮಾತಾಡಿದ್ದನ್ನೇ ಹೇಳಲಿ. ತೊಂದರೆ ಏನೂ ಆಗೋದಿಲ್ಲ. ಆದರೆ ಅವರಿಗೆ ಬೇಕಾದ ಹಾಗೆ, ಸಂಪಾದಕರಿಗೆ ಉರಿ ಹತ್ತುವ ಹಾಗೆ ತಿರುಚಿ ತಿಳಿಸ್ತಿದ್ದಾರೆ. ನಾನು ಏನು ಅಂಥದ್ದು ಮಾಡಿದ್ದೇನೆ ? ನನ್ನ ತಪ್ಪಾದರೂ ಏನು? ಅಂತ ಕೇಳಿದರೆ, ಸಂಪಾದಕರು ಉತ್ತರಿಸುತ್ತಿಲ್ಲ. ಅವರನ್ನ ಸಾರಿ ಕೇಳಬೇಕಂತೆ. ಉತ್ತರ ಕೊಡದವರಿಗೆ ನಾನು ಸುಮ್ಮನೆ ಯಾಕೆ ಸಾರಿ ಹೇಳಲಿ ? ನಿಮಗೆ ಇದು ಸರಿ ಕಾಣುತ್ತ ಸರ್ ?" ಕೇಳಿದಳು.

ಒಂದು ಬಾರಿ ಸಾರಿ ಅಂತ ಹೇಳೋದು ತಾನೆ ? ಹೇಳಿಬಿಟ್ಟರೆ ಈ ರಾಮಾಯಣ ಎಲ್ಲ ಇಲ್ಲಿಗೇ ಮುಗಿದುಹೋಗುತ್ತದೆ. ಹೋಗಿ ಕೇಳಿಬಿಡುವುದು ಒಳ್ಳೆಯದೆಂದು ವಿಲಾಸ್ ಸಲಹೆ ಕೊಟ್ಟರು. ಇವತ್ತೊಂದು ದಿನ ಯೋಚಿಸಿ. ಇದೇ ಸರಿಯಾದ ದಾರಿ ಅಂತ ಅನಿಸಿದರೆ, ನಾಳೆ ಹಾಗೆ ಮಾಡುವುದಾಗಿ ಹೇಳಿದ ಶ್ಯಾಮಲ, ಸುಮಾಳ ಕ್ಯಾಬಿನ್‌ಗೆ ಬಂದು ಕುರ್ಚಿಯಲ್ಲಿ ಕೂತಳಷ್ಟೆ. ಸಂಪಾದಕರ ಕಣ್ಣು ಇತ್ತಲೇ ಇರುವುದನ್ನು ಗಮನಿಸಿದ ಸುಮಾ, ಶ್ಯಾಮಲಳಿಗೆ ಏನುಬೇಕು ಎಂದು ವಿಚಾರಿಸಲಿಲ್ಲ. ಇನ್ನೆಲ್ಲಿ ಮಾತಿಗೆ ಆರಂಭಿಸಿ ಬಿಡುತ್ತಾಳೊ ಎಂಬ ಭಯದಿಂದ, "ಶ್ಯಾಮಲ, ನಿನ್ನ ರಾಜಕೀಯ ನನ್ನವರೆಗೂ ತರಬೇಡ. ನೀನುಂಟು, ಸಂಪಾದಕರುಂಟು. ಇದರೊಳಗೆ ನನ್ನ ಯಾಕೆ ಎಳೀತೀಯ. ನನ್ನ ಪಾಡಿಗೆ ನನ್ನನ್ನು ಬಿಟ್ಟುಬಿಡು. ಬೇರೆಯವರ ಸುದ್ದಿ ನನಗೆ ಬೇಡ. ನನಗೆ ಆಸಕ್ತಿಯೂ ಇಲ್ಲ. ಗಾಸಿಪ್ ಮಾಡಲಿಕ್ಕೆ ನಾನು ಆಫೀಸಿಗೆ ಬರುತ್ತಿಲ್ಲ. ಮೊದಲು ಅದನ್ನು ತಿಳ್ಕೊಂಡು ಇಲ್ಲಿಂದ ಜಾಗ ಖಾಲಿ ಮಾಡು" ಜೋರಾಗಿಯೇ ಹೇಳಿದಳು. ಶ್ಯಾಮಲ ಕಣ್ಣು ಬಾಯಿ ಬಿಟ್ಟು ಅವಳನ್ನೇ ನೋಡುತ್ತಿದ್ದಳು. "ನಿನ್ನ ತಲೆಗೆ ನಿನ್ನ ಕೈ. ಅವರಿವರು ನಿನ್ನ ಸಲುವಾಗಿ ಸಂಪಾದಕರೊಟ್ಟಿಗೆ ಮಾತಾಡಬೇಕೆಂದು ಯಾಕೆ ಬಯಸುತ್ತೀಯ ? ನನಗೆ ತುಂಬ ಕೆಲಸ ಇದೆ. ಹೊರಡು ಇಲ್ಲಿಂದ" ಸುಮಾಳ ಧ್ವನಿ ಗಡುಸಾಯಿತು. ಶ್ಯಾಮಲ ಸಾರಿ... ಹೇಳಿ ಹೊರಟುಹೋದಳು.

"ವಿಲಾಸ್ ಸರ್, ನೀವು ಹೇಳಿದ್ದು ನಾನು ಯೋಚನೆ ಮಾಡ್ತೇನೆ. ಇಲ್ಲಿ ಎಲ್ಲರೂ ನನ್ನ ಜೊತೆ ಮಾತಾಡಲಿಕ್ಕೆ ಹೆದರುತ್ತಾರೆ. ಏನೊ ತೊಂದರೆ ಬರುತ್ತೆ ಅಂತ ತಪ್ಪಿಸಿಕೊಳ್ಳುವಂತೆ ನನ್ನನ್ನು ದೂರ ಇಡುತ್ತಾರೆ. ಇದು ನಿಜಕ್ಕೂ ಕಷ್ಟ. ನಾಳೆ ಒಂದು ತೀರ್ಮಾನಕ್ಕೆ ಬಂದೇ ಬರ್ತೇನೆ, ಸರ್" ಶ್ಯಾಮಲ ಹೇಳುತ್ತಿದ್ದುದು ಸುಮಾಗೆ ಕೇಳಿತು. ಕೆಲಸ ಮುಗಿಸಿ ಕ್ಯಾಬಿನ್‌ನಿಂದ ಹೊರಬಂದಾಗ ಆಫೀಸಿನಲ್ಲಿ ಶ್ಯಾಮಲ ಇರಲಿಲ್ಲ.

"ಶ್ಯಾಮಲಾಗೆ ಯಾಕೆ ಹೀಗೆ ಮಾತಾಡಿದೆ ?" ಶಾರದಮ್ಮ ಕೇಳಿದರು.

ತನ್ನನ್ನು ಉಳಿಸಿಕೊಳ್ಳಬೇಕಾದರೆ ತಾನು ಹೀಗೆ ಮಾತನಾಡುವುದು ಅನಿವಾರ್ಯವಾಗಿತ್ತು ಎಂದು ಸುಮಾ ಹೇಳಿದಾಗ, ಅವರಿಗೆ ಅರ್ಥವಾಗಲಿಲ್ಲ. ಶ್ಯಾಮಲ ಕೆಲಸಕ್ಕೆ ಬರಲು ಆರಂಭಿಸಿದ ಮೇಲೆ ಸಂಪಾದಕರು, ಅವಳ ವಿರುದ್ಧ ಕತ್ತಿ ಮಸೆಯುವ ಕೆಲಸ ಶುರು ಮಾಡಿದ್ದರು. ಅವಳಿಗೆ ಕ್ಯಾನ್ಸರ್ ಆಗಿರೋದು, ಆಸ್ಪತ್ರೆಗೆ ಸೇರಿರೋದನ್ನು ಅವಳೇ

ಖುದ್ದಾಗಿ ಸಂಪಾದಕರಿಗೆ ತಿಳಿಸಬೇಕಿತ್ತಂತೆ. ಆದರೆ ಅವಳು ತನ್ನ ಚೀಫ್‌ಗೆ ತಿಳಿಸಿದ್ದಳು. ಅವರನ್ನ ಆಕೆ ಬೇಕಂತಲೇ ಕಡಿಮೆಯಾಗಿ ನೋಡಿದ್ದಾಳೆಂದು ಅವರು ತಿಳಿದುಕೊಂಡಿದ್ದರು. ಕೇವಲ ಅವರನ್ನು ಸಂತೋಷಪಡಿಸಲಿಕ್ಕಾಗಿ, ಶ್ಯಾಮಲನ ಕೆಲವು ಮಾತುಗಳನ್ನು ಎತ್ತಿಕೊಂಡು ಕೆಲವರು ಅವರಿಗೆ ರಂಗುರಂಗಾಗಿ ಒಪ್ಪಿಸುತ್ತಿದ್ದುದನ್ನು ಸುಮಾ ಕೇಳಿದ್ದಳು. ಜೊತೆಗೆ ಸಂಪಾದಕರು ಅವಳನ್ನು ಗಮನಿಸುತ್ತಿರಲಿಕ್ಕೆಂದೇ ಇಬ್ಬರನ್ನು ಕೆಲಸಕ್ಕೆ ನೇಮಿಸಿದರು. ಇದು ಅಲ್ಪ-ಸ್ವಲ್ಪ ಗೊತ್ತಾದದ್ದೇ ವಿಶೇಷವಾಗಿ ಮಹಿಳೆಯರು ಶ್ಯಾಮಲಾಳನ್ನು ದೂರ ಇಟ್ಟರು. ಅವಳು ಮಾತಾಡಿದರೂ ಸಂಪಾದಕರು ಗದರಬಹುದೆಂದು ಭಯಪಡುತ್ತಿದ್ದರು. ಶ್ಯಾಮಲಾಗೆ ಚುಚ್ಚಿಕೊಡಬಹುದು ಎಂಬ ಗುಮಾನಿ ಸಂಪಾದಕರಿಗೆ ತನ್ನ ಮೇಲೆ ಇರುವುದು ಸುಮಾಗೆ ಗೊತ್ತಾಗಿತ್ತು. ಇದನ್ನೇ ಮುಂದಿಟ್ಟುಕೊಂಡು ಬೇರೆ ಊರಿಗೆ ವರ್ಗ ಮಾಡಿದರೆ...ಗತಿ ಏನು ? ಅತ್ತೆಯನ್ನು, ಮಗುವನ್ನು ನೋಡಿಕೊಂಡು ಸತೀಶ ಹೇಗೆ ಕೆಲಸ ಮಾಡಬಹುದು, ತಾನಾದರೂ ಸಂಸಾರ ಬಿಟ್ಟು ಹೇಗಿರಲು ಸಾಧ್ಯ ? ಗೆಳತಿಯ ಕಷ್ಟ ನೋಡಬೇಕು, ನಿಜ. ಆದರೆ ಮೊದಲು ತನ್ನ ಅನುಕೂಲಗಳನ್ನು ನೋಡಿಕೊಳ್ಳಲೇಬೇಕು. ಸಂಪಾದಕರ ಕೋಪ ಇಳಿಯುವವರೆಗಾದರೂ ಶ್ಯಾಮಲಳಿಂದ ದೂರ ಉಳಿಯಬೇಕು ಎಂದು ಸುಮಾ ನಿರ್ಧರಿಸಿದ್ದಳು. ಶ್ಯಾಮಲಳಿಗೆ ಇದನ್ನು ತಿಳಿಸಬೇಕು ಎಂದು ಯೋಚಿಸುತ್ತಿದ್ದಳು. ಆದರೆ ಇಷ್ಟು ಕಟುವಾಗಿ ಅವಳನ್ನು ಬದಿಗೆ ಸರಿಸುವ ಯೋಚನೆಯಂತೂ ಸುಮಾಳಿಗೆ ಖಂಡಿತಾ ಇರಲಿಲ್ಲ. ಈ ವರ್ಷ ಪ್ರಮೋಷನ್ ಬರಬೇಕು. ಅದನ್ನು ತಪ್ಪಿಸಿಬಿಟ್ಟರೆ, ತನಗಿಂತ ಜ್ಯೂನಿಯರುಗಳ ಕೈಕೆಳಗೆ ಕೆಲಸ ಮಾಡಬೇಕಾಗಬಹುದು ಎಂದೆಲ್ಲ ಸುಮಾ ಈ ಒಂದು ವಾರದಿಂದ ಯೋಚಿಸಿ ಶ್ಯಾಮಲಳನ್ನು ನಿರ್ಲಕ್ಷಿಸಲು ಪ್ರಯತ್ನಿಸಿದ್ದಳು. ಶ್ಯಾಮಲಳಿಗೆ ನೈತಿಕ ಬೆಂಬಲ ಕೊಟ್ಟರೆ, ಅವಳೊಡನೆ ಓಡಾಡಿದರೆ ಇನ್‌ಕ್ರಿಮೆಂಟ್ ತಪ್ಪಿಹೋಗಬಹುದು, ಟ್ರಾನ್ಸ್‌ಫರ್ ಆಗಬಹುದು ಎಂದು ಕೆಲವರು ತೀರ್ಮಾನಿಸಿಯೂ ಬಿಟ್ಟಿದ್ದರು.

ವಾಸ್ತವ ವಿಚಾರ ತಿಳಿದಾಗ, ಶಾರದಮ್ಮ ಮೌನಿಯಾದರು. ಸುಮಾ ಒತ್ತಾಯಿಸಿದಾಗ, "ನಿನ್ನ ಮಟ್ಟಿಗೆ ನಿನ್ನ ಆಲೋಚನೆ ಸರಿಯಾಗಿದೆ. ಆದರೆ ಇದರಿಂದ ತಪ್ಪಿಸಿಕೊಳ್ಳಲು ಇಷ್ಟು ನಿಷ್ಠುರ ಮಾತು ಬೇಕಿರಲಿಲ್ಲ. ಇಲ್ಲಿ ಬೇಡ, ಮನೆಗೆ ಬಾ, ಮಾತಾಡೋಣ ಎಂದು ಒಂದು ಮಾತು ಹೇಳಿದ್ದರೂ ಆ ಮಗುವಿಗೆ ಸಮಾಧಾನ ಇರುತ್ತಿತ್ತಲ್ಲ. ಅದು ಬೇರೆ, ಕ್ಯಾನ್ಸರ್ ಆದವಳು" ಎಂದರು ಶಾರದಮ್ಮ.

"ತಪ್ಪು ಮಾಡಿಬಿಟ್ಟೆ ಅಮ್ಮ. ತುಂಬ ತಪ್ಪು ಮಾಡಿಬಿಟ್ಟೆ." ಸುಮಾ ಅತ್ತೆ ಕೈಯನ್ನು ತನ್ನ ಕೆನ್ನೆಗೆ ಸವರಿಸಿಕೊಂಡು ಹೇಳಿದಳು. ಸತೀಶ ಬಂದ ಕೂಡಲೇ, ಶ್ಯಾಮಲಾಳ ಮನೆಗೆ ಹೋಗಿ ಕ್ಷಮೆ ಕೇಳುವುದೆಂದು ಸುಮಾ ಯೋಚಿಸಿದಳು. ಶಾರದಮ್ಮನೂ ಇದೇ ಸರಿಯಾದ ದಾರಿ ಎಂದು ಹೇಳಿದರು. ಸತೀಶ ಮನೆಗೆ ಬಂದಾಗ ರಾತ್ರಿ ಹನ್ನೊಂದಾಗಿತ್ತು. ಈ ರಾತ್ರಿ ಹೋಗುವುದು ಸರಿಯಲ್ಲವೆಂದು, ಬೆಳಿಗ್ಗೆ ಆಫೀಸಿಗೆ ಹೋಗುವ ಮೊದಲು, ಶ್ಯಾಮಲಳ ಮನೆಗೆ ಹೋಗುವುದೆಂದುಕೊಂಡಳು. ಕ್ಷಮೆ ಎಲ್ಲವನ್ನೂ ಸರಿ ಮಾಡುತ್ತದೆ, ಗುಡ್ಡವನ್ನು ಕರಗಿಸಿಬಿಡುತ್ತದೆ ಎಂದು ಶಾರದಮ್ಮ ಹೇಳಿದಾಗ, ಸುಮಾಗೆ ಸ್ವಲ್ಪ ಹಗುರವೆನಿಸಿತು. ಬೆಳಗಾಗುತ್ತಿದ್ದಂತೆ ಸುಮಾ ಸತೀಶನಿಗೆ, ನರ್ಸ್ ಬರುವವರೆಗೂ ಮನೆಯಲ್ಲಿ ಇರಲು ಹೇಳಿ, ಶ್ಯಾಮಲಳ ಮನೆಗೆ ಹೋದಳು.

ಇವತ್ತು ಎಲ್ಲವನ್ನೂ ಶ್ಯಾಮಲಳಿಗೆ ವಿವರಿಸಿ, ಕ್ಷಮೆ ಕೇಳಬೇಕು. ಅವಳಿಗೆ ಆಯಾಸ ಆಗದಂತೆ, ಟೆನ್ಷನ್ ಹೆಚ್ಚಾಗದಂತೆ ನೋಡಿಕೊಂಡು, ಮನೆಯಲ್ಲಿ ತನಗಿರುವ ಜವಾಬ್ದಾರಿ, ಆಫೀಸಿನಲ್ಲಿ ತನಗಿರುವ ಸ್ಥಾನ-ಮಾನವನ್ನು ನಿಧಾನವಾಗಿ ಹೇಳಿ, ಕ್ಷಮೆ ಕೇಳಲೇಬೇಕು ಅಂದುಕೊಂಡಳು, ಸುಮಾ.

ಶ್ಯಾಮಲಳ ಮನೆ ಬಾಗಿಲಿಗೆ ಬೀಗ ಹಾಕಿತ್ತು. ಇಷ್ಟು ಬೆಳಿಗ್ಗೆ ಎಲ್ಲಿಗೆ ಹೋಗಿರಬಹುದು ? ಏನಾದರೂ ಚೆಕಪ್ ಅಂತ ಆಸ್ಪತ್ರೆಗೆ ಹೋಗಿರಬಹುದೆ ಅಂದುಕೊಂಡು, ಪಕ್ಕದ ಮನೆಯವರನ್ನು ಕೇಳಿದಳು. "ನಿನ್ನೆ ರಾತ್ರಿಯೇ ಆಸ್ಪತ್ರೆಗೆ ಹೋದರಮ್ಮ. ಶ್ಯಾಮಲಳಿಗೆ ಬಿಪಿ ಲೊ ಆಗಿದೆ ಅಂತ ಅವಳ ಅಮ್ಮ ಹೇಳುತ್ತಿದ್ದರು. ಹಿಂದೆ ಅಡ್ಮಿಟ್ ಆಗಿದ್ದರಲ್ಲ, ಅದೇ ಆಸ್ಪತ್ರೆಗೆ ಹೋಗಿದ್ದಾರೆ" ಹೇಳಿದರು. ಸುಮಾ ಆಸ್ಪತ್ರೆಗೆ ಹೋದಳು. ಹಿಂದಿನ ಸಲ ಮೂರನೆ ಮಹಡಿಯಲ್ಲಿನ ವಾರ್ಡಿನಲ್ಲಿದ್ದಳು. ಈಗ ಮೊದಲ ಮಹಡಿ ವಾರ್ಡಿನಲ್ಲಿ ಸೇರಿಸಿದ್ದಾರೆ.

ವಾರ್ಡ್ ಬಾಗಿಲು ಹಾಕಿತ್ತು. ತೆಗೆಯುವುದೋ ಬೇಡವೋ ಎಂದು ಯೋಚಿಸುತ್ತ ನಿಂತಳು. ಪಕ್ಕದ ವಾರ್ಡಿನಿಂದ ಹೊರಬಂದ ನರ್ಸ್, ಒಳಗೆ ಹೋಗಬಹುದೆಂದು ಸೂಚಿಸಿದಳು. ಸದ್ದಾಗದಂತೆ ಮೆಲ್ಲಗೆ ಬಾಗಿಲು ಸರಿಸಿದ ಸುಮಾ ಮಂಚದ ಪಕ್ಕಕ್ಕೆ ಬಂದು ನಿಂತಳು. ಶ್ಯಾಮಲನ ತಾಯಿ ಕಂಗೆಟ್ಟಂತೆ ಕಾಣುತ್ತಿದ್ದರು. ಸುಮಾಳನ್ನು ನೋಡಿದ ಕೂಡಲೆ ಉಕ್ಕಿ ಬರುತ್ತಿದ್ದ ದುಃಖವನ್ನು ಅದುಮಿಟ್ಟುಕೊಳ್ಳಲು ಹೆಣಗುತ್ತಿದ್ದರು. ಸುಮಾ ಅವರನ್ನು ತಬ್ಬಿಕೊಂಡು ಸಮಾಧಾನ ಮಾಡಿ, ಬೆನ್ನು ತಟ್ಟಿದಳು. ಶ್ಯಾಮಲ ಇದ್ಯಾವುದರ ಪರಿವೆಯೂ ಇಲ್ಲದಂತೆ ಮಲಗಿದ್ದಳು. ಮೈಯೆಲ್ಲಾ ಪೈಪು ಜೋಡಿಸಿಕೊಂಡು ಮಲಗಿರುವಂತೆ ಸುಮಾಗೆ ತೋರುತ್ತಿದ್ದಳು.

"ನಿನ್ನೆ ಆಫೀಸಿನಿಂದ ಬರುವಾಗ ಚೆನ್ನಾಗಿಯೇ ಇದ್ದಳಮ್ಮ, ಶ್ಯಾಮಿ. ಊಟ ಮಾಡಿದ್ದೆ ವಾಂತಿ ಶುರುವಾಯಿತು. ಇನ್ನೇನು ಗ್ರಹಚಾರ ಕಾದಿದೆಯೊ ಅಂತ ಮೈ ಮುಟ್ಟಿ ನೋಡಿದೆ. ಕೆಂಡದ ಹಾಗೆ ಸುಡುತ್ತಿತ್ತು. ಡಾಕ್ಟರಿಗೆ ಫೋನು ಮಾಡಿದೆ. ಮನೆಯಲ್ಲಿ ಇರೋದು ನಾನೊಬ್ಬಳೆ. ಗಾಬರಿ ಬೇರೆ. ಡಾಕ್ಟರು ಬಂದು ನೋಡಿ, ಆಸ್ಪತ್ರೆಗೆ ಕೂಡಲೆ ಸೇರಿಸಲು ಹೇಳಿದ್ರು. ಬಿಪಿ ಲೊ ಇದೆ. ನಾರ್ಮಲ್ಲಿಗೆ ತರಲಿಕ್ಕೆ ಔಷಧಿ ಕೊಡುತ್ತಿದ್ದರು. ನಾನು ಇಲ್ಲೇ ಅವಳ ತಲೆ ಹತ್ತಿರ ಕುಳಿತ್ತಿದ್ದೆ. ಬೆಳಗಿನ ಜಾವದಲ್ಲಿ "ಅಮ್ಮಾ..." ಅಂತ ಕರೆದಳಮ್ಮ. ಏನಾದರೂ ಬೇಕೇನೊ ಅಂತ, ಅವಳ ಬಾಯಿ ಹತ್ರ ಕಿವಿ ಇಟ್ಟೆ. ಯಾಕೊ ಮುಖವನ್ನ ಪಕ್ಕಕ್ಕೆ ಹೊರಳಿಸಿದಳು. ನರ್ಸನ್ನು ಕರೆದುಕೊಂಡು ಬಂದೆ. ಜೊತೆಯಲ್ಲಿ ಡಾಕ್ಟರೂ ಬಂದರು." ಪ್ರಜ್ಞೆ ಹೋಗಿಬಿಟ್ಟಿದೆ. ಇವತ್ತೆ ಪ್ರಜ್ಞೆ ಬರಬಹುದು ಹೇಳಲಿಕ್ಕೆ ಆಗೋದಿಲ್ಲ ಅಂದರಮ್ಮ. ನನಗೋ ಕೈಕಾಲು ನಿಲ್ಲುತ್ತಿಲ್ಲ. ಮಕ್ಕಳಿಗೆಲ್ಲ ಫೋನು ಮಾಡಿ ತಿಳಿಸಿಬಿಟ್ಟೆ. ನೀನು ಆಫೀಸಿಗೆ ಹೋದಾಗ ಸಂಪಾದಕರಿಗೂ ಒಂದು ಮಾತು ಹೇಳಿಬಿಡಮ್ಮ" ಎಂದು ಹೇಳುತ್ತಾ ಶ್ಯಾಮಲಳ ತಾಯಿ ಗೊಳೋ ಎಂದು ಅತ್ತರು. ಸುಮಾ ಅವರನ್ನು ಸಮಾಧಾನ ಮಾಡಿ, ಅಲ್ಲಿದ್ದ ಕುರ್ಚಿಯಲ್ಲಿ ಕುಳ್ಳಿರಿಸಿ ಕುಡಿಯಲು ನೀರು ಕೊಟ್ಟಳು. ಧೈರ್ಯ ಕಳೆದುಕೊಳ್ಳಬಾರದೆಂದು ಸಮಾಧಾನ ಹೇಳಿದಳು.

ಶ್ಯಾಮಲಾ ಕಟ್ಟಿಗೆ ತುಂಡಿನಂತೆ ಮಲಗಿದ್ದಳು. ಅವಳನ್ನು ಕ್ಷಮೆ ಕೇಳಬೇಕು ಅಂದುಕೊಂಡ ದಿನವೇ ಹೀಗಾಗಬೇಕೆ ? ಎಂಥ ಗಾಢ ಮೌನವಹಿಸಿ ಮಲಗಿಬಿಟ್ಟಿದ್ದಾಳೆ ! ನಿನ್ನೆ ಆಫೀಸಿನಲ್ಲಿ ಮನಸ್ಸಿಗಾದ ನೋವಿನಿಂದ ಹೀಗೆಲ್ಲ ಆಗಿರಬಹುದೆ... ಹಾಗಿದ್ದಲ್ಲಿ ಅವಳ ಈ ಪ್ರಜ್ಞಾಹೀನ ಸ್ಥಿತಿಗೆ ತಾನು ಕೂಡ ಕಾರಣಳಾಗುತ್ತೇನಲ್ಲ... ಸುಮಾ ಶ್ಯಾಮಲಳನ್ನೇ ನೋಡುತ್ತಿದ್ದಳು. ನಂತರ ಬಾಗಿ, ಅವಳ ಕಿವಿ ಹತ್ತಿರ ಬಾಯಿ ಇಟ್ಟು, "ಶ್ಯಾಮಲ, ನಿನ್ನ ನೋಡಲಿಕ್ಕೆಂದೇ ಓಡಿ ಬಂದಿದ್ದೇನೆ. ನಿನ್ನ ಜೊತೆ ಮಾತಾಡಲಿಕ್ಕಾಗಿ ಬಂದಿದ್ದೇನೆ. ನನ್ನ ಮನಸ್ಸು ನೋವಿನಿಂದ ಮಡುಗಟ್ಟಿದಂತಾಗಿದೆ. ಮೋಡಗಳು ಡಿಕ್ಕಿ ಹೊಡೆದಾಗ ಮಳೆ ಹನಿಗಳು ಉದುರುತ್ತವಲ್ಲ... ಹಾಗೆ ನನ್ನ ಈ ಮಡುಗಟ್ಟಿದ ನೋವು ನಿನ್ನ ಮನಸ್ಸಿಗೆ ತಾಕಿದರೆ ನಾಲ್ಕು ಹನಿ ಉದುರುವಂತೆ 'ನಿನ್ನನ್ನು ಕ್ಷಮಿಸಿದೆ' ಎಂದು ಅಕ್ಷರಗಳ ಮಳೆ ಸುರಿಸುತ್ತೀಯ ?" ಸುಮಾ ಪಿಸುಗುಟ್ಟಿದಳು.

ನರ್ಸ್ ಬಂದು ನೋಡಿದವಳು, ದಡಬಡ ಓಡಿ ವೈದ್ಯರನ್ನು ಕರೆದುಕೊಂಡು ಬಂದಳು. ಸುಮಾ, ಶ್ಯಾಮಲನ ತಾಯಿ ಇಬ್ಬರನ್ನೂ ಸ್ವಲ್ಪ ಹೊತ್ತು ಹೊರಗಿರಲು ಹೇಳಿದರು. ಇನ್ನಿಬ್ಬರು ಡಾಕ್ಟರು, ನರ್ಸ್ ವಾರ್ಡ್ ಒಳಗೆ ಹೋದರು. ನಂತರ ಶ್ಯಾಮಲಳ ತಾಯಿಯನ್ನು ಒಳಗೆ ಕರೆದ ಡಾಕ್ಟರು, ಮನೆಯವರಿಗೆಲ್ಲ ಫೋನ್ ಮಾಡಿ ತಿಳಿಸಲು ಹೇಳುತ್ತಿದ್ದರು. ಸುಮಾ ಮಂಕಾಗಿ ಗೋಡೆಗೆ ಒರಗಿಕೊಂಡು ಮುಖ ಮುಚ್ಚಿಕೊಂಡಳು.


**ಕುಸುಮಾ ಶಾನಭಾಗ**

ಪ್ಲಾಟ್ ೧೩/೧೦, ೨ನೇ ಮಹಡಿ, ಎಂ.ಐ.ಜಿ.ಎಂ. ಬ್ಲಾಕ್

ಸರ್ಕ್ಯುಲರ್ ರೋಡ್, ಸಿ-೩, ನಂದಿನಿ ಲೇಔಟ್

ಬೆಂಗಳೂರು – ೫೬೦ ೦೯೬


## ಶ್ರಾವಣ

ಹುಣ್ಣಿಮೆಯಲಿ
ನದಿ ಕನ್ನಡಿಯಲಿ
ಮುಖ ನೋಡಿ
ಮುಗುಳ್ನಗುತ್ತವೆ
ಮೋಡ-ತುಂಡುಗಳು !


**ಶೋಭಾ ಪ್ರಮೋದ್**

ರಾಯಗಢ

ಇಪ್ಪತ್ತನೇ ಶತಮಾನದ ವಿಜ್ಞಾನ ದಾರ್ಶನಿಕರಲ್ಲಿ (ಫಿಲಾಸಫಿ ಆಫ್ ಸೈನ್ಸ್) ಥಾಮಸ್ ಕೂನ್‌ರದು (೧೯೨೨-೧೯೯೬) ಪ್ರಮುಖ ಹೆಸರು. ೧೯೬೨ರಲ್ಲಿ ಪ್ರಕಟವಾದ ಅವರ 'ದಿ ಸ್ಟ್ರಕ್ಚರ್ ಆಫ್ ಸೈಂಟಿಫಿಕ್ ರೆವ್ಯುಲುಷನ್ಸ್' ಕಳೆದ ಶತಮಾನದ ಜನಪ್ರಿಯ ಪುಸ್ತಕಗಳಲ್ಲೊಂದು.

ಸ್ಥೂಲವಾಗಿ ಕೂನ್‌ರ ವಿಜ್ಞಾನ ದರ್ಶನವನ್ನು ಹೀಗೆ ಸಂಗ್ರಹಿಸಬಹುದು. ಕಲೆ, ನೀತಿಶಾಸ್ತ್ರ, ವೈದ್ಯಶಾಸ್ತ್ರ, ತತ್ತ್ವಶಾಸ್ತ್ರ ಹೀಗೆ ಕೆಲವು ಜ್ಞಾನಶಾಖೆಗಳಲ್ಲಿ ವಿವಿಧ ಪಂಥಗಳಿವೆ. ಇಂತಹ ಅನೇಕತೆ ಅವುಗಳ ವೈಶಿಷ್ಟ್ಯವೂ ಹೌದು. ಇಂದು ವಿಜ್ಞಾನ ಎಂದು ನಾವು ಕರೆಯುತ್ತಿರುವ ಹಲವು ಜ್ಞಾನಶಾಖೆಗಳ ಸ್ಥಿತಿಯೂ ಕೆಲ ಶತಮಾನಗಳ ಹಿಂದೆ ಹೀಗೆಯೇ ಇತ್ತು. ಅವುಗಳಲ್ಲಿ ಹಲವು ಪಂಥಗಳು ಮಾನ್ಯತೆ ಪಡೆದಿದ್ದವು. ಉದಾಹರಣೆಗೆ, ಇಂದು ನಾವು ಭೌತವಿಜ್ಞಾನದ ಭಾಗವಾಗಿ ಓದುವ ಬೆಳಕಿನ ಸಿದ್ಧಾಂತದ ಬಗೆಗೆ ಪ್ರಾಚೀನ ಕಾಲದಿಂದ ೧೭ನೆಯ ಶತಮಾನದವರೆಗೆ ಒಂದೇ ಚಿಂತನೆಯಿರಲಿಲ್ಲ, ಬದಲಿಗೆ ಅನೇಕ ಸಂಪ್ರದಾಯಗಳಿದ್ದವು. ಕೆಲ ಸಂಪ್ರದಾಯಗಳಲ್ಲಿ ಬೆಳಕು ವಸ್ತುವೊಂದರಿಂದ ಹುಟ್ಟುವ ಕಣಗಳಾದರೆ, ಇನ್ನೂ ಕೆಲವು ಸಂಪ್ರದಾಯಗಳಲ್ಲಿ ಅದು ಕಣ್ಣು ಹಾಗೂ ವಸ್ತುಗಳ ಮಧ್ಯೆ ಮಾಧ್ಯಮದಲ್ಲಿ ಆಗುವ ಬದಲಾವಣೆ, ಇನ್ನೂ ಬೇರೆ ಸಂಪ್ರದಾಯಗಳಲ್ಲಿ ಬೇರೆ ಇನ್ನೇನೋ. ೧೭ನೆಯ ಶತಮಾನದಲ್ಲಿ ನ್ಯೂಟನ್‌ನ 'ಆಪ್ಟಿಕಾ' ಬೆಳಕಿನ ಅಧ್ಯಯನಕ್ಕೆ ಮೊದಲ ಬಾರಿಗೆ ಒಂದು ಮಾದರಿಯನ್ನು ಒದಗಿಸಿತು. ಹೀಗೆ ಮಾದರಿ ಪಡೆದ ಜ್ಞಾನಶಾಖೆ 'ಸಾಮಾನ್ಯ ವಿಜ್ಞಾನ'ವಾಗುತ್ತದೆ. ಇಲ್ಲಿಂದ ಮುಂದೆ ಈ ಜ್ಞಾನಶಾಖೆಯಲ್ಲಿನ ಆಚರಣೆಯಲ್ಲಿ ಅನೇಕತೆ ನಿಧಾನವಾಗಿ ಮಾಯವಾಗಿ ಅದು ಏಕರೂಪದ್ದಾಗುತ್ತದೆ. ಇಂದಿಗೂ ಸಮಾಜ ವಿಜ್ಞಾನದ ಬಹಳಷ್ಟು ಶಾಖೆಗಳು ಇಂತಹ ಏಕರೂಪತೆಯನ್ನು ಪಡೆದಿಲ್ಲ. ಅಲ್ಲಿ ಇಂದಿಗೂ ಆಚರಣೆಯಲ್ಲಿ ಅನೇಕತೆ ಇದೆ.



# ಥಾಮಸ್ ಕೂನ್‌ರ ವಿಜ್ಞಾನ ದರ್ಶನ

ಕೂನ್‌ರ ವಿಮರ್ಶಕರಲ್ಲಿ ಫೇಯರಾಬೆಂಡ್ ಅವರದು ವಿಶಿಷ್ಟ ಸ್ಥಾನ. ಅವರು ಕೂನ್ ಚಿಂತನೆಯ ಹಲವು ಆಯಾಮಗಳನ್ನು ಒಪ್ಪಿಕೊಳ್ಳುತ್ತಾರೆ. ಕೂನ್ ಸಾಮಾನ್ಯ ವಿಜ್ಞಾನವೇ ವಿಜ್ಞಾನದ ನಿಜ ಸ್ವರೂಪ ಎಂದು ಹೇಳಿದರೆ ಫೇಯರಾಬೆಂಡ್ ಕ್ರಾಂತಿಕಾರಿ ಹಂತವೇ ನಿಜವಾದ ವಿಜ್ಞಾನ ಎನ್ನುತ್ತಾರೆ. ನೀವು ಯಾವುದಾದರೂ ಒಂದು ವಿಜ್ಞಾನದ ಪದ್ಧತಿಯಲ್ಲಿನ ನಿಯಮ ತೋರಿಸಿಕೊಡಿ, ಅದನ್ನು ವಿಜ್ಞಾನ ಇತಿಹಾಸದಲ್ಲಿ ಎಲ್ಲಿ ಉಲ್ಲಂಘಿಸಲಾಗಿದೆ ಎಂದು ತೋರಿಸಿ ಕೊಡುತ್ತೇನೆ ಎಂದು ಸವಾಲು ಹಾಕುವ ಫೇಯರಾಬೆಂಡ್ ತಾನು ಪದ್ಧತಿ ಅರಾಜಕವಾದಿ ಎಂದು ಘೋಷಿಸಿಕೊಳ್ಳುತ್ತಾರೆ.

ಬಿ. ಎಂ. ಪ್ರದೀಪ್ ಕುಮಾರ್

### ಮಾತೃಕೆ ಮತ್ತು ಸಾಮಾನ್ಯ ವಿಜ್ಞಾನ

ಪ್ಯಾರಡೈಮ್ ಅಥವಾ ಜ್ಞಾನಶಿಸ್ತಿನ ಮಾತೃಕೆ ಎಂದರೆ ಜ್ಞಾನಶಾಖೆಯೊಂದರ ಉನ್ನತ ಸಾಧನೆ. ಅರಿಸ್ಟಾಟಲ್‌ನ 'ಫಿಸಿಕಾ' (ಚಲನೆಗೆ ಸಂಬಂಧಿಸಿದಂತೆ), ಟಾಲೆಮಿಯ 'ಅಮಾಲ್ಗಜೆಸ್ಟ್' (ಖಗೋಳಶಾಸ್ತ್ರದ ಭೂಕೇಂದ್ರ ಸಿದ್ಧಾಂತ, ಪ್ರತಿಪಾದಕ ಸಿದ್ಧಾಂತ) ನ್ಯೂಟನ್‌ನ 'ಪ್ರಿನ್ಸಿಪಿಯಾ' ಮತ್ತು 'ಆಪ್ಟಿಕಾ', ಡಾರ್ವಿನ್‌ನ 'ಆರಿಜನ್ ಆಫ್ ಸ್ಪೀಷೀಸ್'ನಂತಹ ಮಹತ್ಸಾಧನೆಗಳು ಇದಕ್ಕೆ ಜನಪ್ರಿಯ ಉದಾಹರಣೆಗಳು. ಪ್ಯಾರಡೈಮ್ ಅಥವಾ ಮಾತೃಕೆ ಮುಖ್ಯವಾಗಿ ಎರಡು ಗುಣಗಳನ್ನು ಹೊಂದಿರಬೇಕು ಎನ್ನುತ್ತಾರೆ ಕೂನ್. ಒಂದು, ಇದುವರೆಗೂ ಹತ್ತು ಹಲವು ರೀತಿಯಲ್ಲಿ ಜ್ಞಾನಶಾಖೆಯ ರೂಢಿಯನ್ನು ನಿಭಾಯಿಸುತ್ತಿದ್ದ ಗುಂಪನ್ನು ತನ್ನತ್ತ ಸೆಳೆಯುವಷ್ಟು ಅದು ವಿಶೇಷವಾಗಿರಬೇಕು. ಅಲ್ಲದೆ, ಹೀಗೆ ಸೆಳೆಯಲಾದ ಗುಂಪಿನ ಸದಸ್ಯರು ಬಿಡಿಸಲು ಸವಾಲಾಗಿರುವ ಹಲವು ಸಮಸ್ಯೆಗಳನ್ನು ಉಳಿಸಿಕೊಂಡಿರುವಷ್ಟು ಅದು ಮುಕ್ತವಾಗಿರಬೇಕು. ಬೇರೆ ಮಾತುಗಳಲ್ಲಿ ಹೇಳುವುದಾದರೆ ಅದು ಎಲ್ಲವನ್ನೂ ಬಿಡಿಸಿಟ್ಟ ಮಾದರಿಯಲ್ಲ, ಬದಲಿಗೆ, ಒಂದು ಮಾರ್ಗದರ್ಶಿಯಾಗುವ ಸಾಧ್ಯತೆಯನ್ನೂ ಹೊಂದಿರುತ್ತದೆ. ಇಂತಹ ಮಹತ್-ಸಾಧನೆಯು ವಿಜ್ಞಾನ ಶಾಖೆಯೊಂದರ ನಿಯಮ, ಸಿದ್ಧಾಂತ, ಅನ್ವಯಿಸುವ ರೀತಿ, ಉಪಕರಣಗಳ ಬಳಸುವ ಬಗೆಗಿನ ನಿಲುವು... ಹೀಗೆ ಜ್ಞಾನಶಾಖೆಯನ್ನು ಮುನ್ನಡೆಸುವ ಎಲ್ಲ ಆಯಾಮಗಳನ್ನೂ ಹೊಂದಿರುತ್ತದೆ ಎಂದು ವ್ಯಾಖ್ಯಾನಿಸುತ್ತಾರೆ ಕೂನ್.

ಹೀಗೆ ಮಾತೃಕೆಯೊಂದನ್ನು ಪಡೆದ ಜ್ಞಾನಶಾಖೆ ಪಕ್ವವಾಗುತ್ತದೆ. ಹೀಗೆ ಪಕ್ವವಾಗಲು

ಕಾಣಿಸಿದ ನಾಲ್ಕು ನಿಯಮಗಳು ಮಾನ್ಯವಾಗಬೇಕು ಎಂದು ಕೂನ್ ಸೂಚಿಸುತ್ತಾರೆ. ಮೊದಲನೆಯದಾಗಿ, ಕಾರ್ಲ್ ಪಾಪರ್ ಸೂಚಿಸುವ ವಿಜ್ಞಾನ ಮತ್ತು ವಿಜ್ಞಾನೇತರ ಎಂಬ ವಿಭಜನೆ ಗೆರೆಯ ಪರೀಕ್ಷೆಯನ್ನು ಅದು ಗೆಲ್ಲಬೇಕು. ಎರಡನೆಯದಾಗಿ, ಕೆಲವು ನಿರ್ದಿಷ್ಟ ವಿದ್ಯಮಾನಗಳ ಗುಂಪು/ಉಪಗುಂಪಿನ ಬಗೆಗಿನ ಕೆಲವು ನಡವಳಿಕೆಗಳನ್ನು ಸತತವಾಗಿ ಮುಂಗಾಣುವ ಶಕ್ತಿ ಪಡೆದಿರಬೇಕು. ಉದಾಹರಣೆಗೆ, ಟಾಲೆಮಿಯ ಖಗೋಳಶಾಸ್ತ್ರವು ಆಗಸದಲ್ಲಿನ ಗ್ರಹಗಳ ಸ್ಥಾನದ ಬಗೆಗೆ ಅಂದಿನ ಅರಿವಿನ ಮಿತಿಯಲ್ಲಿ ಸಹಿಸಬಹುದಾದ ಮಿತಿಯೊಳಗೆ, ಸರಿಯಾಗಿ ಊಹಿಸಬಲ್ಲದಾಗಿತ್ತು. ಮೂರನೆಯದಾಗಿ, ಹೀಗೆ ಊಹಿಸುವ ತಂತ್ರಗಳ ಬೇರುಗಳು ಸಿದ್ಧಾಂತದಲ್ಲಿ ಇರಬೇಕು. ಸಿದ್ಧಾಂತ ಸಮರ್ಥನೆಯ, ಅದರ ಖಚಿತತೆ ಹಾಗೂ ವ್ಯಾಪ್ತಿಯನ್ನು ಹಿಗ್ಗಿಸುವ, ಮಿತಿಯನ್ನು ವಿವರಿಸುವ ಮೆಟಫಿಸಿಕಲ್ (ಆದಿಭೌತಿಕ ಅಥವಾ ಕೇವಲ ತರ್ಕದಿಂದಲೇ ಪಡೆದ) ಗ್ರಹಿಕೆಗಳು ಅದರ ಭಾಗವಾಗಿರಲೂಬಹುದು. ಕೊನೆಯದಾಗಿ, ಇಂತಹ ಊಹಿಸುವ (ಅಥವಾ ಕಣಿ ನುಡಿಯುವ) ತಂತ್ರಗಳ ಸುಧಾರಣೆ ವಿಜ್ಞಾನಿಗಳಿಗೆ ಸವಾಲಾಗಿರಬೇಕು.

ಹಾಗಾದರೆ, ಸಾಮಾನ್ಯ ವಿಜ್ಞಾನದ ಸಂಶೋಧನೆ ತೀರ ನೀರಸವಾದ ಕೆಲಸವೇ ? ನಿಜಾರ್ಥದಲ್ಲಿ ಮಾದರಿಯನ್ನು ಪ್ರಕೃತಿಗೆ ಅನ್ವಯಿಸುವ ಸಂಶೋಧನಾ ಪ್ರಕ್ರಿಯೆ ಯಾಂತ್ರಿಕವಲ್ಲ. ಹಲವು ಹತ್ತು ಸ್ಪಷ್ಟೀಕರಣ ಬೇಡುವ, ಹಲವು ಹೊಸ ಕ್ಷೇತ್ರಗಳಿಗೆ ಮಾದರಿ ಅನ್ವಯಿಸಲು ಸಾಧ್ಯವಿದ್ದೂ ನಡೆಯದಿದ್ದಲ್ಲಿ ಹಾಗೆ ನಡೆಸುವ ಯತ್ನ, ಹಾಗೆಯೇ ಹೊಸ ಹೊಸ ಉಪಕರಣಗಳನ್ನು ಬಳಸಿ ಅವಲೋಕನಗಳನ್ನು ಹೆಚ್ಚು ಹೆಚ್ಚು ನಿಖರಗೊಳಿಸುವ ಪ್ರಯತ್ನವೂ ಈ ಪ್ರಕ್ರಿಯೆಯ ಭಾಗವೇ. ಹೀಗಾಗಿ ವಿಜ್ಞಾನಿಗಳಿಗೆ ಮಾದರಿಯ ಒಳಗಿನ ಸಂಶೋಧನೆ ಸವಾಲಾಗುತ್ತದೆ. ಇಂತಹ ಸವಾಲುಗಳನ್ನು ಒಗಟುಗಳಿಗೆ ಹೋಲಿಸಬಹುದು ಎನ್ನುತ್ತಾರೆ ಕೂನ್. ಒಗಟಿನ ಮೂಲಗ್ರಹಿಕೆ ಮತ್ತು ಸಾಮಾನ್ಯ ವಿಜ್ಞಾನದ ಸವಾಲುಗಳ ನಡುವೆ ಒಂದು ಮುಖ್ಯ ಹೋಲಿಕೆ ಇದೆ. ಎರಡರಲ್ಲಿಯೂ ಒಗಟಿಗೆ ಉತ್ತರವಿದೆ ಮತ್ತು ಈ ಉತ್ತರ ಕಂಡುಹಿಡಿಯುವುದು ಉತ್ತರ ಹುಡುಕುವವನ ಬುದ್ಧಿಮತ್ತೆಯ ಹರಿತತೆಯನ್ನು ಅವಲಂಬಿಸಿದೆ ಎಂದು ಭಾವಿಸಲಾಗುತ್ತದೆ. ಸಾಮಾನ್ಯ ವಿಜ್ಞಾನದ ಸಂಶೋಧನೆಯಲ್ಲಿ ಒಗಟಿಗೆ ಉತ್ತರ ಎಂದರೆ ಇಂದು ಚಾಲ್ತಿಯಲ್ಲಿರುವ ಮಾತೃಕೆಯ ಒಳಗೆ ಉತ್ತರ ಎಂದು ಅರ್ಥ.

ನ್ಯೂಟನ್‌ನ ಸಿದ್ಧಾಂತದ ಆಧಾರದಿಂದ ಪಡೆದ ಚಂದ್ರ ಕಕ್ಷೆಗೂ ವಾಸ್ತವದ ವೀಕ್ಷಣೆಗೂ ಸಿದ್ಧಾಂತ ಪ್ರಕಟವಾದ ೬೦ ವರ್ಷಗಳ ನಿರಂತರ ಪ್ರಯತ್ನದಿಂದಲೂ ಹೊಂದಿಸಲಾಗುವುದಿಲ್ಲ. ಚಂದ್ರ ಕಕ್ಷೆಯ ಪುರಭೂಮಿ (ಭೂ ಸಮೀಪ ಬಿಂದು) ಸಿದ್ಧಾಂತದ ಊಹೆಯ ಅರ್ಧದಷ್ಟು ಇರುತ್ತದೆ. ಕೆಲವರು ನ್ಯೂಟನ್‌ನ ಪ್ರತಿಲೋಮ ವರ್ಗ ನಿಯಮವನ್ನು (ಇನ್ವರ್ಸ್ ಸ್ಕ್ವೇರ್ ಲಾ) ಬದಲಾಯಿಸಬೇಕೆಂದು ಭಾವಿಸುತ್ತಾರೆ. ಆದರೆ, ೧೭೫೦ರಲ್ಲಿ ವಿಜ್ಞಾನಿಯೊಬ್ಬನು ಗಣಿತ ಅನ್ವಯಿಸುವ ರೀತಿಯಲ್ಲಿರುವ ತಪ್ಪನ್ನು ತೋರಿಸಿಕೊಡುತ್ತಾನೆ. ಬಹಳಷ್ಟು ಸಲ ಮಾತೃಕೆಯ ಒಳಗಿನ ಸಂಶೋಧನೆಯೇ ಹೆಚ್ಚು ಉಪಯುಕ್ತ ಎಂದು ಇಂತಹ ಹಲವು ಉದಾಹರಣೆಗಳು ವಿಜ್ಞಾನಿಗಳಿಗೆ ಸೂಚಿಸುತ್ತಿರುತ್ತವೆ. ಸಮಸ್ಯೆಯೊಂದಕ್ಕೆ ಮಾದರಿ ಪರಿಹಾರ ಒದಗಿಸದಿದ್ದಲ್ಲಿ ಹೊಸತನ್ನು ಹುಡುಕುವ ಪ್ರಯತ್ನವೊಂದನ್ನು ಹೊರತುಪಡಿಸಿ ಸಾಮಾನ್ಯ ವಿಜ್ಞಾನದ ಎಲ್ಲ ಗುಣ, ಸ್ವಭಾವಗಳನ್ನು ವಿವರಿಸುತ್ತದೆ. ಹೀಗಾಗಿ ಮಾತೃಕೆಯಲ್ಲಿನ ಅಚಲ ನಂಬಿಕೆ ಸಾಮಾನ್ಯ ವಿಜ್ಞಾನದ ಮೂಲಭೂತ ಅಂಶವಾಗಿಬಿಡುತ್ತದೆ. ಇದರ ಇನ್ನೊಂದು ಪರಿಣಾಮ ಎಂದರೆ, ಮಾತೃಕೆ ಕೊಡುವ ಜಗತ್ತು ಹೀಗೆಯೇ ಇದೆ ಎಂಬ ಗೃಹೀತಗಳು ಈ ಚಿಂತನೆಯ ಅನಿವಾರ್ಯ ಭಾಗವಾಗಿರುತ್ತವೆ. ಈ ಕಾರಣಕ್ಕೆ ಪರೋಕ್ಷವಾಗಿ ವಿಶ್ವ ಹೀಗೆ ಇಲ್ಲ ಎಂಬ ನೇತ್ಯಾತ್ಮಕ ಚಿಂತನೆಯೂ ಸಹ ಇದರ ಭಾಗವೇ.

ಹಾಗಾದರೆ ಸಾಮಾನ್ಯ ವಿಜ್ಞಾನದ ಈ ಬದ್ಧತೆ ಅರಿವನ್ನು ವಿಸ್ತರಿಸುವಲ್ಲಿನ ವೇಗವರ್ಧಕ ಅಥವಾ ವೇಗ–ಹೆಚ್ಚಿಸುವ ಕೆಲಸವನ್ನು ಹೇಗೆ ಮಾಡಬಲ್ಲದು ? ಇದಕ್ಕೆ ಕೂನ್ ಕೊಡುವ ಕಾರಣ, ಪ್ರಕೃತಿಯ ವಿದ್ಯಮಾನದ ಒಂದು ಸಣ್ಣ , ಆಯ್ದ ಭಾಗವನ್ನು ಸೂಕ್ಷ್ಮವಾಗಿ, ವಿವರವಾಗಿ, ಶೋಧಿಸುವದರಿಂದ ಇದು ಸಾಧ್ಯವಾಗುತ್ತದೆ ಎಂಬುದು ಮಾತೃಕೆಯ ಬಗೆಗಿನ ಬದ್ಧತೆ, ಪರಿಕಲ್ಪನೆ, ಸಿದ್ಧಾಂತ, ಉಪಕರಣ, ಪದ್ಧತಿ ಇವುಗಳೆಲ್ಲವನ್ನೂ ಒಳಗೊಂಡ ಹಲವು ಆಯಾಮಗಳ ಸಂಕೀರ್ಣ ಬದ್ಧತೆ ಎನ್ನುತ್ತಾರೆ ಕೂನ್. ಹಿಂದೆ ಹಲವು ಪಂಥಗಳಿದ್ದಾಗ ಪ್ರತಿ ಸಂಶೋಧಕ ಗುಂಪೂ ಆ ಜ್ಞಾನಶಾಖೆಗೆ ಸಂಬಂಧಿಸಿದ ಎಲ್ಲವನ್ನೂ ರಚಿಸಿ, ವ್ಯಾಖ್ಯಾನಿಸಿಕೊಳ್ಳಬೇಕಿತ್ತು. ಮಾತೃಕೆ ಈಗ ಆ ಕೆಲಸ ಮಾಡುತ್ತದೆ. ಹೀಗಾಗಿ ಸಂಶೋಧನೆ ವೇಗ ಹೆಚ್ಚುತ್ತದೆ. ಹೀಗಲ್ಲದೆ ವಿಜ್ಞಾನದ ಬೆಳವಣಿಗೆಗೆ ಬೇರೆ ದಾರಿಯಿಲ್ಲ ಎನ್ನುವ ಕೂನ್ ಮಾದರಿಯಲ್ಲಿ ಅಚಲ ವಿಶ್ವಾಸ (ಅಥವಾ ಸಾಮಾನ್ಯ ವಿಜ್ಞಾನ) ಇಲ್ಲದಿದ್ದಲ್ಲಿ ವಿಜ್ಞಾನ ಕ್ರಾಂತಿಗಳೂ ಇಲ್ಲ ಎನ್ನುತ್ತಾರೆ.

**ಅಪಶ್ರುತಿ ಮತ್ತು ವೈಜ್ಞಾನಿಕ ಕ್ರಾಂತಿಗಳು**

ವಿಜ್ಞಾನಿಗಳು ಪ್ರಕೃತಿಯ ಬಗೆಗಿನ ಒಗಟುಗಳನ್ನು ಬಿಡಿಸಲು ಪ್ರಯತ್ನಿಸುತ್ತಾರೆ. ಹಲವು ಸಲ ಮಾತೃಕೆಯನ್ನು ಬಿಟ್ಟುಕೊಡುವುದಕ್ಕಿಂತ ಅದರೊಳಗೆ ಉತ್ತರ ಹುಡುಕುವುದು ಸುಲಭ ಎಂದು ಅವರ ಅನುಭವ ಹೇಳುತ್ತಿರುತ್ತದೆ. ಅತಿ ಕಡಿಮೆ ಸಂಖ್ಯೆಯ ಸಮಸ್ಯೆಗಳನ್ನು ಚಾಲ್ತಿಯಲ್ಲಿರುವ ಮಾತೃಕೆಯ ಪರಿಕಲ್ಪನಾ ಚೌಕಟ್ಟಿನಲ್ಲಿ ಸಂಗತವಾಗಿ, ವಿವರಿಸಲು ಸಾಧ್ಯವಾಗುವುದಿಲ್ಲ. ಪ್ರತಿಭಾವಂತ ವಿಜ್ಞಾನಿಗಳ ಬುದ್ಧಿಮತ್ತೆಗೂ ಇವು ಕಬ್ಬಿಣದ ಕಡಲೆಗಳಾಗುತ್ತವೆ. ಇವನ್ನು ಮಾದರಿಯ ಇಂಪಾದ ಸಂಗೀತದ ಅಪಶ್ರುತಿಗಳೆಂದು ಕರೆಯಬಹುದು. ಹೀಗೆ ಹೆಚ್ಚಿದ ಅಪಶ್ರುತಿಗಳು ಸಾಮಾನ್ಯ ವಿಜ್ಞಾನದ ಸಂಶೋಧನೆಯನ್ನು ಬಿಕ್ಕಟ್ಟಿಗೆ ತಳ್ಳುತ್ತವೆ. ಸರಾಗವಾಗಿ ಸಾಗುವ ಸಾಮಾನ್ಯ ವಿಜ್ಞಾನದ ಸಂಶೋಧನೆಗಳಿಗೆ ಅಡ್ಡಿಯಾಗುತ್ತವೆ.

ಟಾಲಮಿಯ ಭೂಕೇಂದ್ರ ಸಿದ್ಧಾಂತದ ಬಿಕ್ಕಟ್ಟನ್ನು ಜಿ. ಟಿ. ನಾರಾಯಣರಾವ್ (ಕೊಪರ್‌ನಿಕಸ್ ಕ್ರಾಂತಿಯಲ್ಲಿ) ಬಹಳ ಚೆನ್ನಾಗಿ ವಿವರಿಸಿದ್ದಾರೆ :

'ಮಾನವನ ಅರಿವಿಗೆ ಅಂದು ಬಂದ ಗ್ರಹಚಲನೆಯನ್ನು (ಟಾಲೆಮಿಯ ಭೂಕೇಂದ್ರ ಸಿದ್ಧಾಂತ) ಸಮರ್ಪಕವಾಗಿ ವಿವರಿಸಿತು, ಗ್ರಹಗಳ ಭವಿಷ್ಯ ವರ್ತನೆಯನ್ನು (ಚಲನೆ ಮುಂಗಾಣುವುದನ್ನು) ನಿಷ್ಕೃಷ್ಟವಾಗಿ (ಆ್ಯಕ್ಯುರೇಟ್/ಖಚಿತವಾಗಿ) ನಿರೂಪಿಸಬಲ್ಲ ಗಣಿತ ವರ್ಧನೆಗೆ ನೆರವೂ ಆಯಿತು. ಯಾವುದೇ ವ್ಯವಸ್ಥೆ – ಅಂದರೆ ಮಾನವರೂಪಿತ ಏರ್ಪಾಟು –ಯಶಸ್ವಿಯಾಗಲು ಬೇರೆ ಏನು ಬೇಕು ? ಟಾಲಮಿಯ ವ್ಯವಸ್ಥೆ ಪೂರ್ತಿ ತಪ್ಪು ಎಂದೂ ಇಂದು ಗೊತ್ತಿದೆ. ಇಂತಿದ್ದರೂ ಆ ವ್ಯವಸ್ಥೆಯ ಮುಗ್ಧ ತಾರ್ಕಿಕತೆ ಮತ್ತು ಸರಳ ಸಾಂಗತ್ಯ ಇಂದಿಗೂ ನಮ್ಮನ್ನು ಬೆರಗುಗೊಳಿಸುತ್ತವೆ.'

ಆದರೆ ನಂತರದಲ್ಲಿ ಆ ಸಿದ್ಧಾಂತಕ್ಕೆ ಹಲವು ತಾತ್ಕಾಲಿಕ ಹೊಂದಾಣಿಕೆಯ ತೇಪೆಗಳು, ಒತ್ತುಗಂಬಗಳು ಅನಿವಾರ್ಯವಾಗುತ್ತವೆ. ಟೈಕೋ ಬ್ರಾಹೆ ಕೊಡುವ ಬದಲೀ ವಿವರಣೆ ಇತರ ಗ್ರಹಗಳು ಸೂರ್ಯನನ್ನು ಸುತ್ತುತ್ತವೆ ಮತ್ತು ಸೂರ್ಯ ಭೂಮಿಯನ್ನು ಪರಿಭ್ರಮಿಸುತ್ತಾನೆ ಎಂದಾಗಿತ್ತು. ಕೊಪರ್‌ನಿಕಸ್‌ನ ಸೂರ್ಯಕೇಂದ್ರ ಸಿದ್ಧಾಂತ ತನ್ನ ಕಾಲ ಮೇಲೆ ನಿಂತುದು ಟೈಕೋ ಬ್ರಾಹೆಯ ನಿಖರ ಗ್ರಹಾವಲೋಕನಗಳ ಆಧಾರದಿಂದ ಹಾಗೂ ಅವನ್ನು ಬಳಸಿ ದೀರ್ಘವೃತ್ತದ ಚಲನೆಯನ್ನು ನಿರ್ಧರಿಸಿದ ಕೆಪ್ಲರ್‌ನ ದುಡಿಮೆಯಿಂದ. ಟಾಲಮಿಯ ಗ್ರಹಚಲನೆಗೆ ಅವಶ್ಯಕವಾದ ಎರಡು ವೃತ್ತಗಳ ಬದಲು ಕೊಪರ್‌ನಿಕಸ್‌ನ ಸಿದ್ಧಾಂತಕ್ಕೆ ಒಂದೇ ವೃತ್ತ ಸಾಕಾಗಿತ್ತು ಎಂಬರ್ಥದಲ್ಲಿ ಖಂಡಿತ ಹೊಸ ದೃಷ್ಟಿಕೋನ ಸರಳವಾಗಿತ್ತು. ಆದರೆ, ಅದು ಬಗೆಹರಿಸುವ ಸಮಸ್ಯೆಗಿಂತ, ಭೂಚಲನೆಯಿಂದ ಉಂಟಾದ ಪರಿಣಾಮಗಳ ಬಗೆಗೆ ಏಳುವ ಪ್ರಶ್ನೆಗಳೇ ಬಹುಶಃ ಅಂದು ಹೆಚ್ಚಿದ್ದವು. ೭ನೆಯ ಶತಮಾನದ ಬ್ರಹ್ಮಗುಪ್ತನು ಸಹ ಆರ್ಯಭಟನ ಭೂಚಲನೆಯ ನಿಲುವನ್ನು ವಿರೋಧಿಸುತ್ತಾ , ಹಾಗಿದ್ದಲ್ಲಿ 'ಹಕ್ಕಿಗಳು ತಮ್ಮ ಗೂಡಿಗೆ ಸೇರುತ್ತಿರಲಿಲ್ಲ' ಎನ್ನುತ್ತಾನೆ. ವಾಸ್ತವದಲ್ಲಿ ಗ್ರಾವಿಟೇಶನ್ (ಗುರುತ್ವಾಕರ್ಷಣೆ) ವಿವರಣೆ ಇಲ್ಲದೆ ಸೂರ್ಯ ಕೇಂದ್ರ ಸಿದ್ಧಾಂತ ಅಷ್ಟೊಂದು ಅಸಂಗತವಾಗಿ ಕಾಣುತ್ತಿತ್ತು.

ಬಿಕ್ಕಟ್ಟಿನಲ್ಲಿರುವ ಸಾಮಾನ್ಯ ವಿಜ್ಞಾನದಲ್ಲಿ ಅಪಶ್ರುತಿಗಳು ಸಂಚಯವಾಗುತ್ತಾ (ಹೆಚ್ಚುತ್ತಾ) ಹೋದಂತೆ ಹಳೆಯ ಮಾತೃಕೆ ನಿರ್ಮಿಸಿದ ಪರಿಕಲ್ಪನಾ ಚೌಕಟ್ಟು ಅಲುಗಾಡತೊಡಗುತ್ತದೆ, ಶಿಥಿಲವಾಗುತ್ತದೆ. ಚಾಲ್ತಿಯಲ್ಲಿರುವ ಮಾತೃಕೆಯ ಅನೇಕ ಆವೃತ್ತಿಗಳು ಬಳಕೆಗೆ ಬರುತ್ತವೆ. ವೈಜ್ಞಾನಿಕ ಕ್ರಾಂತಿಗೆ ಅಗತ್ಯವಾದ ದತ್ತಾಂಶ ಆಗಲೇ ಲಭ್ಯವಿದ್ದು, ಅದು ವಿಜ್ಞಾನ ಪ್ರಜ್ಞೆಯ ಅಂಚಿನಲ್ಲಿರುತ್ತದೆ. ಬಿಕ್ಕಟ್ಟು ಇದನ್ನು ಕೇಂದ್ರಕ್ಕೆ ರವಾನಿಸುತ್ತದೆ ಮತ್ತು ದೃಷ್ಟಿಕೋನದ ಕ್ರಾಂತಿಕಾರಕ ಬದಲಾವಣೆ ಅದನ್ನು ಹೊಸ ರೀತಿಯಲ್ಲಿ ನೋಡಲು ಅನುವು ಮಾಡಿಕೊಡುತ್ತದೆ. ವಿಜ್ಞಾನಶಾಖೆ ಬಿಕ್ಕಟ್ಟಿನಲ್ಲಿದೆ ಎಂದರೆ ಅರ್ಥ ಯಾವ ಮಾತೃಕೆಯಿಂದಾಗಿ ಇದುವರೆಗೆ ಪ್ರಕೃತಿಯ ಅರ್ಥೈಸುವಿಕೆ ಸರಾಗವಾಗಿ ಸಾಗುತ್ತಿತ್ತೋ ಅದೇ ಮಾದರಿ ಇಂದು ಪರಿಣಮಿಸಿದೆ ಎಂದು ವಿಜ್ಞಾನಿಗಳು ಭಾವಿಸತೊಡಗುವುದು. ಇದು ವೈಜ್ಞಾನಿಕ ಕ್ರಾಂತಿಯ ಮುನ್ಸೂಚನೆ, ಬೀಜಾಂಕುರ.

ವೈಜ್ಞಾನಿಕ ಕ್ರಾಂತಿಗಳು 'ಸಂಪ್ರದಾಯಸ್ಥ ವಿಜ್ಞಾನದ ಸಂಪ್ರದಾಯೇತರ ಪೂರಕಗಳು.' ಕಾಲಾವಧಿಯ ದೃಷ್ಟಿಯಿಂದ ವೈಜ್ಞಾನಿಕ ಕ್ರಾಂತಿಗಳು ಕಡಿಮೆ ಸಮಯ ಇರುತ್ತವೆ. ಹೀಗಾಗಿ ಸಾಮಾನ್ಯ ವಿಜ್ಞಾನವೇ ವಿಜ್ಞಾನದ ಗುಣಲಕ್ಷಣಗಳನ್ನು ಹೆಚ್ಚು ಪ್ರತಿನಿಧಿಸುತ್ತದೆ. ಆದರೆ, ಸಮಸ್ಯೆಯ ಬಗೆಗಿನ ಹೊಸ ದೃಷ್ಟಿಕೋನದ ಸ್ವಾತಂತ್ರ್ಯ ಸಾಮಾನ್ಯ ವಿಜ್ಞಾನದಲ್ಲಿ ಕಂಡುಬರುವುದಾದರೂ, ಅದು ಮಾತೃಕೆಯ ಒಳಗಿನ ಸಾಪೇಕ್ಷ / ರಿಲೆಟಿವ್ ಸ್ವಾತಂತ್ರ್ಯ ಮಾತ್ರ. ಮಾತೃಕೆಯನ್ನು ಪ್ರಶ್ನಿಸುವ ಸ್ವತಂತ್ರ ಅಲ್ಲಿ ಗೈರುಹಾಜರು. ಅಪಶ್ರುತಿಗಳು ತಮ್ಮಿಂದ ತಾವೇ ಚಾಲ್ತಿಯಲ್ಲಿರುವ ಮಾದರಿಯ ತಿರಸ್ಕರಣೆಗೆ ಕಾರಣವಾಗುವುದಿಲ್ಲ. ವಿಜ್ಞಾನಿಗಳ ಸಮುದಾಯಕ್ಕೆ ಬೇರೊಂದು ಬದಲೀ ಮಾತೃಕೆಯೊಂದು ಒಪ್ಪಿಗೆಯಾಗುವವರೆಗೂ ಹಳೆಯ ಮಾತೃಕೆ ಎಲ್ಲಾ ಅಪಶ್ರುತಿಗಳ ನಡುವೆಯೂ ಉಳಿದುಕೊಂಡು ಬಂದಿರುತ್ತದೆ. ಈ ಹೊಸ ಮಾದರಿಯನ್ನು ಆಯ್ಕೆ ಮಾಡುವ ಸಂದರ್ಭದಲ್ಲಿ ವಿಜ್ಞಾನದ ಚರ್ಚೆಗಳು ಕ್ರಾಂತಿಕಾರವಾಗುತ್ತವೆ ಎನ್ನುತ್ತಾರೆ ಕೂನ್.

ಹೊಸ ಮಾತೃಕೆಯ ಆಯ್ಕೆಯಲ್ಲಿ ವಿಜ್ಞಾನಿಗಳು ಅದನ್ನು ಕೇವಲ ಪ್ರಕೃತಿಯೊಂದಿಗೆ ಮಾತ್ರ ಹೋಲಿಸಿ ನಿರ್ಧರಿಸುವುದಿಲ್ಲ. ಹಳೆಯ ಮಾತೃಕೆ, ಹೊಸ ಮಾತೃಕೆ ಮತ್ತು ಪ್ರಕೃತಿಗಳ ನಡುವಿನ ಸಂಕೀರ್ಣ ಹೋಲಿಕೆ ಇದು. ಹೊಸ ಮಾತೃಕೆ ಪಡೆಯುವುದರೊಂದಿಗೆ ಹಳೆಯ ಮಾತೃಕೆ ಗುಜರಿ ಸೇರುತ್ತದೆ. ವಿಜ್ಞಾನ ಇತಿಹಾಸಕ್ಕಲ್ಲದೆ ಬೇರೆ ಯಾವುದಕ್ಕೂ ಉಪಯೋಗವಿಲ್ಲದಂತಾಗುತ್ತದೆ. ಈ ಕಾರಣಕ್ಕೆ ಚಾಲ್ತಿಯಲ್ಲಿರದ ಮಾತೃಕೆಯ ಆಧಾರ ಕೃತಿಗಳನ್ನು ಮೂಲದಲ್ಲಿ ಯಾವ ವಿಜ್ಞಾನಿಗಳೂ ಓದುವುದಿಲ್ಲ. ಹಳೆಯ ಮತ್ತು ಹೊಸ ಮಾದರಿಗಳು ನೋಡುವ ದೃಷ್ಟಿಕೋನ ವಿಭಿನ್ನ. ಅವೇ ಪದಗಳು ಬಳಸಿದರೂ ಅವು ಬೇರೆ ಅರ್ಥ ಪಡೆದಿರುತ್ತವೆ. ಈ ಕಾರಣಕ್ಕೆ ಇವುಗಳ ಮಧ್ಯೆ ಸಂವಾದ ಸಾಧ್ಯವಾಗುವುದಿಲ್ಲ ಅಥವಾ ಭಾಗಶಃ ಮಾತ್ರ ಸಾಧ್ಯವಾಗುತ್ತದೆ ಎನ್ನುತ್ತಾರೆ ಕೂನ್. ಹಲವು ಸಲ ವಿಜ್ಞಾನಿಗಳಿಗೆ ಹಳೆಯ ಮಾದರಿಯ ದೃಷ್ಟಿಕೋನದಿಂದ ಹೊರಬರಲು ಸಾಧ್ಯವಾಗುವುದಿಲ್ಲ. ಪ್ರೀಸ್ಟ್ಲಿ ಕೊನೆಯವರೆಗೂ ಫ್ಲಾಜಿಸ್ಟಾನ್ (ರಸಾಯನಶಾಸ್ತ್ರದಲ್ಲಿ ಆಕ್ಸಿಜನ್ ಮಾತೃಕೆಗೂ ಮುಂಚಿನ ಗ್ರಹಿಕೆ) ಸಿದ್ಧಾಂತಕ್ಕೇ ಅಂಟಿಕೊಳ್ಳುತ್ತಾನೆ. ಪ್ಲಾಂಕ್ ತಾವೇ ಕಂಡುಹಿಡಿದ (ಆವಿಷ್ಕರಿಸಿದ) ಕ್ವಾಂಟಂ ಪರಿಕಲ್ಪನೆಯನ್ನು ಕ್ಲಾಸಿಕಲ್ ಸಿದ್ಧಾಂತಕ್ಕೆ ಹೊಂದಿಸುವ ವಿಫಲ ಪ್ರಯತ್ನ ಮಾಡುತ್ತಾರೆ. ಇದರ ಬಗೆಗೆ ಹೇಳುತ್ತಾ, "ನನ್ನ ಹಲವು ಸಹಚರರು ಇದನ್ನು ದುಃಖದಾಯಕ ಎಂದು ಭಾವಿಸುತ್ತಾರೆ. ಆದರೆ, ನಾನು ಹಾಗೆ ಭಾವಿಸುವುದಿಲ್ಲ. ಇಂತಹ ಪ್ರಯತ್ನದಿಂದ ಪಡೆದ ಚಿಂತನೆಯ ಸ್ಪಷ್ಟತೆ ನನಗೆ ಬಹಳ ಅಮೂಲ್ಯವಾದದ್ದು. ಈಗ ನನಗೆ ಸ್ಪಷ್ಟವಾಗಿದೆ, ಕ್ವಾಂಟಂ ಕ್ರಿಯೆ ನಾನು ಮೊದಲು ಊಹಿಸಿದ್ದಕ್ಕಿಂತ ಹೆಚ್ಚು ಮೂಲಭೂತ ಪ್ರಾಮುಖ್ಯತೆ ಪಡೆದಿದೆ" ಎನ್ನುತ್ತಾರೆ. ಇದನ್ನು ಪೂರ್ವಗ್ರಹ ಎಂದು ಕರೆಯುವುದು ತ್ರಾಸದಾಯಕವೇ ಸರಿ. ಈ ದೃಷ್ಟಿಕೋನಗಳಲ್ಲಿ ಆಗುವ ಬದಲಾವಣೆಯನ್ನು ಕೂನ್ ಗೆಸ್ಟಾಲ್ಟ್ ಸ್ವಿಚ್ಚಿಗೆ ಹೋಲಿಸುತ್ತಾರೆ. ಈ ಬಗೆಗಿನ ಪ್ರಯೋಗದಲ್ಲಿ ಚಿತ್ರವೊಂದನ್ನು ಎರಡು ರೀತಿಯಲ್ಲಿ, ಉದಾಹರಣೆಗೆ ಮೊಲ ಅಥವಾ ಬಾತುಕೋಳಿ ಗ್ರಹಿಸುವ ಅವಕಾಶವಿರುತ್ತದೆ. ಆದರೆ ವೈಜ್ಞಾನಿಕ ಕ್ರಾಂತಿಗಳಲ್ಲಿ ಇದು ಒಮ್ಮುಖ ಬದಲಾವಣೆ, ಇರುವ ಮಾದರಿಯಿಂದ ಹೊಸ ಮಾದರಿಗೆ ಹೋಗಲಷ್ಟೇ ಸಾಧ್ಯ ಎಂದು ಸೂಚಿಸಲಾಗಿದೆ.

# ನಾಲ್ಕು ಕಾಲಿನ ನಿಜ






ಆ ಮೊಲಕೆ ನಾಲ್ಕು ಕಾಲಿತ್ತು
ಜಿಗಿಜಿಗಿದೋಡುವ ಮೊಲದ
ಮೂರೇ ಕಾಲನು ಕಂಡವನೊಬ್ಬ ನುಡಿದ
ಮೊಲಕಿರುವುದೇ ಮೂರು ಕಾಲು.
ಅದನೇ ಬರೆದುಕೊಂಡರು ಬರಹಗಾರರಿಬ್ಬರು,
ಭಾರತದ ಜಾತಿ ವೈವಿಧ್ಯಕೆ ಸಾಕ್ಷಿ
ಇಲ್ಲಿರುವುದೊಂದು ಜಾತಿಯ ಮೊಲ
ಅದಕೆ ಕಾಲು ಮೂರು

ಓದಿಕೊಂಡ ನಾಕು ಜನ ಪೇಟೆಯಲಿ
ರಸ್ತೆ ಬೀದಿಯಲಿ ಬಾರು ಪಬ್ಬಿನಲಿ
ಮಾತನಾಡಿಕೊಂಡರು ಮತ್ತೆ,
ಸಾಕಿರುವ ಚಿತ್ರಗಳಲಿರುವ ಮೊಲದ ಹಾಗಲ್ಲ
ಮೂಲತಃ ಮೊಲಕೆ ಮೂರೇ ಕಾಲಂತೆ
ಮುಂದುಗಡೆ ಎರಡಂತೆ ಹಿಂದುಗಡೆ ಒಂದಂತೆ
ಅಲ್ಲಲ್ಲ, ಹಿಂದೆ ಎರಡಂತೆ ಮುಂದೆ ಒಂದಂತೆ
ತುಂಡಾದಂತೆ ಕಾಣುವ ಬಾಲ
ಹಸಿವಾದಾಗ ತಾನೇ ತಿಂದುಕೊಂಡಿದ್ದಂತೆ

ಸಮಾಜಶಾಸ್ತ್ರಿಗಳು ಸರ್ವಧರ್ಮಿಗಳು
ಮಠ ಮಾನ್ಯ ಮಂದಿರಗಳು ಕೂಗಿದವು ಅದನ್ನೇ
ಮೊಲಕೆ ಮೂರು ಕಾಲು
ಕಟ್ಟಲಾಯಿತು ಮೂರೇ ಕಾಲಿನ ಹಲವು ಪಕ್ಷಗಳ
ವಾದಿಸಿದರು ಕಾನೂನಿನ ಮುಂದೆ ಲಾಯರು,
ಮೊಲ ಎಂದೂ ನಡೆದು ಹೋಗದು
ಸದಾ ಕಾಲೆತ್ತಿ ಜಿಗಿಯುವುದು
ನೆಗೆಯುವುದಕೆ ಹಿಂದೆರಡು ಊರುವುದಕೆ
ಮುಂದೊಂದು
ಮೂರು ಕಾಲನೊಪ್ಪಲು ಬೇಕು ಇನ್ನೇನು ?

ಸುದ್ದಿ ಕೇಳಿದ ಹಳ್ಳಿಗನೊಬ್ಬ ಬಂದ ಪೇಟೆಗೆ
ಹೇಳಿದ ಹಾದಿಯುದ್ದಕ್ಕೂ
'ಇಲ್ಲ, ಮೊಲಕಿರುವುದು ನಾಲ್ಕು ಕಾಲು
ಸಾಕಿದ ಸಾಕದ ಸತ್ತ ಸಾಯದ
ಕಂಡ ಕಾಣದ ಎಲ್ಲ ಮೊಲಗಳಿಗು
ಹಿಂದೆರಡು ಮುಂದೆರಡು ಒಟ್ಟು ಕಾಲು ನಾಲ್ಕು'

ಜನ ನಕ್ಕರು, ಮೊಲಕೆ ಮೂರು ಕಾಲೆಂದರೆ
ಇವನಿಗೇನು ? ಬರೆದಿದ್ದಾರೆ ಬರಹಗಾರರನೇಕರು
ಓದಿಯಾಗಿದೆ ಕೇಳಿಯಾಗಿದೆ ಮಾತಾಡಿಕೊಂಡಾಗಿದೆ

ಧರ್ಮವೂ ಸದಾ ಅದನೇ ಹೇಳುತಿದೆ
ರಾಜಕೀಯವೂ ಹಾಗೇ ಬೆಳೆಯುತಿದೆ
ಮೊಲಕೆ ಕಾಲು ಎಷ್ಟಿದ್ದರೇನು ? ನಂಬಿದರಾಯ್ತಲ್ಲ
ಮೂರೇ ಕಾಲೆಂದು

ಇನ್ನೇನು ಹಳ್ಳಿಗೆ ನುಗ್ಗಬೇಕು ನ್ಯಾಯಾಲಯಕೆ,
ಕಾರು ತಂದರು ಮಂತ್ರಿಯೊಬ್ಬರು
ಪಕ್ಕದಲೊಬ್ಬರು ಮಠಾಧೀಶರು,
ಕರೆದು ಕೂರಿಸಿದರು
ತಮ್ಮಾ, ಮೆಚ್ಚುವುದೇ ಸರಿ ನಿನ್ನ ಸತ್ಯದ ಗುಣಕೆ
ನಿನ್ನಂಥವರೆಲ್ಲ ಬೇಕು ನಮಗೆ
ನಿಜ, ಮೊಲಕಿರುವುದು ನಾಲ್ಕು ಕಾಲು
ನಮಗೂ ಗೊತ್ತು ಜನರಿಗನೇಕರಿಗೂ ಗೊತ್ತು
ಒಪ್ಪಿಯಾಗಿದೆಯಲ್ಲ ಮೂರೇ ಕಾಲನು
ಮತ್ತೆ ನಾಲ್ಕನೆಯದೇಕೆ ?

ಬಾ ಸಾಗುವಾ ಪಕ್ಷ ಧರ್ಮ ದೇಶ ಬೆಳೆಸುವಾ
ಮೊಲದ ನಾಲ್ಕು ಕಾಲಿನ ನಿಜ ಬೇಕಾದರೆ
ಸ್ವತಃ ತಿಳಿದುಕೊಳ್ಳುತ್ತಾರೆ ಜನ ಅಥವಾ
ಹೇಳಬಹುದು ನಾವು ಮುಂದೆ ಎಂದಾದರೂ
ಮುಂದೆ ಎಂದಾದರೂ.

**ಗಣೇಶ ಹೊಸ್ಮನೆ**
ಜಾನ್ಮನೆ – ೫೮೧ ೩೧೫, ಶಿರಸಿ (ಉತ್ತರ ಕನ್ನಡ)

## ನೋವು

ನಲಿಯುತ್ತೇವೆ ನಾವು
ನೋಡಿ, ಅರಳಿದ ಹೂವು;
ಅದಾದರೋ ಇದ್ದೀತು
ಗಿಡದ ನೋವು !

ಸಿ.ಪಿ.ಕೆ.
ಮೈಸೂರು

ಹೊಸ ಮಾದರಿಯ ಆಯ್ಕೆ ನಿಯಮಗಳೇನು ? ಅಥವಾ ಎಷ್ಟು ಅಪಶೃತಿಗಳು ಒಂದು ಜ್ಞಾನಶಾಖೆಯ ಬಿಕ್ಕಟ್ಟನ್ನು ಸೂಚಿಸುತ್ತವೆ ಎಂಬುದನ್ನು ಜ್ಞಾನಶಾಖೆಯ ಹಿರಿಯರು ನಿರ್ಧರಿಸುತ್ತಾರೆ. ಯಾವುದೇ ನಿರ್ದಿಷ್ಟ ಗಣಿತದ, ತಾರ್ಕಿಕ ಹತ್ಯಾರಗಳು ಬಿಕ್ಕಟ್ಟಿನಲ್ಲಿರುವ ಮತ್ತು ಹೊಸ ಮಾದರಿಗಳ ಆಯ್ಕೆಗೆ ನಿಯಮ ಒದಗಿಸಲಾರವು. ಇಂತಹ ಆಯ್ಕೆ ಮೌಲ್ಯ ನಿರ್ಧರಣೆ ಅಂಶ ಮುಖ್ಯವಾಗಿರುತ್ತದೆ. ಏಕೆಂದರೆ, ವಿಜ್ಞಾನಿ ಸಮುದಾಯ ಹೊಸ ಮಾತೃಕೆ ಕೆಲವು 'ಪ್ರಮುಖ' ಸಮಸ್ಯೆಗಳಿಗೆ ಪರಿಹಾರ ಒದಗಿಸುತ್ತದೆ ಅಥವಾ ಹಿಂದಿನದಕ್ಕಿಂತ ಹೆಚ್ಚು 'ಸರಳ'ವಾಗಿದೆ ಎಂದು ವಾದಿಸಬಹುದು. ಆದರೆ ಹಾಗೆ ನಿರ್ಧರಿಸಲು ಮಾನದಂಡಗಳೇನೂ ಲಭ್ಯವಿಲ್ಲ. ಆಯ್ಕೆಯ ಹೊಣೆ ಹೊತ್ತ ಗಣ್ಯರು ಯಾವ ಮೌಲ್ಯಗಳನ್ನು ತಮ್ಮ ವೃತ್ತಿಪರ ಗುಂಪಿನ ಮೂಲಭೂತ ಅಂಶ ಎಂದು ಪರಿಗಣಿಸುತ್ತಾರೋ ಅವುಗಳ ಪಾತ್ರವೇ ನಿರ್ಣಾಯಕ. ಅಂದರೆ ಈ ಮೌಲ್ಯಗಳು ಸಾಮಾನ್ಯ ವಿಜ್ಞಾನದ ಹೊರಗೆ ಇರುತ್ತವೆ. 'ಮೌಲ್ಯದ ಪ್ರಶ್ನೆಯನ್ನು ಹೊರಗಿನ ಮಾನದಂಡಗಳಿಂದ ಉತ್ತರಿಸಬಹುದು ಮತ್ತು ಈ ಹೊರ ಮಾನದಂಡಗಳ ಮೇಲಿನ ಅವಲಂಬನೆಯೇ ಮಾತೃಕೆ ಬಗೆಗಿನ ಚರ್ಚೆಯನ್ನು ಕ್ರಾಂತಿಕಾರಿಯಾಗಿಸುತ್ತದೆ.' ಈ ನಿಲುವಿನ ಮೂಲಕ ಕೂನ್ ಆಯ್ಕೆಯ ಪ್ರಶ್ನೆಯನ್ನು ಸಮಾಜಶಾಸ್ತ್ರೀಯ ಪ್ರಶ್ನೆಯನ್ನಾಗಿಸಿಬಿಡುತ್ತಾರೆ. ವಿಜ್ಞಾನದ ಚಟುವಟಿಕೆಯನ್ನು ಮಾದರಿ ಮತ್ತು ಅವುಗಳ ಬದಲಾವಣೆಗಳ ಮೂಲಕ ವಿವರಿಸಬೇಕು ಮತ್ತು ಮಾತೃಕೆ ಬದಲಾವಣೆಗಳನ್ನು ವಿಶಿಷ್ಟ ವಿಜ್ಞಾನಿ ಸಮುದಾಯದ ಮೂಲಕ ಪ್ರತಿಪಾದಿಸಬೇಕು. ವಿಜ್ಞಾನಿ ಸಮುದಾಯದ ಪ್ರಮೇಯ ಸಮಾಜಶಾಸ್ತ್ರೀಯವಾಗಿ ಮಾತ್ರ ಸಾಧ್ಯ ಎನ್ನುತ್ತಾರೆ ಎಸ್. ಜಿ. ಕುಲಕರ್ಣಿ.

ಮಾತೃಕೆ ಒಂದನ್ನು ಪಡೆದ ವಿಜ್ಞಾನ ಶಾಖೆ ಮುಂದೆ ಇದನ್ನು ಪ್ರವೇಶಿಸುವವರಿಗೆ ಅದರ ಮೂಲಭೂತ ಅಂಶಗಳ ಬಗೆಗೆ ತರಬೇತಿ ನೀಡುತ್ತದೆ. ಇಂತಹ ತರಬೇತಿಯ ಭಾಗವಾದ ಪಠ್ಯಗಳಲ್ಲಿ ತೀರಾ ಇತ್ತೀಚಿನ ಮಾದರಿಯ ಪರಿಕಲ್ಪನೆಗಳನ್ನೇ ಬಳಸಲಾಗುತ್ತದೆ. ಬೆಳಕಿನ ಸಿದ್ಧಾಂತ ಆಪ್ಟಿಕಾದಿಂದ ಮಾತೃಕೆಯೊಂದನ್ನು ಪಡೆಯಿತು. ಇಂದು ಪಠ್ಯಗಳಲ್ಲಿ ಓದುವ ಫೋಟಾನು ಪರಿಕಲ್ಪನೆ ಹೆಚ್ಚೆಂದರೆ ಶತಮಾನದಷ್ಟು ಹಳೆಯದು. ಅದಕ್ಕೂ ಮುಂಚೆ ಯಂಗ್ ಮತ್ತು ಪಾಸೆನೆಲರು ಪ್ರತಿಪಾದಿಸಿದ ತರಂಗ ಪರಿಕಲ್ಪನೆಯನ್ನು ಪಠ್ಯಗಳಲ್ಲಿ ಬಳಸಲಾಗುತ್ತಿತ್ತು. ಇತಿಹಾಸವನ್ನು ಮರೆಯಿಸಿ ಮತ್ತು ವಿಜ್ಞಾನಿಗಳ ನಿಲುವಿನ ಆಯ್ದ ಭಾಗಗಳನ್ನು ಉದ್ಧರಿಸುವ ಮೂಲಕ ಪಠ್ಯಗಳು ವಿಜ್ಞಾನದ ಅರಿವು ಸತತವಾಗಿ ಸಂಚಿತವಾಗುತ್ತಾ ಬಂದದ್ದು ಎಂಬ ಭ್ರಮೆಗೆ ಕಾರಣವಾಗುತ್ತವೆ. ಹೀಗಾಗಿ ಅವು ಕ್ರಾಂತಿಗಳನ್ನು ಮರೆಮಾಚುತ್ತವೆ ಎನ್ನುತ್ತಾರೆ ಕೂನ್.

### ಪಠ್ಯ ಸಂಸ್ಕೃತಿಯ ಪರಿಣಾಮ

ಪಠ್ಯ ಸಂಸ್ಕೃತಿ ಹಲವು ಸಲ ವಿಜ್ಞಾನದ ಬಗೆಗೆ ಅಪಕಲ್ಪನೆಗೆ ದಾರಿ ಮಾಡಿಕೊಡುತ್ತದೆ. ಆಂಗ್ಲ ವಿಜ್ಞಾನ ಇತಿಹಾಸದ ಕೃತಿಯೊಂದು ವಿಜ್ಞಾನ ಪದ್ಧತಿಯ ಬಗೆಗೆ ಹೇಳುತ್ತಾ ನೀವು ಅಳೆದು ನೋಡುವ ಮನೋಭಾವದವರಾಗಿದ್ದರೆ ವಿಜ್ಞಾನಿಗಳಂತೆ ನೀವು ವರ್ತಿಸುತ್ತೀರ ಎಂದು ಹೇಳುತ್ತದೆ. ವಿಜ್ಞಾನದ ಇತಿಹಾಸದಲ್ಲಿ ಅಳತೆಯ ಮಹತ್ವವನ್ನು ಇಂತಹ ನಿಲುವುಗಳು ತಪ್ಪಾಗಿ ಅರ್ಥೈಸುತ್ತದೆ ಎನ್ನುವ ಕೂನ್, ಸಿದ್ಧಾಂತಗಳನ್ನು ರೂಪಿಸುವಲ್ಲಿ ಹಾಗೂ ಅವುಗಳನ್ನು ಖಾತ್ರಿ ಮಾಡಿಕೊಡುವಲ್ಲಿ ಅಳತೆಯ ಪಾತ್ರ ಮನನವಾಗಲು ನಾವು ನೋಡಬೇಕಾದುದು ಈಗಾಗಲೇ ಅಂಗೀಕೃತ ಸಿದ್ಧಾಂತಗಳನ್ನಲ್ಲ, ಇನ್ನೂ ರೂಪುಗೊಳ್ಳುತ್ತಿರುವ ಸಿದ್ಧಾಂತಗಳ ಬಗೆಗೆ ವಿಜ್ಞಾನದ ನಿಯತಕಾಲಿಕೆಗಳಲ್ಲಿ ಏನು ಚರ್ಚೆಯಾಗುತ್ತಿದೆ ಎನ್ನುವುದು ಎನ್ನುತ್ತಾರೆ. ಅಲ್ಲಿ ವಿಜ್ಞಾನಿಗಳು 'ತಾವು ಬಲವಾಗಿ ನಂಬಿದ್ದ ಸಿದ್ಧಾಂತಕ್ಕೆ ವಾಸ್ತವಾಂಶಗಳನ್ನು ಹೊಂದಿಸಲು ಹೆಣಗುವುದನ್ನು' ನೋಡುತ್ತೇವೆ ಎನ್ನುವುದರ ಕಡೆ ಅವರು ಗಮನ ಸೆಳೆಯುತ್ತಾರೆ. ಉದಾಹರಣೆಗೆ, ಪಠ್ಯಗಳಲ್ಲಿ ಟೇಬಲ್‌ಗಳಲ್ಲಿ (ಕೋಷ್ಟಕಗಳಲ್ಲಿ) ಹಲವು ದತ್ತಾಂಶಗಳನ್ನು ನೀಡಲಾಗಿರುತ್ತದೆ. ಇಂತಹ ಟೇಬಲ್‌ನಲ್ಲಿ ಒಂದೆಡೆ ಸಿದ್ಧಾಂತದಿಂದ ಪಡೆದ ದತ್ತಾಂಶಗಳನ್ನು ನಮೂದಿಸಿದ್ದರೆ ಇನ್ನೊಂದೆಡೆ ಪ್ರಯೋಗದಿಂದ ಪಡೆದ ದತ್ತಾಂಶಗಳನ್ನು (ಅಳತೆಗಳನ್ನು) ಹೋಲಿಕೆಗಾಗಿ ನಮೂದಿಸಿರುತ್ತಾರೆ. ಅವೆರಡರ ಮಧ್ಯ ಹೊಂದಾಣಿಕೆ ವಿದ್ಯಾರ್ಥಿಗೆ ಸಿದ್ಧಾಂತ ಸತ್ಯವೆಂಬ ಮನವರಿಕೆ ಮಾಡಿಕೊಡುತ್ತದೆ. ಈ ಹೊಂದಾಣಿಕೆಯೂ ನೂರಕ್ಕೆ ನೂರರಷ್ಟು ಹೊಂದಿಕೊಂಡಿರುವುದಿಲ್ಲ (ಹಾಗಿದ್ದಲ್ಲಿ ಎಲ್ಲಿಯೋ ತಪ್ಪಾಗಿರಬಹುದು ಎಂದು ಭಾವಿಸಬಹುದು). ಅಂದರೆ ಅರ್ಥ, ಸಿದ್ಧಾಂತ ಹಾಗೂ ಪ್ರಯೋಗಗಳ ಮಧ್ಯದ ಹೊಂದಾಣಿಕೆ 'ಸಹ್ಯ ಮಿತಿಯೊಳಗೆ' ಇದೆ ಎಂದು. ಪ್ರಯೋಗಗಳು, ವಾಸ್ತವದ ದತ್ತಾಂಶಗಳನ್ನು (ಖಚಿತ ಅಳತೆಗಳು ಅಥವಾ ಸಂಖ್ಯೆಗಳು) ಕೊಡುತ್ತವೆ ಹಾಗೂ ಸಿದ್ಧಾಂತಗಳು ಅವುಗಳನ್ನು ಅನುಸರಿಸಿ ರಚಿಸಲಾಗುತ್ತದೆ ಎಂಬ ತಪ್ಪು ಅಭಿಪ್ರಾಯಕ್ಕಿದು ಎಡೆಮಾಡಿಕೊಡುತ್ತದೆ. ವಾಸ್ತವದಲ್ಲಿ ಸಿದ್ಧಾಂತ ಮತ್ತು ದತ್ತಾಂಶಗಳ ನಡುವಿನ ಸಂಬಂಧ ಅರ್ಥವಾಗಬೇಕಾದರೆ ನಾವು ವಿಜ್ಞಾನ ನಿಯತಕಾಲಿಕೆಗಳಲ್ಲಿ ಹೊಸದಾಗಿ ಸ್ಥಾಪಿತಗೊಳ್ಳಲು ಪ್ರಯತ್ನಿಸುತ್ತಿರುವ ಸಿದ್ಧಾಂತದ ಬಗೆಗಿನ ಚರ್ಚೆಯಲ್ಲಿ ನೋಡಬೇಕು. ಅಲ್ಲಿ ವಿಜ್ಞಾನಿಗಳು ತಾವು ಖಚಿತವಾಗಿ ನಂಬಿದ ಸಿದ್ಧಾಂತಕ್ಕೆ ದತ್ತಾಂಶಗಳನ್ನು ಹೊಂದಿಸಲು ಹೆಣಗುತ್ತಿರುವುದನ್ನು ನೋಡುತ್ತೇವೆ.

ಹಲವು ಸಲ ಸಿದ್ಧಾಂತದಿಂದ ವಿಜ್ಞಾನಿಗಳು ಸೀಮೋಲ್ಲಂಘನ ಮಾಡುತ್ತಾರೆ ಎನ್ನುವುದು ಡಾಲ್ಟನ್‌ನ ಸಮಯಕ್ಕಾಗಲೇ ವಿಷಯದಲ್ಲಿ ಇನ್ನೂ ಸ್ಪಷ್ಟವಾಗುತ್ತದೆ. ಡಾಲ್ಟನ್‌ನ ರಾಸಾಯನಿಕ ಸಂಯೋಜನೆ ಪೂರ್ಣಾಂಕ ತೂಕದಲ್ಲಿ ಮಾತ್ರ ಸಂಭವಿಸುತ್ತದೆ ಎಂಬುದು ಅಸಂದಿಗ್ಧವೇನೂ ಆಗಿರಲಿಲ್ಲ. ಪ್ರೌಸ್ಟ್‌ನಂತಹ ಪ್ರಮುಖನ ಪ್ರಯೋಗ ಫಲಿತಾಂಶಗಳು ಕಾಪರ್‌ಆಕ್ಸೈಡ್‌ನ ಸಂಯೋಜನೆ ಕಾಪರ್ ಹಾಗೂ ಆಕ್ಸಿಜನ್‌ನ ಸಂಯೋಜನೆ ಅನುಪಾತ ೧.೪೭:೧ ಕೊಡುತ್ತಿದ್ದರೆ, ಡಾಲ್ಟನ್‌ನ ಸಿದ್ಧಾಂತದ ಪ್ರಕಾರ ೨:೧ ಫಲಿತಾಂಶ ಕೊಡಬೇಕಿತ್ತು. ಅಂದಿನ ವಿಜ್ಞಾನಿಗಳು ಯಾವ ಫಲಿತಾಂಶಗಳನ್ನು ಪಡೆಯಬೇಕು ಎಂಬುದರ ಸ್ಪಷ್ಟ ಅರಿವಿನಿಂದ ಅದನ್ನು ಪಡೆಯುವ ಪ್ರಯೋಗ ತಂತ್ರಗಳನ್ನು ರೂಪಿಸಿದರು. ಹೀಗೆ, ಪಠ್ಯಗಳು ಹಾಗೂ ಪಠ್ಯ ಪ್ರೇರಿತ ಇತಿಹಾಸಗಳು ಹಲವು ಸಲ ವಿಜ್ಞಾನದ ಬಗೆಗೆ ತಪ್ಪು ಕಲ್ಪನೆಗಳನ್ನು ನೀಡುತ್ತವೆ ಎನ್ನುತ್ತಾರೆ ಕೂನ್.

### ಕೂನ್ ಚಿಂತನೆಯ ವಿಮರ್ಶೆ

ಕೂನ್‌ರ ವಿಮರ್ಶಕರಲ್ಲಿ ಫೇಯರಾಬೆಂಡ್ ಅವರದು ವಿಶಿಷ್ಟ ಸ್ಥಾನ. ಅವರು ಕೂನ್ ಚಿಂತನೆಯ ಹಲವು ಆಯಾಮಗಳನ್ನು ಒಪ್ಪಿಕೊಳ್ಳುತ್ತಾರೆ. ಕೂನ್ ಸಾಮಾನ್ಯ ವಿಜ್ಞಾನವೇ ವಿಜ್ಞಾನದ ನಿಜ ಸ್ವರೂಪ ಎಂದು ಹೇಳಿದರೆ ಫೇಯರಾಬೆಂಡ್ ಕ್ರಾಂತಿಕಾರಿ ಹಂತವೇ ನಿಜವಾದ ವಿಜ್ಞಾನ ಎನ್ನುತ್ತಾರೆ. ನೀವು ಯಾವುದಾದರೂ ಒಂದು ವಿಜ್ಞಾನದ ಪದ್ಧತಿಯಲ್ಲಿನ ನಿಯಮ ತೋರಿಸಿಕೊಡಿ, ಅದನ್ನು ವಿಜ್ಞಾನ ಇತಿಹಾಸದಲ್ಲಿ ಎಲ್ಲಿ ಉಲ್ಲಂಘಿಸಲಾಗಿದೆ ಎಂದು ತೋರಿಸಿಕೊಡುತ್ತೇನೆ ಎಂದು ಸವಾಲು ಹಾಕುವ ಫೇಯರಾಬೆಂಡ್ ತಾನು ಪದ್ಧತಿ ಅರಾಜಕವಾದಿ ಎಂದು ಘೋಷಿಸಿಕೊಳ್ಳುತ್ತಾರೆ.

ಸ್ಟೀವ್ ಫುಲರ್‌ರ ವಾದ ಬೇರೆಯದೇ ನೆಲೆಯದು ಮತ್ತು ಹೆಚ್ಚು ಗಟ್ಟಿನೆಲೆಯ ವಾದ. ಅವರು ಕೂನ್ ಮತ್ತು ಪಾಪರ್ ನಡುವಿನ ವಾಗ್ವಾದಕ್ಕೆ ಹೊಸ ಚೌಕಟ್ಟು ಒದಗಿಸುತ್ತಾರೆ. ಅವರ ಪ್ರಕಾರ ಕೂನ್ ಎಲೀಟಿಸ್ಟ್ ಅಥವಾ ಗಣ್ಯತವಾದಿ. ಹೀಗಾಗಿ ಕೂನ್ ಪ್ರಕಾರ ಹೆಚ್ಚು ಹೆಚ್ಚು ಸಣ್ಣ ಗುಂಪಿನ ಸ್ಪೆಷಲಿಸ್ಟರು ಕ್ರಾಂತಿ ಮಾಡುತ್ತಾರೆ. ಇದಕ್ಕೆ ಭಿನ್ನವಾಗಿ ಪಾಪರ್ ಪ್ರಕಾರ ಎಲ್ಲಾ ಕ್ರಾಂತಿಕಾರಿ ವಾದಗಳು ಹೆಚ್ಚು ಹೆಚ್ಚು ಸಾಮಾನ್ಯರನ್ನು ಒಳಗೊಳ್ಳಬೇಕಾಗುತ್ತದೆ. ಎಲ್ಲಕ್ಕಿಂತ ಹೆಚ್ಚಾಗಿ ಕೂನ್ ತನ್ನ ವಾದವನ್ನು ಮಂಡಿಸುವ ಸಮಯಕ್ಕಾಗಲೇ (೧೯೬೨) ಅಮೆರಿಕದಲ್ಲಿ ವಿಜ್ಞಾನವು ಮಿಲಿಟರಿ ಇಂಡಸ್ಟ್ರಿಯಲ್ ಕಾಂಪ್ಲೆಕ್ಸ್‌ಗೆ ಹೊಂದಿಕೊಂಡು ಬದಲಾಗಿತ್ತು. ಕೂನ್‌ನನ್ನು ಈ 'ಬಿಗ್ ಸೈನ್ಸ್' ವಿಜ್ಞಾನದ ಪ್ರತಿಪಾದಕ ಎಂದೇ ನಾವು ಭಾವಿಸಬೇಕಾಗುತ್ತದೆ ಎನ್ನುತ್ತಾರೆ ಫುಲರ್. ದೊಡ್ಡ ಮಟ್ಟದಲ್ಲಿ ಹಣದ ಸರಬರಾಜು ಬಯಸುವ ಪ್ರತಿಗಾಮಿ "ಸ್ವತಂತ್ರ" ವಿಜ್ಞಾನದ ಪ್ರತಿಪಾದನೆಗೆ ಕೂನ್ ಚಿಂತನೆ ಅದ್ಭುತ ಬೆಂಬಲ ಕೊಡುತ್ತದೆ ಎನ್ನುತ್ತಾರೆ ಫುಲರ್. ಹೀಗಾಗಿ ಕೂನ್‌ನದು ಕ್ರಾಂತಿಕಾರಿ ಎಂದು ಭಾವಿಸಿದ ಹಲವರು ಈ ಬಗೆಗೆ ಮತ್ತೆ ಆಲೋಚಿಸುವಂತೆ ಮಾಡುತ್ತಾರೆ ಸ್ಟೀವ್ ಫುಲರ್.

ಬಿ. ಎಂ. ಪ್ರದೀಪ್ ಕುಮಾರ್
'ನಿತ್ಯೋತ್ಸವ', ಮನೆ ನಂ. ೮೭ 'ಎ', ವಾರ್ಡ್ ೨೨
ಡಾ॥ ಭರತ್ ಹೆಲ್ತ್ ಕ್ಲಿನಿಕ್ ಎದುರು, ಕಪ್ಪಗಲ್ ರಸ್ತೆ, ಗಾಂಧಿನಗರ, ಬಳ್ಳಾರಿ – ೫೮೩ ೧೦೩



# ಅಬ್ದುಲ್ ಕಲಾಂ : ಬಣ್ಣನೆಗೆ ಸಿಕ್ಕದ ಭಾರತದ ಕ್ಷಿಪಣಿ ಜನಕ

**ಟಿ. ಆರ್. ಅನಂತರಾಮು**

**ಭಾ**ರತ ಗಣರಾಜ್ಯವಾದ ಮೇಲೆ ರಾಷ್ಟ್ರಪತಿ ಹುದ್ದೆಗೇರಿದವರ ಚಿತ್ರವನ್ನು ಒಮ್ಮೆ ನಿಮ್ಮ ಸ್ಮೃತಿಪಟಲದ ಮುಂದೆ ತಂದುಕೊಳ್ಳಿ. ಮೊದಲಿಗೆ ಮನಸ್ಸಿಗೆ ಮೂಡುವುದು ಇವರೆಲ್ಲರೂ ಸಭ್ಯರೇ. ಆ ಸ್ಥಾನಕ್ಕೆ ಗೌರವ ತಂದವರೇ, ಬಹುತೇಕ ವಿವಾದಾತೀತರೇ. ಇಂಥವರ ಸಾಲಿನಲ್ಲಿ ಹನ್ನೊಂದನೇ ರಾಷ್ಟ್ರಪತಿಯಾದ ಅವುಲ್ ಪಕೀರ್ ಜೈನುಲಾಬ್ದೀನ್ ಅಬ್ದುಲ್ ಕಲಾಂ ಎದ್ದುಕಾಣುತ್ತಾರೆ. ಏಕೆಂಬುದಕ್ಕೆ ಉತ್ತರ ಹುಡುಕುವುದು ಕಷ್ಟವೇನಲ್ಲ. ಅವರ ಹಿನ್ನೆಲೆಯೇ ಅದನ್ನೆಲ್ಲ ಹೇಳಿಬಿಡುತ್ತದೆ. ಡಾ॥ ಎಸ್. ರಾಧಾಕೃಷ್ಣನ್ ತತ್ತ್ವಶಾಸ್ತ್ರದಲ್ಲಿ ಪ್ರಖ್ಯಾತರು, ಅಧ್ಯಾಪಕರಾಗಿ ಪ್ರಸಿದ್ಧರಾಗಿದ್ದವರು. ಡಾ॥ ಜಕೀರ್ ಹುಸೇನ್ ಆಲಿಘರ್ ವಿಶ್ವವಿದ್ಯಾಲಯದಲ್ಲಿ ಶಿಕ್ಷಣ ತಜ್ಞರಾಗಿ ಹೆಸರು ಮಾಡಿದವರು. ಕಲಾಂ ಅವರನ್ನು ಹೊರತುಪಡಿಸಿ, ಈಗಿನ ರಾಷ್ಟ್ರಪತಿ ಪ್ರಣಬ್ ಮುಖರ್ಜಿಯವರೂ ಸೇರಿದಂತೆ ಉಳಿದೆಲ್ಲವರ ಹಿನ್ನೆಲೆ ರಾಜಕೀಯ ಕ್ಷೇತ್ರ. ಅದೇ ಅವರ ಚಿಮ್ಮುಹಲಗೆ. ರಾಷ್ಟ್ರಪತಿಗಳ ಪೈಕಿ ಅಬ್ದುಲ್ ಕಲಾಂ ಅವರೊಬ್ಬರೇ ತಂತ್ರಜ್ಞಾನದ ಹಿನ್ನೆಲೆಯಿಂದ ಬಂದವರು. ಪ್ರಧಾನ ಮಂತ್ರಿಗಳ ಪೈಕಿ ಲಾಲ್‌ಬಹದ್ದೂರ್ ಶಾಸ್ತ್ರಿ ಅವರು ಭಾರತದ ಶ್ರೀಸಾಮಾನ್ಯನ ಎದೆಯನ್ನೂ ಗೆದ್ದಿದ್ದರು; ಸರಳತೆ, ಸಜ್ಜನಿಕೆ ಮೂರ್ತಿವೆತ್ತಂತಿದ್ದರು. ಕಡುಬಡತನದ ಸಾಗರವನ್ನು ಈಜಿ ಗೆದ್ದವರು. ರಾಷ್ಟ್ರಪತಿಗಳ ಪೈಕಿ ಕಲಾಂ ಅವರದು ಈ ಬಗೆಯ ಬವಣೆಯೇ. ಬಡತನದ ಹೋರಾಟದ ಬದುಕು. ರಾಮೇಶ್ವರದ ದೋಣಿ ನಡೆಸುವ, ಅದನ್ನೇ ಜೀವನೋಪಾಯ ಮಾಡಿಕೊಂಡ ಜೈನುಲಾಬ್ದೀನ್ ಅವರ ಏಳು ಮಕ್ಕಳಲ್ಲಿ ಅಬ್ದುಲ್ ಕಲಾಂ ಕೊನೆಯವರು (ಹುಟ್ಟಿದ್ದು ೧೫ ಅಕ್ಟೋಬರ್, ೧೯೩೧).

ಸಾಮಾನ್ಯವಾಗಿ ಸುದ್ದಿಮಾಧ್ಯಮಗಳು ಅಬ್ದುಲ್ ಕಲಾಂ ಅವರ ಬಡತನದ ಹಿನ್ನೆಲೆಯನ್ನೋ ಅಥವಾ ಅವರು ರಾಷ್ಟ್ರಪತಿಯಾದ ಮೇಲೆ ಭಾರತದಾದ್ಯಂತ ವಿದ್ಯಾರ್ಥಿಗಳ ಮನಗೆದ್ದ ಪರಿಯನ್ನೋ ಹೆಚ್ಚು ಬಿಂಬಿಸಿರುವುದುಂಟು. ಅದು ಸಹಜವೇ. ರಾಮೇಶ್ವರದಿಂದ ರಾಷ್ಟ್ರಪತಿ ಭವನಕ್ಕೆ ಸಾಗುವ ಮಾರ್ಗ ಸುಲಭವಲ್ಲ. ವಾಸ್ತವವಾಗಿ ಕಲಾಂ ಅವರ ಗುರಿಯೂ ಅದಾಗಿರಲಿಲ್ಲ. ರಾಷ್ಟ್ರಪತಿ ಹುದ್ದೆ ಅವರಿಗೆ ಆಕಸ್ಮಿಕವಾಗಿ ಒದಗಿಬಂದದ್ದು.

ತಂತ್ರಜ್ಞಾನದ ಹಿನ್ನೆಲೆಯಿಂದ ಬಂದ ಕಲಾಂ ಅವರು ನಿಜಕ್ಕೂ ನೂರಾರು ಸಮಸ್ಯೆಗಳನ್ನು ಒಡಲಲ್ಲಿ ಇಟ್ಟುಕೊಂಡು ಈಗಲೂ ನಲುಗುತ್ತಿರುವ ಭಾರತದಂತಹ ಬೃಹತ್ ರಾಷ್ಟ್ರವನ್ನು ಹೇಗೆ ನಿರ್ವಹಿಸಬಲ್ಲರು ಎಂಬ ಗುಮಾನಿ ರಾಜಕೀಯ ಕ್ಷೇತ್ರದಲ್ಲಿದ್ದದ್ದಂತೂ ಸುಳ್ಳಲ್ಲ. ಜನಸಾಮಾನ್ಯರಿಗೆ ಕುತೂಹಲವಿತ್ತೇ ಹೊರತು ಅವರ ಸಾಮರ್ಥ್ಯದ ಬಗ್ಗೆ ಅಪನಂಬಿಕೆ ಇರಲಿಲ್ಲ. ರಾಷ್ಟ್ರಪತಿ ಹುದ್ದೆಗೆ ಎನ್.ಡಿ.ಎ. ಸರ್ಕಾರದ ಆಯ್ಕೆ ಕಲಾಂ. ಇಲ್ಲೊಂದು ಪುಟ್ಟ ಟಿಪ್ಪಣಿ

ಅಬ್ದುಲ್ ಕಲಾಂ ಅವರನ್ನು ನಾವು ಭಾರತದ ಕ್ಷಿಪಣಿ ಜನಕ ಎಂಬುದಕ್ಕಷ್ಟೇ ಸೀಮಿತಗೊಳಿಸಿದರೆ ಅದು ಕೂಡ ಅಪರಿಪೂರ್ಣ ವ್ಯಾಖ್ಯೆಯಾದೀತು. ಕಲಾಂ ಅತ್ಯುತ್ತಮ ಮಾನವತಾವಾದಿ. ತಾಯ ನೆಲವನ್ನು ಗಾಢವಾಗಿ ಪ್ರೀತಿಸಿದಾತ. ದೇಶದಾದ್ಯಂತ ಮಕ್ಕಳೊಡನೆ ಬೆರೆತು, ಅವರನ್ನು ಹುರಿದುಂಬಿಸಿದವರು. ಹೀಗಾಗಿಯೇ ಸದಾ ಮಕ್ಕಳಿಗೆ ಅವರು 'ಕಲಾಂ ಮೇಷ್ಟ್ರು'. ಪ್ರಾಯಶಃ ಭಾರತದ ಇತಿಹಾಸದಲ್ಲಿ ರಾಷ್ಟ್ರಪತಿಯೊಬ್ಬರು ಇಷ್ಟೊಂದು ಸಲುಗೆಯಿಂದ ಮಕ್ಕಳೊಡನೆ ಬೆರೆತು, ಸಾರ್ವಜನಿಕರೊಡನೆ ಕುಳಿತು ತಮ್ಮ ಅನುಭವವನ್ನು ಹಂಚಿಕೊಂಡಿರಲ್ಲಿಲ್ಲ. ಕಲಾಂ ಅವರು ನಮ್ಮ ಮಧ್ಯೆ ಇಲ್ಲದಿದ್ದರೂ, ಇಂದಿಗೂ ಅವರು ಸ್ಫೂರ್ತಿಯ ಸೆಲೆ.




ಮಾಡಬೇಕು. ರಾಷ್ಟ್ರಪತಿಯಾಗಿ ಅವರನ್ನು ನಾಮಕರಣ ಮಾಡುವಾಗ ರಾಜಕೀಯ ಮೌಲ್ಯಮಾಪನವೇನೇ ಇರಲಿ, ಯಾವುದೇ ಪಕ್ಷದ ಬೆಂಬಲ ಇರಲಿ, ಅದನ್ನು ಪಕ್ಕಕ್ಕೆ ಇಟ್ಟರೂ ಅಬ್ದುಲ್ ಕಲಾಂ ಅವರು 'ಭಾರತದ ಕ್ಷಿಪಣಿ ಜನಕ' ಎಂಬ ಅಂಶವಂತೂ ಅಗತ್ಯವಾಗಿ ಮುನ್ನೆಲೆಗೆ ಬಂದಿತ್ತು. ವಾಸ್ತವವಾಗಿ ಯಾವ ವ್ಯಕ್ತಿಯನ್ನೂ ಯಾರಿಗೂ ಹೋಲಿಸಲಾಗದು. ಒಬ್ಬೊಬ್ಬರ ಕಾರ್ಯವೈಖರಿ ಒಂದೊಂದು ಬಗೆ. ದೃಷ್ಟಿಕೋನದಲ್ಲೂ ತರತಮವಿರುತ್ತದೆ. ಯೋಜಿತ ಕಾರ್ಯಗಳ ಅನುಷ್ಠಾನದ ಪರಿಯೂ ಬೇರೆ. ಸಾಮಾಜಿಕ, ರಾಜಕೀಯ ಪರಿಸ್ಥಿತಿಗಳು ಭಿನ್ನವಾಗಿರುತ್ತವೆ. ಆದರೂ ತಂತ್ರಜ್ಞಾನದ ಸಾಧಕರ ಹೆಸರು ಬಂದಾಗ ಸರ್. ಎಂ. ವಿಶ್ವೇಶ್ವರಯ್ಯ ಮತ್ತು ಅಬ್ದುಲ್ ಕಲಾಂ ಅವರ ಬದುಕು ಸಾಮಾನ್ಯ ಜನರನ್ನು ತಟ್ಟುವುದುಂಟು. ವಿಶ್ವೇಶ್ವರಯ್ಯನವರು ೧೯೦೯ರಲ್ಲಿ ಆಗಿನ ಮೈಸೂರು ಸಂಸ್ಥಾನದ ಮುಖ್ಯ ಎಂಜಿನಿಯರ್ ಆಗಿ ಬರುವ ಮುನ್ನ ಮುಂಬೈ ಪ್ರಾಂತ್ಯದಲ್ಲಿ ನೀರಾವರಿ ಕುರಿತು ಅವೆಷ್ಟೋ ಯೋಜನೆಗಳನ್ನು ಸಫಲಗೊಳಿಸಿದ್ದರು. ಬ್ಲಾಕ್ ಸಿಸ್ಟಮ್ ನೀರಾವರಿಯಿಂದ ತೊಡಗಿ ಸ್ವಯಂ ನಿಯಂತ್ರಣ ಗೇಟ್ ರಚನೆಯವರೆಗೆ – ಎಲ್ಲದರಲ್ಲೂ ಅದ್ಭುತವಾದ 'ಜೀನಿಯಸ್' ಎನ್ನಬಹುದಾದ ಮಹಾಪ್ರತಿಭೆ. ಅವರ ಸೇವೆ ಏಡನ್ ಪಟ್ಟಣಕ್ಕೂ ದೊರೆತಿತ್ತು. ಇಂಥ ಮಹಾ ಸಾಧಕನ ಸೇವೆ ಅಂದಿನ ಮೈಸೂರಿಗೂ ಬೇಕೆಂಬುದು ಸಹಜವಾಗಿ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರ ಇರಾದೆಯಾಗಿತ್ತು. ಮುಂದೆ ಚೀಫ್ ಎಂಜಿನಿಯರ್ ಆಗಿ, ಮೈಸೂರಿನ ದಿವಾನರಾಗಿ ಅವರು ಮಾಡಿದ ಸ್ತುತ್ಯರ್ಹ ಕೆಲಸಗಳು ಹತ್ತಾರು. ಕಲಾಂ ಅವರದು ಇನ್ನೊಂದು ಬಗೆಯ ಸಾಧನೆ. ರಾಷ್ಟ್ರಪತಿ ಹುದ್ದೆಯನ್ನು ಅಲಂಕರಿಸುವ ಮುನ್ನ ಅವರು ಭಾರತದ ರಾಕೆಟ್ ಯೋಜನೆಗೆ ಹೆಸರಾದವರು. ಅವರದೂ ಅದೇ ಮಂತ್ರ – ಭಾರತ ಅಭಿವೃದ್ಧಿರಾಷ್ಟ್ರವಾಗಬೇಕು, ಅಂಥ ಕನಸು ಕಾಣಬೇಕು. ೨೦೨೦ರ ಹೊತ್ತಿಗೆ ಈ ಸಾಧನೆ ಸಾಧ್ಯ ಎಂದು ನೀಲನಕ್ಷೆಯನ್ನು ಮುಂದಿಟ್ಟ ಮಹಾಕನಸುಗಾರ. ಅಂತರಿಕ್ಷ ಯೋಜನೆಗಳಷ್ಟೇ ಅಲ್ಲ, ಭಾರತವನ್ನು ಮುನ್ನಡೆಸಬೇಕಾದರೆ ಅತ್ಯಗತ್ಯವಾಗಿ ನಮ್ಮ ಶಿಕ್ಷಣ, ಸಂಪನ್ಮೂಲ, ವಿಜ್ಞಾನ–ತಂತ್ರಜ್ಞಾನಗಳ ಮೂಲಕವಷ್ಟೇ ಸಾಧ್ಯ ಎಂದು ಒತ್ತಿ ಹೇಳುತ್ತ ಬಂದವರು. ಕಲಾಂ ಅವರು ರಾಷ್ಟ್ರಪತಿ ಸ್ಥಾನಕ್ಕೆ ಏರುವ ಮುನ್ನ ತಂತ್ರಜ್ಞಾನದಲ್ಲಿ ಅವರು ಮಾಡಿದ ಶಿಖರಪ್ರಾಯ ಕೆಲಸಗಳ ಒಂದು ಕಿರುನೋಟವಾದರೂ ಬೇಕು.

ಈ ಘಳಿಗೆಯಲ್ಲಿ ಕಲಾಂ ಅವರ ಬದುಕಿನೊಂದಿಗೇ ಅಭಿವರ್ಧನೆಯಾದ ಭಾರತದ ರಾಕೆಟ್ ಚರಿತ್ರೆಯೂ ಬೆಸೆದುಕೊಳ್ಳುತ್ತದೆ. ಅದರೊಟ್ಟಿಗೆ ಕ್ಷಿಪಣಿ ಚರಿತ್ರೆಯೂ ಬಹು ದೊಡ್ಡ ಅಧ್ಯಾಯವಾಗಿಯೇ ಬೆಳೆಯುತ್ತದೆ. ಕಲಾಂ ಅವರು ಹೇಳಿಕೊಂಡಂತೆ : ನನ್ನ ಕಥೆ ನೂರು ವರ್ಷ ರಾಮೇಶ್ವರದ ಮಸೀದಿ ಬೀದಿಯಲ್ಲಿ ಬಾಳಿ, ಅಲ್ಲಿಯೇ ಅಸುನೀಗಿದ ತಂದೆ ಜೈನುಲಾಬ್ದೀನ್ ಅವರ ಮಗನ ಕಥೆ. ಸಹೋದರರಿಗೆ ನೆರವಾಗಲೆಂದು ವೃತ್ತಪತ್ರಿಕೆ ಮಾರಿದವನ ಕಥೆ. ಶಿವಸುಬ್ರಮಣಿ ಅಯ್ಯರ್ ಮತ್ತು ಅಯ್ಯಾದೊರೆ ಸಾಲೊಮನ್ ಮೇಷ್ಟ್ರರಿಂದ ರೂಪುಗೊಂಡ ಶಿಷ್ಯನ ಕಥೆ. ಪಾಂದಲೈ ಮೇಷ್ಟ್ರರಿಂದ ಪಾಠ ಹೇಳಿಸಿಕೊಂಡ ಹುಡುಗನ ಕಥೆ. ಎಂ.ಜಿ.ಕೆ. ಮೆನನ್ ಅವರ ಕಣ್ಣಿಗೆ ಬಿದ್ದ ಎಂಜಿನಿಯರ್‌ನ ಕಥೆ. ಬದುಕಿದ್ದಾಗಲೇ ದಂತಕಥೆಯಾಗಿದ್ದ ಧೀಮಂತ ವಿಕ್ರಂ ಸಾರಾಭಾಯಿ ಅವರ ಗರಡಿಯಲ್ಲಿ ಪಳಗಿದವನೊಬ್ಬನ ಕಥೆ. ವಿಜ್ಞಾನ ಕ್ಷೇತ್ರಗಳಲ್ಲಿ ವೈಫಲ್ಯ, ಯಶಸ್ಸುಗಳನ್ನು ಉಣ್ಣುತ್ತಲೇ ಬೆಳೆದವನ ಕಥೆ. ವೃತ್ತಿಜೀವನದಲ್ಲಿ ಅರ್ಪಣಾ ಮನೋಭಾವವಿದ್ದ ಮಹಾ ಮೇಧಾವಿಗಳ ಬೆಂಬಲ ಪಡೆದು ಮುಂದೆ ಸಾಗಿದವನ ಕಥೆ.

ಮದ್ರಾಸ್ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ(ಎಂ.ಐ.ಟಿ.)ಯಲ್ಲಿ ಕಲಾಂ ಅವರು ಏರೋಸ್ಪೇಸ್ ಎಂಜಿನಿಯರಿಂಗ್‌ನಲ್ಲಿ ಪದವಿ ಪಡೆದರು(೧೯೫೪), ಅನಂತರ ಬೆಂಗಳೂರಿನ ಹಿಂದೂಸ್ಥಾನ್ ಏರೋನಾಟಿಕ್ಸ್ ಲಿ. ಸಂಸ್ಥೆಯಲ್ಲಿ ತರಬೇತಿ ಪಡೆದ ನಂತರ ಅವರಲ್ಲಿ ಹಾರುವ ಕನಸು ಮತ್ತಷ್ಟು ಗಟ್ಟಿಯಾಯಿತು. ಡೆಹರಾಡೂನ್‌ನಲ್ಲಿ ಭಾರತೀಯ ವಾಯುದಳದಲ್ಲಿ ಪೈಲಟ್ ಹುದ್ದೆಗೆ ಸಂದರ್ಶನಕ್ಕೆ ಹೋಗಿ ಆಯ್ಕೆಯಾಗದಿದ್ದಾಗ ಸಹಜವಾಗಿಯೇ ಮನಸ್ಸು ಗಲಿಬಿಲಿಗೊಂಡಿತ್ತು. ಹೃಷಿಕೇಶದ ಸ್ವಾಮಿ ಶಿವಾನಂದಸ್ವಾಮಿ ಕಲಾಂ ಅವರಲ್ಲಿ ಧೈರ್ಯ ತುಂಬಿದರು. ಪೈಲಟ್ ಆಗುವ ಬದಲು ರಕ್ಷಣಾ ಇಲಾಖೆಯ, ತಾಂತ್ರಿಕ ಅಭಿವೃದ್ಧಿ ಮತ್ತು ಉತ್ಪಾದನಾ ನಿರ್ದೇಶನಾಲಯದಲ್ಲಿ (ಡಿ.ಟಿ.ಡಿ ಅಂಡ್ ಪಿ.) ವಿಜ್ಞಾನಿಯಾಗಿ ಆಯ್ಕೆಯಾಗಿ ತಾಂತ್ರಿಕ ಕ್ಷೇತ್ರವನ್ನು ಪ್ರವೇಶಿಸಿದಾಗ, ಅವರಿಗೆ ಎದುರಾದ ಮೊದಲ ಸವಾಲು ಭಾರತದ ಸೈನ್ಯಕ್ಕಾಗಿ ಹಾವರ್ ಕ್ರಾಫ್ಟ್ ನಿರ್ಮಾಣದ ಹೊಣೆ. ನೀರು ಮತ್ತು ಗಾಳಿ ಎರಡರಲ್ಲೂ ಚಲಿಸುವ ಹಗುರ ವಾಹನ ಅದು. ರಕ್ಷಣಾ ಇಲಾಖೆಯ ಮಂತ್ರಿ ಕೃಷ್ಣ ಮೆನನ್ ಈ ಯೋಜನೆಯನ್ನು ಬೆಂಬಲಿಸಿದರು. ಅಷ್ಟೇ ಅಲ್ಲ, 'ನಂದಿ' ಎಂದು ಕರೆಯಲಾದ ಅಂಥ ಹಾವರ್ ಕ್ರಾಫ್ಟ್‌ನಲ್ಲಿ ಕುಳಿತು ಆಗ ಟಾಟಾ ಮೂಲಭೂತ ಸಂಶೋಧನೆಯ ನಿರ್ದೇಶಕ ಎಂ.ಜಿ.ಕೆ ಮೆನನ್ ಕಲಾಂ ಅವರ ಬೆನ್ನನ್ನು ತಟ್ಟಿ , ತಾವು ಯಾರೆಂದು ತಿಳಿಸದೆ ಹತ್ತಾರು ತಾಂತ್ರಿಕ ಪ್ರಶ್ನೆ ಕೇಳಿ 'ಭೇಷ್' ಎಂದಿದ್ದರು. ಆದರೆ ಸೈನ್ಯದ ಅಧಿಕಾರಿಗಳು ನಂದಿಯನ್ನು ಬೆಂಬಲಿಸಲಿಲ್ಲ, ಹತ್ತು ಹಲವು ಸಬೂಬುಗಳನ್ನು ಕೊಟ್ಟು ಯೋಜನೆಯನ್ನೇ ತಣ್ಣಗಾಗಿಸಿದ್ದರು. ಕಲಾಂ ಅವರಿಗೆ ಈ ಬೆಳವಣಿಗೆ ಸ್ವಲ್ಪಮಟ್ಟಿಗೆ ಜಿಗುಪ್ಸೆಯನ್ನು ಮಾಡಿತ್ತು. ಆದರೆ ಅವರ ಪ್ರತಿಭೆಯನ್ನು ಅನಾವರಣ ಮಾಡಲು ಇನ್ನೊಂದು ಬಾಗಿಲು ತೆರೆದಿತ್ತು. ಭಾರತದ ಬಾಹ್ಯಾಕಾಶ ಯುಗ ತೆರೆಯಲು ಕಾರಣರಾದ ವಿಕ್ರಂ ಸಾರಾಭಾಯಿ ಅವರಿಗೂ ಕಲಾಂ ಅವರ ಸ್ವೋಪಜ್ಞತೆ ಕಣ್ಣಿಗೆ ಬಿತ್ತು. ಅಂಥ ತಂತ್ರಜ್ಞರ ಅವಶ್ಯಕತೆ ಇದ್ದ ಸಂದರ್ಭವದು. ಅದು ಬಹು ಬಿಕ್ಕಟ್ಟಿನ ಸ್ಥಿತಿ. ೧೯೬೨ರ ಚೀನದೊಡನೆ ಮಾಡಿದ ಯುದ್ಧದಲ್ಲಿ ಭಾರತ ಅನೇಕ ಬಗೆಯ ಪಾಠ ಕಲಿಯಬೇಕಾಯಿತು. ವಿಕ್ರಂ ಸಾರಾಭಾಯಿ ಅವರು 'ನಮ್ಮದೇ ಆದ ರಾಕೆಟ್ ನಿರ್ಮಿಸಬೇಕು, ಅದರಲ್ಲಿ ನಾವೇ ನಿರ್ಮಿಸಿದ ಉಪಗ್ರಹ ಗಳನ್ನು ಕಕ್ಷೆಗೆ ಸೇರಿಸಬೇಕು' ಎಂಬ ಘನೋದ್ದೇಶದಿಂದ 'ತುಂಬಾ'ದಲ್ಲಿ ರಾಕೆಟ್ ಉಡಾವಣಾ ಕೇಂದ್ರವನ್ನು ಇಂಡಿಯನ್ ಕಮಿಟಿ ಫಾರ್ ಸ್ಪೇಸ್ ರಿಸರ್ಚ್ ಸಂಸ್ಥೆಯ ಮೂಲಕ ಸ್ಥಾಪಿಸಿ ದೇಶದ ಪ್ರಖ್ಯಾತ ಸಂಶೋಧನ ಸಂಸ್ಥೆಗಳಿಂದ, ವಿಶ್ವವಿದ್ಯಾಲಯ ಗಳಿಂದ ಪ್ರತಿಭಾವಂತರ ಪಡೆಯನ್ನೇ ಈ ಮಹತ್ ಯೋಜನೆಗೆ ಕರೆದು ತಂದು ಕೆಲಸದಲ್ಲಿ ತೊಡಗಿಸಿದರು. ಕೇರಳದ ತುಂಬಾದಲ್ಲಿ ಸೇಂಟ್ ಮ್ಯಾಗ್ದಲೀನ್ ಚರ್ಚ್‌ಅನ್ನು ಕಾರ್ಯಾಗಾರ ಮಾಡಿಕೊಂಡು ಮೊದಲು ಸೌಂಡಿಂಗ್ ರಾಕೆಟ್‌ಗಳ ನಿರ್ಮಾಣದ ಕಡೆ ಗಮನಕೊಟ್ಟರು. ಅಂದರೆ ವಾಯುಗೋಳದ ಅಧ್ಯಯನಕ್ಕೆ ರಾಕೆಟ್ ಮೂಲಕ ಸಾಧನೆಗಳನ್ನು ಕಳಿಸುವುದು. ಸೌಂಡಿಂಗ್ ಎಂಬುದು ಪರೀಕ್ಷೆ ಎಂಬುದರ ಸೂಚಕ, ಅಷ್ಟೆ. ರಾಕೆಟ್ ತಂತ್ರಜ್ಞಾನದ ಆರಂಭದ ಮಜಲು ಇದು. ಕಲಾಂ ಅವರ ಬದುಕು ಭಾರತದ ರಾಕೆಟ್ ತಂತ್ರಜ್ಞಾನದ ಜೊತೆಜೊತೆಗೆ ಬೆಳೆದದ್ದು ಇಲ್ಲಿ.

ಹೆಚ್ಚಿನ ತರಬೇತಿಗಾಗಿ ಕಲಾಂ ಅವರನ್ನು ಅಮೆರಿಕದ ನಾಸಾ ಸಂಸ್ಥೆಯ ಉಡಾವಣಾ ಕೇಂದ್ರ ನಿರ್ವಹಿಸುತ್ತಿದ್ದ ವರ್ಜೀನಿಯ ಬಳಿಯ ವಾಲಪ್ಸ್ ದ್ವೀಪಕ್ಕೆ ಕಳಿಸಿದರು. ಅಲ್ಲಿ ಟಿಪ್ಪು ಸುಲ್ತಾನನ ತೈಲಚಿತ್ರ ಕಂಡು ಕಲಾಂ ಭಾವೋದ್ವೇಗಕ್ಕೆ ಒಳಗಾಗಿದ್ದರು. ಕರ್ನಾಟಕದ ಚರಿತ್ರೆಯಲ್ಲಿ ನಾಲ್ಕನೇ ಮೈಸೂರು ಯುದ್ಧ ಸದಾ ನೆನಪಿನಲ್ಲಿರುವಂಥದ್ದು. ಆಗ ಟಿಪ್ಪು ಸುಲ್ತಾನ್ ಬ್ರಿಟಿಷರ ಮೇಲೆ ದಾಳಿ ಮಾಡಲು ರಾಕೆಟ್ ಬಳಸಿದ್ದ. ಬ್ರಿಟಿಷರು ಬೆಚ್ಚಿಬಿದ್ದಿದ್ದರು. ಆಗಿನ್ನೂ ಅವರಿಗೆ ರಾಕೆಟ್ ತಂತ್ರಜ್ಞಾನ ಸಿದ್ಧಿಸಿರಲಿಲ್ಲ. ತರಬೇತಿ ಪಡೆದು ಬಂದ ಕಲಾಂ ಸೌಂಡಿಂಗ್ ರಾಕೆಟ್

ನಿರ್ಮಾಣದಲ್ಲಿ ಎಷ್ಟು ಗಂಭೀರವಾಗಿ ತೊಡಗಿದರೆಂದರೆ ಅಮೆರಿಕದ ನೈಕ್ ಅಪಾಚೆ ಸೌಂಡಿಂಗ್ ರಾಕೆಟ್ಟನ್ನು ಈ ಕೇಂದ್ರದಿಂದಲೇ ಉಡಾಯಿಸುವ ತಂತ್ರಜ್ಞಾನವನ್ನು ತಂಡ ಸಾಧಿಸಿತ್ತು (೧೯೬೩). ಭಾರತದ ಈ ತಾಂತ್ರಿಕ ಮುನ್ನಡೆ ಅಮೆರಿಕಕ್ಕೇ ವಿಸ್ಮಯ ತಂದದ್ದುಂಟು. ೧೯೬೮ರಲ್ಲಿ ಇಂದಿರಾ ಗಾಂಧಿಯವರು ತುಂಬಾಕ್ಕೆ ಭೇಟಿ ಕೊಟ್ಟು ರಾಕೆಟ್ ಯೋಜನೆಗೆ ನೈತಿಕ ಮತ್ತು ಆರ್ಥಿಕ ಬೆಂಬಲ ಘೋಷಿಸಿದರು. ಇದರ ನಂತರ ಮತ್ತೊಂದು ಸವಾಲನ್ನು ಎದುರಿಸಬೇಕಾಯಿತು. ವಾಯುದಳದ ವಿಮಾನಗಳಿಗೆ ರ್‍ಯಾಟೋ ಮೋಟಾರ್ ನಿರ್ಮಾಣ. ಹಿಂದೂಸ್ತಾನ್ ಏರೋನಾಟಿಕ್ಸ್ ಲಿಮಿಟೆಡ್ ಮತ್ತು ರಕ್ಷಣಾ ಇಲಾಖೆಯ ತಾಂತ್ರಿಕ ಅಭಿವೃದ್ಧಿ ಮತ್ತು ಉತ್ಪಾದನಾ ಸಂಸ್ಥೆಯ ಸಹಯೋಗ ಈ ಯೋಜನೆಗಿತ್ತು. ಸಾರಾಭಾಯಿ ಅವರಿಗೆ ಕಲಾಂ ಅವರ ಸಾಮರ್ಥ್ಯದ ಬಗ್ಗೆ ಪೂರ್ಣ ವಿಶ್ವಾಸವಿತ್ತು. ಈ ಯೋಜನೆಗೆ ದೊಡ್ಡ ಮೊತ್ತದ ಸಹಾಯ ದೊರೆಯುವಂತೆ ಮಾಡಿದರು. ಅವಧಿಗೆ ಆರು ತಿಂಗಳು ಮೊದಲೇ ರ್‍ಯಾಟೋ ಮೋಟಾರು ನಿರ್ಮಿಸಿ 'ಸುಖೋವ್' ಜೆಟ್ ವಿಮಾನಕ್ಕೆ ಅಳವಡಿಸಿ ಪ್ರಯೋಗವನ್ನೂ ಮಾಡುವಷ್ಟು ಯೋಜನೆ ಯಶಸ್ವಿಯಾಯಿತು. ಅದು ಭಾರತದ ಅಂತರಿಕ್ಷ ಯಾನದ ಆರಂಭದ ಜಿಗಿತವೂ ಹೌದು. ಇನ್ನೊಂದು ಪ್ರಮುಖ ಯೋಜನೆ ಭಾರತದ ಅಂತರಿಕ್ಷ ಯೋಜನೆ. ಇದೂ ಕೂಡ ಸಾರಾಭಾಯಿ ಅವರ ಕಲ್ಪನೆಯ ಕೂಸು. ೧೯೬೯ರಲ್ಲಿ ಅದಕ್ಕಾಗಿಯೇ ಇಸ್ರೋ ಸಂಸ್ಥೆ ಜನ್ಮ ತಳೆಯಿತು. ಅದರ ನೇತೃತ್ವ ವಹಿಸಿದವರು ಕಲಾಂ. ಅವರ ಸಾಮರ್ಥ್ಯವನ್ನು ಮನಗಂಡಿದ್ದ ಪ್ರೊ॥ ಸತೀಶ್ ಧವನ್. ತುಂಬಾ ರಾಕೆಟ್ ಉಡಾವಣಾ ಕೇಂದ್ರದ ನಿರ್ದೇಶಕ ಡಾ॥ ಬ್ರಹ್ಮಪ್ರಕಾಶ್, ಕಲಾಂ ಅವರಿಗೆ ಬೆಂಬಲವಾಗಿ ನಿಂತಿದ್ದರು. ಧವನ್ ಅವರ ಯೋಜನೆ ಸ್ಪಷ್ಟವಾಗಿತ್ತು. ಉಪಗ್ರಹ ಉಡಾವಣಾ ವಾಹನ ಯೋಜನೆಯನ್ನು ಮುಂದುವರಿಸುವುದು; ಅಂದರೆ ಎಸ್.ಎಲ್.ವಿ.–೩ ಕಲಾಂ ಅವರ ನಾಯಕತ್ವದಲ್ಲಿ ಸಫಲವಾಗಬೇಕು.

ಅಬ್ದುಲ್ ಕಲಾಂ ಅವರೊಡನೆ ತಂಡದಲ್ಲಿ ಕೆಲಸ ಮಾಡಿದ್ದ ಮಾಧವನ್ ನಾಯರ್ (ಮುಂದೆ ಇಸ್ರೋ ಅಧ್ಯಕ್ಷ) ಅವರು ಕಲಾಂ ಅವರ ಶಿಸ್ತು, ತಂಡದಲ್ಲಿ ಕೆಲಸ ಮಾಡುವ ಸಾಮರ್ಥ್ಯ, ಗುರಿ ಸಾಧಿಸುವ ಛಲ – ಎಲ್ಲವನ್ನೂ ಹತ್ತಿರದಿಂದ ನೋಡಿದವರು. ಇಸ್ರೋ ಸಂಸ್ಥೆಯ ಪಿ.ಎಸ್.ಎಲ್.ವಿ. ಮತ್ತು ಜಿ.ಎಸ್.ಎಲ್.ವಿ. ಉಡಾವಣಾ ವಾಹನಕ್ಕೆ ಕಲಾಂ ಅವರು ನಿರ್ಮಿಸಿದ ಎಸ್.ಎಲ್.ವಿ.–೩ ಭದ್ರ ಬುನಾದಿ ಹಾಕಿಕೊಟ್ಟಿತು ಎಂದು ಸ್ಮರಿಸಿಕೊಳ್ಳುತ್ತಾರೆ. ಮೇಲಿನ ಎರಡೂ ನೌಕೆಗಳು ಭಾರತದ ಅಂತರಿಕ್ಷ ಇತಿಹಾಸದಲ್ಲಿ ಹೊಸ ಅಧ್ಯಾಯವನ್ನೇ ಬರೆದವು ಎನ್ನುವುದು ಈಗಾಗಲೇ ಜಗಜ್ಜಾಹೀರಾಗಿದೆ. ವಾಸ್ತವವಾಗಿ ಎಸ್.ಎಲ್.ವಿ. ಉಡಾವಣೆಯ ಮೊದಲ ಪ್ರಯತ್ನ ವಿಫಲವಾಯಿತು. ಆದರೆ ಕಲಾಂ ಅವರಿಗೆ ಆತ್ಮಸ್ಥೈರ್ಯ ಕುಂದದಂತೆ ಧವನ್ ಬೆಂಬಲಕ್ಕೆ ನಿಂತರು. 'ಈ ವೈಫಲ್ಯದ ಹೊಣೆಯನ್ನು ನಾನು ಹೊರುತ್ತೇನೆ' ಎಂಬ ಮಾತನ್ನಾಡಿದ್ದರು. ಮುಂದೆ ಎಸ್.ಎಲ್.ವಿ.–೩ ೩೫ ಕಿಲೋ ಗ್ರಾಂ ತೂಕದ ರೋಹಿಣಿ ಉಪಗ್ರಹವನ್ನು ಭೂಸ್ಥಿರ ಕಕ್ಷೆಗೆ ಸೇರಿಸಿದಾಗ, ಅದು ಬಾಹ್ಯಾಕಾಶದಲ್ಲಿ ಭಾರತ ಬರೆದ ಮೊದಲ ಅಧ್ಯಾಯವಾಯಿತು (೧೯೮೦).

೧೯೮೨ರಲ್ಲಿ ಕಲಾಂ ಅವರಿಗೆ ಇಲ್ಲಿಂದ ಇನ್ನೊಂದು ಬಾರಿ ಜಿಗಿತ. ರಕ್ಷಣಾ ಇಲಾಖೆಯ ಪ್ರಯೋಗಾಲಯಕ್ಕೆ ಬಂದರು. ಬಹುದೊಡ್ಡ ಹೊಣೆಯನ್ನೇ ಇವರು ಹೊರಬೇಕಾಯಿತು. ಅಲ್ಲಿಂದಲೇ ಅವರು ಘೋಷಣೆ ಮಾಡಿದ್ದರು. 'ಇಲ್ಲಿ ಕೇವಲ ಕ್ಷಿಪಣಿಗಳು ಹುಟ್ಟುವುದಿಲ್ಲ, ಸಮರಾಸ್ತ್ರಗಳು ಹುಟ್ಟುತ್ತವೆ' ಎಂದಿದ್ದರು. ಅವರು ಮೂರೂ ಪಡೆಯ ನಾಯಕರೊಡನೆ ಸುದೀರ್ಘವಾಗಿ ಚರ್ಚಿಸಿದರು. ನಮ್ಮ ದೇಶದ ರಕ್ಷಣೆಗೆ ಯಾವ ಬಗೆಯ ಕ್ಷಿಪಣಿಗಳು ಹೊಂದುತ್ತವೆ ಎಂಬುದನ್ನು ಕುರಿತು ಯೋಜನೆಯನ್ನು ತಯಾರಿಸಿದರು. ಐದು ಬಗೆಯ ಕ್ಷಿಪಣಿಗಳ ನಿರ್ಮಾಣಕ್ಕೆ ಕೈಹಾಕಿ ೪೦೦ ಕೋಟಿ ರೂಪಾಯಿ ಯೋಜನೆಯನ್ನು ಮುಂದಿಟ್ಟರು.

೧. ನೆಲದಿಂದ ನೆಲಕ್ಕೆ ಚಿಮ್ಮುವ ಕ್ಷಿಪಣಿ – ೨೫೦ ಕಿ.ಮೀ. ವ್ಯಾಪ್ತಿ, ಅರ್ಧ ಟನ್ನಿನಿಂದ ಒಂದು ಟನ್ನು ತೂಕದ ಸಿಡಿತಲೆ ಹೊರುವ ಸಾಮರ್ಥ್ಯ. ಮಿಲಿಟರಿ ಸಂಕೇತ – SS-೧೫೦, ಮುಂದೆ ಇದಕ್ಕೆ 'ಪೃಥ್ವಿ' ಎಂದು ಹೆಸರು ನೀಡಲಾಯಿತು.

೨. ಮೂರೂ ಪಡೆಗಳು ಬಳಸುವಂಥ ನೆಲದಿಂದ ಆಗಸಕ್ಕೆ ಚಿಮ್ಮುವ ಕ್ಷಿಪಣಿ, ತಂತ್ರೋಪಾಯ ಸಮರ ವಾಹನ. ಮುಂದೆ ಇದೇ 'ತ್ರಿಶೂಲ್' ಕ್ಷಿಪಣಿಯಾಗಿ ರೂಪಿತವಾಯಿತು.

೩. ಒಮ್ಮೆಗೇ ಅನೇಕ ಗುರಿಗಳಿಗೆ ಹೊಡೆಯಬಲ್ಲ ಆಧುನಿಕ ತಂತ್ರಜ್ಞಾನದ, ನೆಲದಿಂದ ಬಾನಿಗೆ ಚಿಮ್ಮುವ ಕ್ಷಿಪಣಿ. ಮುಂದೆ ಇದು 'ಆಕಾಶ್' ಕ್ಷಿಪಣಿ.




೪. ಟ್ಯಾಂಕ್ ನಿರೋಧಕ ಕ್ಷಿಪಣಿ. ಮುಂದೆ ಇದು 'ನಾಗ್' ಕ್ಷಿಪಣಿ.

೫. ಮಧ್ಯಮಗಾಮಿ ಉತ್‌ಕ್ಷೇಪಕ ಕ್ಷಿಪಣಿ. ಮುಂದೆ ಇದು 'ಅಗ್ನಿ' ಕ್ಷಿಪಣಿ.

ಪೃಥ್ವಿ ಮತ್ತು ತ್ರಿಶೂಲ್ ಕ್ಷಿಪಣಿಗಳಿಗೆ ಮೊದಲ ಆದ್ಯತೆ. ಕಲಾಂ ಅವರ ನೈಪುಣ್ಯವನ್ನು ಒರೆಗೆ ಹಚ್ಚುವ ಸಂದರ್ಭ. ಏಕೆಂದರೆ ಕ್ಷಿಪಣಿಗಳ ಅಭಿವೃದ್ಧಿ ಎಂದರೆ ಆಗ ಶೂನ್ಯದಿಂದಲೇ ಪ್ರಾರಂಭಿಸಬೇಕಾಗಿತ್ತು. ಯಾರೂ ಅನುಭವಸ್ಥರಿರಲಿಲ್ಲ. ದೇಶದ ಅನೇಕ ತಜ್ಞರನ್ನು ವಿವಿಧ ಸಂಸ್ಥೆ, ವಿಶ್ವವಿದ್ಯಾಲಯಗಳಿಂದ ಕರೆದು ತಂದು, ಯಾವ ಯಾವ ಹಂತದಲ್ಲಿ ಹೇಗೆ ತೊಡಗಿಕೊಳ್ಳಬೇಕು ಎಂಬುದನ್ನು ಯೋಜಿಸಿ, ಅನ್ವಯಗೊಳಿಸಿದರು. ಆಗಿನ ಸ್ಥಿತಿ ಹೇಗಿತ್ತೆಂದರೆ ಸ್ವತಃ ಇಂದಿರಾ ಗಾಂಧಿಯವರೇ ಧವನ್ ಅವರನ್ನು 'ನಿಜವಾಗಲೂ ನಿಮ್ಮ ಪ್ರಯೋಗಾಲಯ ಕ್ಷಿಪಣಿ ನಿರ್ಮಾಣದ ಹೊಣೆಯನ್ನು ಹೊರಲು ಸಮರ್ಥವಾಗಿದೆ' ಎಂದು ಹೇಳಿದ್ದರು. ಕಲಾಂ ಸಾಧಿಸಿ ತೋರಿಸಿದರು. ಭಾರತದ ಮೂರೂ ಪಡೆಗಳಿಗೆ ಬಲ ನೀಡಿದರು. ಅವರ ಕಮ್ಮಟದಿಂದ ಆಕಾಶ್, ಪೃಥ್ವಿ, ಅಗ್ನಿ ಇವೇ ಮುಂತಾದ ಕ್ಷಿಪಣಿಗಳು ಚಿಮ್ಮಿದವು. ಇದರ ಪರಿಣಾಮ ಎಷ್ಟಿತ್ತೆಂದರೆ ರಷ್ಯಕ್ಕೆ ಶೀತಲ ಯುದ್ಧ ಕಾಲದಲ್ಲಿ ಬಲವಾದ ಪೈಪೋಟಿ ಕೊಟ್ಟಿದ್ದ ಅಮೆರಿಕ ಭಾರತದ ಈ ಸಾಧನೆಗೆ ಬೆಚ್ಚಿಹೋಯಿತು. ವಿಶೇಷವಾಗಿ ಕಲಾಂ ಅವರು ಅಗ್ನಿ ಕ್ಷಿಪಣಿಯ ನಿರ್ಮಾಣಕ್ಕೆ ಬಳಸಿಕೊಂಡಿದ್ದ ತಂತ್ರಜ್ಞಾನದ ಮಹತ್ವದ ಅರಿವು ಅಮೆರಿಕಕ್ಕೆ ಇತ್ತು. ಅಮೆರಿಕ ನಮ್ಮ ಕ್ಷಿಪಣಿ ತಯಾರಿಕೆಯನ್ನು ತಡೆಯಲು ತರುತ್ತಿದ್ದ ಒತ್ತಡವನ್ನು ಸ್ವತಃ ರಾಜೀವ ಗಾಂಧಿಯವರೇ ಬಹಿರಂಗಗೊಳಿಸಿದ್ದರು. ಈ ಹಂತದಲ್ಲಿ ಬಹು ಮುಖ್ಯವಾದ ಅಂಶ ಕುರಿತು ಎರಡು ಮಾತು ಹೇಳಬೇಕು. ಭಾರತ ಶಾಂತಿಪ್ರಿಯ ದೇಶ, ನಿಜ. ಆದರೆ ನೆರೆಯ ರಾಷ್ಟ್ರಗಳು ವಿಶೇಷವಾಗಿ ಪಾಕಿಸ್ತಾನ, ಗೋರಿ ಕ್ಷಿಪಣಿಯನ್ನು ಉಡಾವಣೆ ಮಾಡಿದ ಮೇಲೆ ಭಾರತ ಕೈಕಟ್ಟಿ ಕುಳಿತುಕೊಳ್ಳುವಂತಿರಲಿಲ್ಲ. ಕಲಾಂ ಮೂಲಕ ಇದಕ್ಕೊಬ್ಬ ಸಮರ್ಥ ನಾಯಕ ದೊರೆತ. ಇಂಥ ಸಂದರ್ಭಗಳಲ್ಲಿ ಮಾಧ್ಯಮಗಳು ಕಲಾಂ ಅವರ ಕ್ಷಿಪಣಿ ತಯಾರಿಕೆ ಕುರಿತು ಅದನ್ನು ಹೇಗೆ ಸಮರ್ಥಿಸಿಕೊಳ್ಳುತ್ತೀರಿ ಎಂದು ಕೇಳಿದಾಗ, ಅವರದ್ದು ಒಂದೇ ಉತ್ತರ– 'ಸಾಮರ್ಥ್ಯ ಸಾಮರ್ಥ್ಯವನ್ನು ಗೌರವಿಸುತ್ತದೆ' ನಿಜ. ಯುದ್ಧ ಯಾರಿಗೂ ಬೇಡ. ಆದರೆ ಅನಿವಾರ್ಯವಾಗಿ ಹೇರಿದಾಗ ತನ್ನ ನೆಲ–ಜಲವನ್ನು ರಕ್ಷಿಸಿಕೊಳ್ಳಲು ಯಾವ ದೇಶ ತಾನೇ ಪ್ರಯತ್ನಿಸುವುದಿಲ್ಲ ? ಇದೂ ಕೂಡ ಕಲಾಂ ಅವರ ಮಾತೇ.

ಅಬ್ದುಲ್ ಕಲಾಂ ಅವರನ್ನು ನಾವು ಭಾರತದ ಕ್ಷಿಪಣಿ ಜನಕ ಎಂಬುದಕ್ಕಷ್ಟೇ ಸೀಮಿತಗೊಳಿಸಿದರೆ ಅದು ಕೂಡ ಅಪರಿಪೂರ್ಣ ವ್ಯಾಖ್ಯೆಯಾದೀತು. ಕಲಾಂ ಅತ್ಯುತ್ತಮ ಮಾನವತಾವಾದಿ. ತಾಯ ನೆಲವನ್ನು ಗಾಢವಾಗಿ ಪ್ರೀತಿಸಿದಾತ. ದೇಶದಾದ್ಯಂತ ಮಕ್ಕಳೊಡನೆ ಬೆರೆತು, ಅವರನ್ನು ಹುರಿದುಂಬಿಸಿದವರು. ಹೀಗಾಗಿಯೇ ಸದಾ ಮಕ್ಕಳಿಗೆ ಅವರು 'ಕಲಾಂ ಮೇಷ್ಟ್ರು'. ಪ್ರಾಯಶಃ ಭಾರತದ ಇತಿಹಾಸದಲ್ಲಿ ರಾಷ್ಟ್ರಪತಿಯೊಬ್ಬರು ಇಷ್ಟೊಂದು ಸಲುಗೆಯಿಂದ ಮಕ್ಕಳೊಡನೆ ಬೆರೆತು, ಸಾರ್ವಜನಿಕರೊಡನೆ ಕುಳಿತು ತಮ್ಮ ಅನುಭವವನ್ನು ಹಂಚಿಕೊಂಡಿದ್ದಿಲ್ಲ. ಕಲಾಂ ಅವರು ನಮ್ಮ ಮಧ್ಯೆ ಇಲ್ಲದಿದ್ದರೂ, ಇಂದಿಗೂ ಅವರು ಸ್ಫೂರ್ತಿಯ ಸೆಲೆ.

**ಟಿ. ಆರ್. ಅನಂತರಾಮು**
ನಂ. ೫೩೪, ೨೦ನೇ ಅಡ್ಡರಸ್ತೆ, ೧೪ನೇ ಮುಖ್ಯರಸ್ತೆ
ಕುಮಾರಸ್ವಾಮಿ ಬಡಾವಣೆ ೧ನೇ ಹಂತ, ಬೆಂಗಳೂರು – ೫೬೦ ೧೧೧

# ಆಚಾರವಿಲ್ಲದ ನಾಲಿಗೆ




ಪಂಚೇಂದ್ರಿಯಗಳಲ್ಲಿ ಒಂದಾದ ನಾಲಿಗೆಯ ಮಹತ್ವವನ್ನು ತಿಳಿಯದವರಾರು ? ನಾಲಿಗೆ ಮಾಡುವ ಎರಡು ಮಹತ್ವದ ಕೆಲಸಗಳು ರುಚಿಗೆ ಮತ್ತು ಅಭಿರುಚಿಗೆ ಸಂಬಂಧಪಟ್ಟಿವೆ. ನಾವು ತಿನ್ನುವ ಆಹಾರ ಸಿಹಿ, ಹುಳಿ, ಖಾರ, ಕಹಿ, ಒಗರು, ಉಪ್ಪು, ಸಪ್ಪೆ ಎಂದು ಗೊತ್ತಾಗುವದೇ ನಾಲಿಗೆಯಿಂದಾಗಿ. 'ಅಧರಕ್ಕೆ ಸಿಹಿ, ಉದರಕ್ಕೆ ಕಹಿ' ಎಂದು ಪ್ರಾಸಕ್ಕಾಗಿ ಅದರ ಶಬ್ದವನ್ನು ಉಪಯೋಗಿಸಿದರೂ ಅದು ನಾಲಿಗೆಗೆ ಸಂಬಂಧಪಟ್ಟ ಉಲ್ಲೇಖ ಎಂಬುದನ್ನು ಗಮನಿಸಬೇಕು. ನಾಲಿಗೆಗೆ ಸಿಹಿ ಅನಿಸಿ, ಮತ್ತೆ ಮತ್ತೆ ತಿನ್ನಬೇಕು ಎಂದು ಸಿಹಿ ಪದಾರ್ಥಗಳನ್ನು ತಿಂದರೆ ಉದರಕ್ಕೆ, ಅಂದರೆ ಹೊಟ್ಟೆಗೆ ಅದು ಹಾನಿಕಾರಕ. ಹಾಗಾಗಿ ಕೇವಲ ನಾಲಿಗೆಗೆ ರುಚಿ ಎನಿಸುತ್ತದೆ ಎಂಬ ಕಾರಣಕ್ಕಾಗಿ ಅತಿ ಹುಳಿ, ಖಾರ, ಸಿಹಿ ಮುಂತಾಗಿ ತಿಂದರೆ ಅದರಿಂದ ದೇಹಕ್ಕೆ ತೊಂದರೆಯೇ ಜಾಸ್ತಿ. ಇದು ರುಚಿಗೆ ಸಂಬಂಧಪಟ್ಟ ನಾಲಿಗೆಯ ಉಪಮೆಯಾದರೆ, ಇನ್ನು ಅಭಿರುಚಿಗೆ ಸಂಬಂಧಪಟ್ಟ ನಾಲಿಗೆಯ ಉಪಮೆಯನ್ನು ಗಮನಿಸೋಣ.

ಈ ಪುಟ್ಟ ಅರ್ಥಪೂರ್ಣ ಪುಟ್ಟ ಕತೆ ಕೇಳಿ. ಒಮ್ಮೆ ನಾಲಿಗೆಗೂ, ೩೨ ಹಲ್ಲುಗಳಿಗೂ ಜಗಳವಾಯ್ತು. "ನಾನೇ ಬಲಶಾಲಿ" ಎಂದಿತು ಒಂಟಿ ನಾಲಿಗೆ. ೩೨ ಹಲ್ಲುಗಳಿಗೆ ಬಹಳ ಆಶ್ಚರ್ಯವಾಯ್ತು. "ನಾವು ೩೨ ಜನರು, ಇದು ಒಂದೇ, ನಾವು ಎಷ್ಟು ಗಟ್ಟಿ, ನಾಲಿಗೆ ಎಷ್ಟು ಮೃದು, ಎಷ್ಟು ಸೊಕ್ಕು ಮಾಡುತ್ತದೆ" ಎನ್ನಿಸಿತು. ಹಲ್ಲುಗಳು ಗಟ್ಟಿಯಾಗಿ ಕಚ್ಚಿ ನಾಲಿಗೆಗೆ ಗಾಯ ವಾಗುವಂತೆ ಮಾಡಿದವು. ನಾಲಿಗೆಗೆ ಕೋಪ ನೆತ್ತಿಗೇರಿತು. "ನಿಮಗೆ ಸರಿಯಾಗಿ ಬುದ್ಧಿ ಕಲಿಸುತ್ತೇನೆ" ಎಂದು ಸರಿಯಾದ ಸಂದರ್ಭಕ್ಕಾಗಿ ಕಾಯುತ್ತಿತ್ತು.

ಒಂದು ದಿನ ರಸ್ತೆ ಬದಿ ಜಟ್ಟಿಯೊಬ್ಬ ಹಾದುಹೋಗುತ್ತಿದ್ದ. ನಾಲಿಗೆ ಅವನನ್ನು "ಏ ಜಟ್ಟಿ, ಇಲ್ಲಿ ಬಾರೋ" ಎಂದು ಕರೆಯಿತು. ಜಟ್ಟಿಗೆ ಆಶ್ಚರ್ಯವಾಯ್ತು. ತನ್ನನ್ನು ಇಷ್ಟು ಸಲಿಗೆಯಿಂದ ಕರೆಯುವವರು ಯಾರು ಎಂದು ಅಲಕ್ಷ್ಯದಿಂದ ಮುಂದೆ ಹೋದ. ನಾಲಿಗೆ ಈಗ ಅವಾಚ್ಯ ಶಬ್ದಗಳಿಂದ ಜಟ್ಟಿಯನ್ನು ಕೂಗಿ ಕರೆಯಿತು. ಕಳ್ಳಾ, ಸುಳ್ಳಾ, ಮಳ್ಳಾ... ಹೀಗೆ ಇನ್ನೂ ಆಡಬಾರದ ಮಾತುಗಳಿಂದ ಜಟ್ಟಿಯೊಡನೆ ಜಗಳವಾಡಿತು. ಕೊನೆಗೊಮ್ಮೆ ಜಟ್ಟಿ ಬಂದು ಕೆನ್ನೆಗೆ ಹೊಡೆದ. ಹತ್ತಾರು ಹಲ್ಲುಗಳು ಉದುರಿದವು, ರಕ್ತ ಸುರಿಯಿತು. ನಾಲಿಗೆಯ ತಪ್ಪಿನಿಂದ ಹಲ್ಲುಗಳು ಮುರಿದವು. ಅರ್ಧ ಮುರಿದ ಹಲ್ಲುಗಳು ನೋವಿನಿಂದ "ನಾಲಿಗೆ ಮಹರಾಯಾ ! ತಪ್ಪಾಯ್ತು, ನೀನೇ ಬಲಶಾಲಿ, ಇನ್ನು ಮುಂದೆ ನಿನ್ನ ಜೊತೆ ಜಗಳಕ್ಕೆ ಬರಲಾರೆವು," ಎಂದು ಶರಣು ಹೋದವು. ಈಗ ನಾಲಿಗೆಯ ದುಷ್ಟ ಶಕ್ತಿಯ ಪ್ರಭಾವ ಗೊತ್ತಾಯಿತಲ್ಲವೆ ?

'ಆಚಾರವಿಲ್ಲದ ನಾಲಿಗೆ, ನಿನ್ನ ನೀಚ ಬುದ್ಧಿಯ ಬಿಡು ನಾಲಿಗೆ' ಎಂದು ದಾಸರು ನಾಲಿಗೆಗೆ ಬುದ್ಧಿ ಹೇಳಿದರು. ನಾಲಿಗೆಗೆ ಹೇಳಿದರೋ, ನಾಲಿಗೆಯನ್ನು ಕಂಡಲ್ಲಿ ಹರಿಬಿಡುವ ಮನಸ್ಸುಗಳಿಗೆ, ಮಾನವರಿಗೆ ಬುದ್ಧಿ ಹೇಳಿದರೋ ? ಅಂತೂ ದೇವರು ನಾಲಿಗೆಯ ಮುಖಾಂತರ ಆಹಾರವನ್ನು ಸವಿಯಲು ಮತ್ತು ಮಾತನಾಡುವ ಶಕ್ತಿಯನ್ನು ನೀಡಿದ್ದಾನೆ. ಆದರೆ ವಿವೇಕವಿಲ್ಲದೆ ಅದರ ದುರ್ಬಳಕೆ ಮಾಡಬಾರದಲ್ಲವೆ ? ಜಿಹ್ವಾಚಾಪಲ್ಯದಿಂದ ನಾನಾ ರೋಗಗಳನ್ನು ತಂದುಕೊಳ್ಳಬಾರದೆಂಬ ಎಚ್ಚರಿಕೆ ಇಲ್ಲದೆ ಆಡಬಾರದ ಮಾತುಗಳನ್ನೂ ಆಡಿ ಪರರ ಮನನೋಯಿಸಿ, ನಮ್ಮ ನಾಲಿಗೆಯನ್ನು ಹೊಲಸುಮಾಡಿಕೊಳ್ಳುವದೇಕೆ ? 'ಮಾತು' ಎಂಬ ಅಮೂಲ್ಯ ಶಕ್ತಿಯನ್ನು ಪ್ರಕೃತಿ ನಮಗೆ ದಯಪಾಲಿಸಿದೆ. ಅದನ್ನು ಹಿತವರಿತು – ಮಿತಿಯರಿತು ಉಪಯೋಗಿಸುವಂತೆ ನಮ್ಮ ನಮ್ಮ ನಾಲಿಗೆಗೆ ತರಬೇತಿ ನೀಡಬೇಕಲ್ಲವೆ ?

ಎಲುಬಿಲ್ಲದ ನಾಲಿಗೆ ಹೇಗೆ ಬೇಕಾದರೂ ಹೊರಳುತ್ತದೆ. ನಾವಾಡುವ ಮಾತು ನಮ್ಮ ಸಂಸ್ಕಾರವನ್ನು ಸೂಚಿಸುತ್ತದೆ. ನಾರಾಯಣನ ನಾಮದ ಸಾರಾಮೃತವು ನಾಲಿಗೆ ಮೇಲೆ ಸದಾ ಇರಲಿ ಎಂದು ಬಯಸುವುದರ ಅರ್ಥ, ಒಳ್ಳೆಯ ಮಾತುಗಳೇ ನಾಲಿಗೆಯ ಮೇಲಿರಲಿ ಎನ್ನುವುದರ ತಾತ್ಪರ್ಯ, ಅಷ್ಟೆ.

'ಊಟ ಬಲ್ಲವನಿಗೆ ರೋಗವಿಲ್ಲ, ಮಾತು ಬಲ್ಲವನಿಗೆ ಜಗಳವಿಲ್ಲ' ಎಂಬುದು ಎಷ್ಟು ಸರಳವಾಗಿ ನಾಲಿಗೆಯ ರುಚಿ, ಅಭಿರುಚಿಯ ಬಗ್ಗೆ ಜನಪದರು ಹೇಳಿರುವ ಒಂದು ಸುಂದರ ಗಾದೆ. ಊಟದ ರುಚಿ ಹೇಳುವುದು ನಾಲಿಗೆ, ಮಾತನಾಡುವ ಶಕ್ತಿ ಇರುವುದು ನಾಲಿಗೆಯಿಂದಾಗಿಯೇ !

ನಾಲಿಗೆಯ ಮೇಲೆ ಹತೋಟಿಯಿಲ್ಲದೆ ಸಾರ್ವಜನಿಕ ಜೀವನದಲ್ಲಿ ಏನೇನೋ ಹೇಳಿ ಕಷ್ಟಕ್ಕೆ ಸಿಲುಕಿಕೊಳ್ಳುವ ಮುಖಂಡರನ್ನು ದಿನನಿತ್ಯ ನೋಡುತ್ತೇವೆ. ನಾಲಿಗೆಯ ಮೇಲೆ ನಿಯಂತ್ರಣ ಹೊಂದಿರುವುದು ಸಂಯಮದ ಒಂದು ಲಕ್ಷಣ. ನಾಲಿಗೆ ಮೇಲಿನ ಹಿಡಿತ ನಮ್ಮ ಮನೋನಿಗ್ರಹವನ್ನು ಸೂಚಿಸುತ್ತದೆ.

ನಾಲಿಗೆ ಇರುವುದು ತುಂಬ ಜಾರುವ ಜಾಗದಲ್ಲಿ. ಆದ್ದರಿಂದ ತುಂಬ ಎಚ್ಚರಿಕೆಯಿಂದ ನಾಲಿಗೆಯನ್ನು ಬಳಸಿ ಎಂದು ಹಿರಿಯರು ಹೇಳುತ್ತಾರೆ.

ರಾಷ್ಟ್ರಕವಿ ಜಿ. ಎಸ್. ಶಿವರುದ್ರಪ್ಪ ಹೇಳುವ ಹಾಗೆ, ನಂದನ, ಬಂಧನವೆಲ್ಲವೂ ನಮ್ಮೊಳಗೇ ಇದೆ. ಒಳಗಿನ ತಿಳಿಯನು ಕಲಕದಿದ್ದರೆ ಅಮೃತದ ಸಿಹಿ ನಾಲಿಗೆಗೆ ಇರುತ್ತದೆ.


**ವಿಜಯ ಶ್ರೀಧರ್**
'ಶ್ರೀವಿಜಯ', ೬ನೇ ಅಡ್ಡರಸ್ತೆ, ರಾಜೇಂದ್ರ ನಗರ
ಶಿವಮೊಗ್ಗ – ೫೭೭ ೨೦೪


## ಗಝಲ್

ಜಗತ್ತಿನೆಲ್ಲಾ ಅಡುಗೆಮನೆಯ ಪಾತ್ರೆಯೊಳಗು ಒಂದೊಂದು ತೆರನಾದ ರುಚಿ
ಈ ರುಚಿ ಅಭಿರುಚಿಯ ಸೌಧಕೆಲ್ಲಿದೆ ಉತ್ತರದ ಸದಭಿರುಚಿ ?

ಬಾನು ಬಿಗುಮಾನ ಸಡಿಲಿಸಿ ನೇಸರವ ಕಳುಹಿಸಿದೆ ನಮ್ಮೊಳಗೆ
ಇನ್ನೇನು ಜಗವ ಬೆಳಗುವ ಹೊತ್ತು ಬದುಕ ಬಿಂಬ ಒಳ–ಹೊರಗೆ !

ಯಾವುದರಲ್ಲೋ ಯಾವುದೋ ರೈತ ಬೆಳೆದ ಅಕ್ಕಿಯನ್ನು ನಾನಿಲ್ಲಿ ಉಣ್ಣುತ್ತಿರುವೆ
ಮಾಡಿ ಉಣಬಡಿಸುವ ಮಧ್ಯದಲಿ ಅದೆಷ್ಟು ಬೆವರು ಹರಿಸುವೆ ?

ಹೊತ್ತೇರಿ ಇಳಿದಂತೆ ಎಳೆಕಿರಣಗಳ ಎಡತಾಕಿಸಿಕೊಂಡ ಗರಿಗಳಿಗೆ ಎಲ್ಲಿಲ್ಲದ ಉತ್ಸಾಹ
ಬಾನು ಬಾಗಿ ಪಿಸುಗುಟ್ಟಿದೆ ಈ ಸುಂದರ ಸಂಜೆ ನಿನಗಾಗಿಯೇ ಗೆಳತಿ !

ಅಮೂರ್ತದಲ್ಲೇ ನನ್ನ ಬೆಳೆಯಿಸಿದ ಕೈಗಳೀಗ ಗುಟ್ಟಾಗಿ ಕುಳಿತಿವೆ
ಬೆಳೆದದ್ದೆಲ್ಲಾ ಸಂಗೀತವಾಗಲಿ ಹಾರೈಸುತ್ತಿದೆ ಮುಚ್ಚದ ಕಣ್ಣೆವೆ !


**ಸಂಗೀತ ರವಿರಾಜ್**
ಹೊಸೂರು ಮನೆ, ಬಾಲಂಬಿ ಅಂಚೆ, ಚೆಂಬು ಗ್ರಾಮ
ಮಡಿಕೇರಿ ತಾಲೂಕು, ಕೊಡಗು ಜಿಲ್ಲೆ – ೫೭೧ ೨೩೪

